# LEGAL COLLECTIONS ON PTCL CASES

# PART–I

Deduced from

**SC & HC JUDGEMENTS**

Written and Compiled By

**SRIDHARA BABU. N**

ADVOCATE

TUMKUR

9880339764

SOURCE:–

http://indiankanoon.org

Subscriber of
http://www.manupatrafast.in/Asps/SubscriptionPlans.aspx

(Excellent for law Research)

# ಪಿ.ಟಿ.ಸಿ.ಎಲ್ ಪ್ರಕರಣಗಳ ಕಾನುನು ಸಿದ್ಧಾಂತಗಳ ಸಂಗ್ರಹ

**ಎನ್. ಶ್ರೀಧರ ಬಾಬು**

**ಪರಿವಿಡಿ**

- ಗ್ರಾಂಟ್ ಜಮೀನೆ ಅಥವ ಮೌಲ್ಯಕ್ಕೆ ಕೊಟ್ಟಿರುವುದೇ
- ಗ್ರಾಂಟ್ ಪತ್ರದ ಶರತ್ತಿಗಿಂತ ಅಂದಿನ ಕಾನೂನು ನಿಯಮ ಮುಖ್ಯ
- ಕಲಂ 5 ರಲ್ಲಿ ಕಾಯ್ದೆ ಉಲ್ಲಂಘನೆಯ ಊಹೆಯ ಬಗ್ಗೆ
- ಖರೀದಿದಾರ ಪರಿಶಿಷ್ಟನಾಗಿದ್ದರೂ ಕಾಯ್ದೆ ಅನ್ವಯ
- ಹಿಂದೆ ಗ್ರಾಂಟಿ ಅರ್ಜಿ ವಜಾ ಆಗಿದ್ದರೆ ವಾರಸ್ಸು ಮತ್ತೆ ?
- ಕಾಲಮಿತಿ ಕಾಯ್ದೆ 1963 ಇಲ್ಲಿ ಅನ್ವಯಿಸದು
- ಪರಭಾರೆಗೆ ಸರ್ಕಾರಿ ಅನುಮತಿ ವಿಚಾರದ ಬಗ್ಗೆ
- ಇಂತಹ ಪ್ರಕರಣದಲ್ಲಿ ಉಬಯರೂ ರಾಜಿ ಮಾಡಿಕೊಳ್ಳಬಹುದೆ
- ಕಾಯ್ದೆ ವ್ಯಾಪ್ತಿಯಲ್ಲಿ ಇಲ್ಲದಾಗ ವಿವಾದ ಸಿವಿಲ್ ಕೋರ್ಟ್ಗೆ

**ಅಧ್ಯಾಯ–6– ಸಕಾರಣಬದ್ದ ಅವಧಿ**

- ಸಕಾರಣಬದ್ದ ಅವದಿಯಲ್ಲಿ ಅರ್ಜಿ ಹಾಕದಿದ್ದಲ್ಲಿ ವಜಾ ಮಾಡಿ
- ಸಕಾರಣವನ್ನು ತೋರಿ ವಿಳಂಬವನ್ನು ವಿವರಿಸಬೇಕು
- ಎಲ್ಲಿ ವಿಳಂಬವನ್ನು ಮನ್ನಿಸಲಾಗಿಲ್ಲ
- ಗ್ರಾಂಟಿಗಳಿಗೆ ಇರುವ ಬುನಾದಿಗಳು
- ಸಕಾರಣಬದ್ದ ಅವಧಿ ಬಗ್ಗೆ ಚರ್ಚೆಯಾಗದ ವ್ಯಾಖ್ಯಾನಗಳು
- ಕಾಯ್ದೆ ಜಾರಿಯಲ್ಲಿ ಅನಿಯಂತ್ರತೆ ಸಂವಿಧಾನ ಬದ್ದತೆ

**ಅಧ್ಯಾಯ –7 – "ಪರಿಶಿಷ್ಟ ಜಾತಿ" ಮತ್ತು "ಪರಿಶಿಷ್ಟ ಪಂಗಡ"**

- "ಪರಿಶಿಷ್ಟ ಜಾತಿ" ಮತ್ತು "ಪರಿಶಿಷ್ಟ ಪಂಗಡ" ಯಾರು ?
- ಜಾತಿ/ ಪಂಗಡ ವಿಚಾರದ ವಿವಾದಗಳು
- ಸಂವಿಧಾನ ವಿಧಿ 341 ಮತ್ತು 342 ರ ಬಗ್ಗೆ
- ವಿಧಿ 341 ಮತ್ತು 342 ಸುಪ್ರೀಮ್ ಸಂವಿಧಾನ ಪೀಠ ವ್ಯಾಖ್ಯಾನ
- ಸಂವಿಧಾನ ಪೀಠದ ಸ್ವಷ್ಟನಾ ವ್ಯಾಖ್ಯಾನ
- ದ್ವಿಸದಸ್ಯ ಪೀಠದಿಂದ ವ್ಯಾಖ್ಯಾನ
- ತ್ರಿಸದಸ್ಯ ಪೀಠದಿಂದ ವ್ಯಾಖ್ಯಾನ
- ತಿದ್ದುಪಡಿ ಕಾನೂನು ಜಾರಿಯ ಬಗ್ಗೆ ಮಹತ್ತರ ವ್ಯಾಖ್ಯಾನಗಳು
- ಸುಳ್ಳು ಜಾತಿ ಪತ್ರಕ್ಕೆ ಕಾನೂನಿನಲ್ಲಿ ಇರುವ ಕ್ರಮದ ಮಾರ್ಗ

- ಹಾಗಾದರೆ ಸುಪ್ರೀಮ್ ಕೋರ್ಟ್ ತೀರ್ಪುಗಳ ಪರಿಣಾಮವೇನು
- ಜಾತಿ ಜಾತಿಯ ಪದನಾಮಗಳಲ್ಲೇ ವ್ಯತ್ಯಾಸವಿದೆ ಅದನ್ನು ಗಮನಿಸಬೇಕು
- ಕರ್ನಾಟಕದಲ್ಲಿ ಜಾತಿ ಪಟ್ಟಿಯ ಚರಿತ್ರೆ ಸುಪ್ರೀಮ್ ವಿವರಿಸಿದಂತೆ
- ಹೇಗೆ ಬಸವಲಿಂಗಪ್ಪ ಮತ್ತು ಜಯಣ್ಣ ಪ್ರಕರಣ ಪರ್–ಇನ್ಕ್ಯೂರಿಯಮ್
- ಅಧಿಕೃತ ಪುಸ್ತಕಗಳಲ್ಲೇ ದಾರಿ ತಪ್ಪಿಸುವ ಸುತ್ತೋಲೆ ಮತ್ತು ಆದೇಶಗಳು

**ಅಧ್ಯಾಯ–8 – ಗ್ರಾಂಟ್/ಭೂಮಿ ವಿವಿದತೆಯಲ್ಲಿ ಕಾಯ್ದೆ ಅನ್ವಯತೆ**

- ಗ್ರೋ ಮೋರ್ ಫುಡ್ ಸ್ಕೀಮ್ ನಲ್ಲಿ ಗ್ರಾಂಟ್ ಹೇಗೆ ?
- ಭೂಪರಿವರ್ತನೆ ಮತ್ತು ಗ್ರಾಂಟ್ ಜಮೀನು
- ಗ್ರಾಂಟ್ ಜಮೀನು ಭೂಸ್ವಾಧೀನವಾದಾಗ
- ಭೂಸುದಾರಣೆ ಜಮೀನು ಪಿ.ಟಿ.ಸಿ.ಎಲ್ ವ್ಯಾಪ್ತಿಗೆ ಬರುವುದೆ ?
- ಗ್ರಾಂಟ್ ಜಮೀನು – ಬ್ಯಾಂಕ್ ಆಧಾರ – ಹರಾಜು
- ಗ್ರಾಂಟ್ ಮಾಡಿರುವ ಸೈಟು ಪಿ.ಟಿ.ಸಿ.ಎಲ್ ವ್ಯಾಪ್ತಿಗೆ ಬರುವುದೆ

**ಅಧ್ಯಾಯ–9 – ಕಾಯ್ದೆ ಯಾವ ದಿಕ್ಕಿನತ್ತ ಸಾಗುತ್ತಿದೆ**

**ಅಧ್ಯಾಯ–10 – ಮಾರ್ಗದರ್ಶಿ ನಿಯಮಗಳು**

- ಸರ್ಕಾರ ಆಗಿಂದಾಗ್ಗೆ ನೀಡಿರುವ ಮಾರ್ಗದರ್ಶನಗಳನ್ನು ನೋಡಿ
- ಉನ್ನತ ಕೋರ್ಟ್ ತೀರ್ಪು ಹೇಗೆ ಪರಿಗಣಿಸಬೇಕು
- ಕೋಡ್ 1888 ರಲ್ಲಿ ನಿಯಮಗಳಲ್ಲೇ ಗೊಂದಲ

**ಅನುಭಂದಗಳಲ್ಲಿನ ದಾಖಲಾತಿ ಮಾಹಿತಿ ಬಗ್ಗೆ**

**ಅನುಭಂದ–1**

- 1890 ರಿಂದಲೇ ಪ್ರಾರಂಬವಾದ ನಿಯಮಗಳು

**ಅನುಭಂದ–2**

- 01–11–1934 ರವರೆಗೆ ಇದ್ದ ಗ್ರಾಂಟ್ ನಿಯಮದ ಸಂಗ್ರಹ

**ಅನುಭಂದ–3**

- ಏಪ್ರಿಲ್ 1956 ರವರೆಗೆ ಇದ್ದ ಗ್ರಾಂಟ್ ನಿಯಮದ ಸಂಗ್ರಹ

**ಅನುಭಂದ–4**

- ಜಿ.ಪಿ.ಎ ನೀಡುವುದು ಲೀಸ್ ನೀಡಿದಂತೆ ಎಂಬ ವಿವರಣೆ ಈ ಸರ್ಕಾರಿ ಸರ್ಕ್ಯುಲರ್ ನಲ್ಲಿ ಇದೆ.

**ಅನುಭಂದ–5**

- 01–01–1956 ರಿಂದ ಆಗಿರುವ ಗ್ರಾಂಟ್ ಮಾಹಿತಿ ಕಲೆಹಾಕುವಂತೆ ಆದೇಶ

**ಅನುಭಂದ–6**

- ಪಿ.ಟಿ.ಸಿ.ಎಲ್ ಜಮೀನು ಪರಭಾರೆಗೆ ಪ್ರಸ್ತಾವನೆ ಸುತ್ತ.

**ಅನುಭಂದ–7**

- ಕಾಲಮಿತಿಯಲ್ಲಿ ಕ್ರಮ ತೆಗೆದುಕೊಳ್ಳಲು 1998 ರಲ್ಲೇ ಸೂಚನೆ

**ಅನುಭಂದ –8**

- ಸೂಕ್ತವಿಚಾರಣೆಗೆ 1983 ರಲ್ಲೇ ಸೂಚನೆ ನೀಡಲಾಗಿದೆ

**ಅನುಭಂದ–9**

- ವಾರ್ಷಿಕವಾಗಿ ಗ್ರಾಮದಲ್ಲಿ ನಡೆಯುವ ಲೆಕ್ಕ ಪರಿಶೊಧನೆಯಲ್ಲಿ ದರ್ಖಾಸ್ತು ಜಮೀನು ಗ್ರಾಂಟಿ ಬಳಿಯಲ್ಲೇ ಇದೆಯೇ ಎಂದು ಪರೀಕ್ಷಿಸುವ ಕರ್ತವ್ಯ 1971 ರಲ್ಲೇ ತಿಳಿ ಹೇಳಲಾಗಿದೆ.

**ಅನುಭಂದ–10**

- ದರ್ಖಾಸ್ತ್ ಜಮೀನುಗಳ ಬಗ್ಗೆ ತನಿಖೆ ಮಾಡಿ ಭೂಮಿಗಳನ್ನು ಗುರುತಿಸುವಂತೆ ಲಿಸ್ಟ್ ತಯಾರಿಸುವಂತೆ 1979 ರಲ್ಲೇ ಆದೇಶಿಸಲಾಗಿದೆ

**ಅನುಭಂದ–11**

- ಕ್ರಿಮಿನಲ್ ಪ್ರಕರಣ ನೊಂದಾಯಿಸಲು ಗ್ರಾಂಟಿ ಪರಿಶಿಷ್ಟರಿಗೆ ಅವಕಾಶವಿದೆ

**ಅನುಭಂದ–12**

- ಗ್ರಾಂಟ್ ಸರ್ಟಿಫಿಕೇಟ್ ವಿವಿದತೆಗಳು 1930 ರಿಂದ

**ಅನುಭಂದ–13**

**ಮೈಸೂರು ಲ್ಯಾಂಡ್ ರೆವಿನ್ಯೂ ಮ್ಯಾನುಯಲ್ ಭಾಗಗಳು**

- ಅಧಿಕಾರಿಗಳು ತಮ್ಮ ಜಮಾಬಂದಿ ಕಾರ್ಯದಲ್ಲಿ ದಲಿತರ ಬಗ್ಗೆ ಕಾಳಜಿ ವಹಿಸಲು 1929 ರಲ್ಲೇ ಸೂಚನೆ, – ಪ್ರತ್ಯೇಕ ಡಿಪ್ರೆಸ್ಡ್ ಕ್ಲಾಸ್ ದರ್ಖಾಸ್ತ್ ರಿಜಿಸ್ಟರ್ ನಿರ್ವಹಿಸಲು ಸೂಚನೆ, – ದರ್ಖಾಸ್ತ್ ನಿರ್ವಹಣೆಯ ರೀತಿ ಮಾರ್ಗದರ್ಶನಗಳು, ದರ್ಖಾಸ್ತ್ ಮಾರಾಟಗಳ ಬಗ್ಗೆ ಸರ್ಕಾರಿ ಆದೇಶಗಳು, – ಅಪ್ಸೆಟ್ ಪ್ರೈಸ್ ಬಗ್ಗೆ ಮಾರ್ಗದರ್ಶನಗಳು, ಅಪ್ಸೆಟ್ ದರದ ಬಗ್ಗೆ 1962 ರ ಸರ್ಕ್ಯುಲರ್, – ಹೆಚ್ಚು ಆಹಾರ ಬೆಳೆಯುವ ಬಗ್ಗೆ ಭೂ ಮಂಜೂರಾತಿಗಳು, – ದರ್ಖಾಸ್ತ್ ಮಾರಾಟಗಳು, – 1913

ರಲ್ಲಿ ಇದ್ದ ಸರ್ಕಾರಿ ಆದೇಶದಂತೆ ಸಾಗುವಳಿ ಚೀಟಿ ಪಡೆದು ಒಂದು ವರ್ಷಕ್ಕೆ ಮೇಲ್ಪಟ್ಟು ಸ್ವಾಧೀನದಲ್ಲಿರುವವರ ಸಾಗುವಳಿ ಚೀಟಿ ರದ್ದು ಮಾಡಲು ಬರುವುದಿಲ್ಲ., – ಇಂಡೆಕ್ಸ್ ಆಫ್ ಲ್ಯಾಂಡ್ಸ್ ನಮೂನೆ 5 ಮತ್ತು 6 ಮಹತ್ವ

**ಅನುಭಂದ–14**

- ಅಂದಿನ ಜಮೀನು ವಿಚಾರದ ಸರ್ಕಾರಿ ಶುಲ್ಕ 1953 ಕ್ಕೆ ಮುಂಚೆ ಮತ್ತು ನಂತರ

**ಅನುಭಂದ – 15**

- ಪಿ.ಟಿ.ಸಿ.ಎಲ್ ನಿಯಮಗಳು ಆಂಗ್ಲ ಯತಾವತ್ತು

**ಅನುಭಂದ–16**

- ಗ್ರಾಮಸೇವೆ ವಿವರ

**ಅನುಭಂದ–17**

- ಬಗರ್ ಹುಕುಂ ಸಾಗುವಳಿ ಬಗ್ಗೆ ಪ್ರಾಚೀನ ನಿಯಮಗಳು

**ಅನುಭಂದ–18**

- ಪ್ರಾಚೀನ ದರ್ಖಾಸ್ತ್ ನಿಯಮಗಳು

**ಅನುಭಂದ–19**

- ಇನಾಂ ಬಗ್ಗೆ ಹಳೇ ನಿಯಮಗಳು

**ಅನುಭಂದ–20**

- ಸುಳ್ಳು ಜಾತಿ ಪ್ರಮಾಣ ಪತ್ರ ನೀಡುತ್ತಿರುವ ಬಗ್ಗೆ ಎಚ್ಚರಿಕೆ ಸರ್ಕ್ಯುಲರ್

**ಅನುಭಂದ–21**

- ಸಂವಿಧಾನ ರೀತ್ಯ 1950 ರಲ್ಲಿ ಪ್ರಕಟವಾದ ಪರಿಶಿಷ್ಟ ಜಾತಿ ಪಟ್ಟಿ

**ಅನುಭಂದ–22**

- ಸಂವಿಧಾನ ರೀತ್ಯ 1950 ರಲ್ಲಿ ಪ್ರಕಟವಾದ ಪರಿಶಿಷ್ಟ ಪಂಗಡ ಪಟ್ಟಿ
- 1951 ರಲ್ಲಿ ಕೂರ್ಗ್ ಎಸ್.ಟಿ. ಪಟ್ಟಿ

**ಅನುಭಂದ–23**

- 1956 ರಲ್ಲಿ ಬದಲಾಯಿಸಿದ ಎಸ್.ಸಿ/ ಎಸ್.ಟಿ ಪಟ್ಟಿ

**ಅನುಭಂದ–24**

- 1976 ರಲ್ಲಿ ಬದಲಾಯಿಸಿದ ಎಸ್.ಸಿ/ ಎಸ್.ಟಿ ಪಟ್ಟಿ

**ಅನುಭಂದ–25**

- 1991 ರಲ್ಲಿ ಬದಲಾಯಿಸಿದ ಎಸ್.ಟಿ ಪಟ್ಟಿ

**ಅನುಭಂದ-26**

- 2002 ರಲ್ಲಿ ಬದಲಾಯಿಸಿದ ಎಸ್.ಟಿ ಪಟ್ಟಿ

**ಅನುಭಂದ-27**

- 2002 ರಲ್ಲಿ ಬದಲಾಯಿಸಿದ ಎಸ್.ಸಿ ಪಟ್ಟಿ

**ಅನುಭಂದ-28**

- 2012 ರಲ್ಲಿ ಬದಲಾಯಿಸಿದ ಎಸ್.ಟಿ ಪಟ್ಟಿ

**ಅನುಭಂದ-29**

- 2015 ರಲ್ಲಿ ಬದಲಾಯಿಸಿದ ಎಸ್.ಸಿ ಪಟ್ಟಿ

**ಅನುಭಂದ-31:-**

- ಎಸ್.ಟಿ ವರ್ಗಗಳನ್ನು ಸಮಾನಾಂತರವಾಗಿ ಸೇರಿಸಲು ಪ್ರಸ್ತಾವನೆ ಇದೆ

**ಅನುಭಂದ-32:-**

- ಇತರೆ ಬೋವಿ ಸಮುದಾಯ ಇನ್ನೂ ಓ.ಬಿ.ಸಿ ಅಲ್ಲೇ ಇದ್ದಾರೆ

**ಅನುಭಂದ-33:-**

- ಅನುಮತಿಯ ನಿರೀಕ್ಷೆಯಲ್ಲಿ ಜಾತಿ ಪತ್ರ ನೀಡಿದ್ದಾರೆ

**ಅನುಭಂದ-34:-**

- 1956 ರಲ್ಲಿ ಎಸ್.ಟಿ ಅಲ್ಲದವರು 1976 ರ ನಂತರ ಆ ಪಟ್ಟಿಗೆ ಸೇರಲ್ಲ

**ಅನುಭಂದ-35:-**

- 1987 ರಲ್ಲೇ ಜಾತಿ ಪ್ರಮಾಣಪತ್ರ ಕೊಡುವಲ್ಲಿನ ನ್ಯೂನತೆಗಳು

**ಅನುಭಂದ-36:-**

- ವಿಚಾರಣೆಯ ಹೇಗೆ ನಡೆಸಬೇಕು ಎಂಬ ಬಗ್ಗೆ ಸರ್ಕ್ಯುಲರ್

## ಲೇಖಕರ ನುಡಿ

ಕಾನೂನು ಯಾವತ್ತೂ ಸ್ಪಷ್ಟವಾಗಿರಬೇಕು, ಆದರೆ ಯಾಕೆ ಕಾನೂನು ರಚಿಸುವವರು ಅದನ್ನು ಸ್ಪಷ್ಟ ಭಾಷೆಯಲ್ಲಿ ಬರೆಯದೆ ದ್ವಂದ್ವ ವ್ಯಾಖ್ಯಾನದ ಗೂಡಾಗಿಸುತ್ತಿದ್ದಾರೆ, ಅವರೇ ಹೇಳಬೇಕು. ಇಂದು ಜ್ಞಾನಾರ್ಜನೆಗೆ ಹೆಚ್ಚಿನ ಮಹತ್ವ ನೀಡಬೇಕಾದ ಅನೇಕ ವೃತ್ತಿಗಳು ಬರೀ ನಿಂತ ನೀರಾದ ಜ್ಞಾನದಿಂದ ಹಾದಿ ತಪ್ಪಿ ಹೆಚ್ಚು ವಾಣಿಜ್ಯ ಉದ್ದೇಶಗಳಲ್ಲಿ, ಇಂದು ಬಲಿಯಾಗುತ್ತಿರುವುದು ಅಮಾಯಕರು ಮಾತ್ರ. ಒಂದು ಕಡೆ ಈ ಕಾಯ್ದೆಯನ್ನು ಬಳಸಿಕೊಂಡು ಅನೇಕ ಕಡೆಯಲ್ಲಿ ಕಾನೂನು ಜಾರಿ ಮಾಡುವುದಾಗಿ ಬೆದರಿಸುವ ಅಸ್ತ್ರ ದೊಂದಿಗೆ ಇಡೀ ಕಂದಾಯ ಇಲಾಖೆಯಲ್ಲಿ ಭ್ರಷ್ಟತೆ ಹೆಚ್ಚಾಗಿರುವಾಗ. ಇಂದು ಅನೇಕ ಸಂಘಟಣೆಗಳ ಹೆಸರಿನಲ್ಲಿ ಕಂದಾಯ ಇಲಾಖೆಯ ನ್ಯಾಯಪ್ರಧಾನ ಮಾಡುವ ಅಧಿಕಾರಿಗಳ ಮೇಲೆ ಕೆಲವು ಸಂಘಟಣೆಗಳು ದರಣಿ ಮಾಡುವುದಾಗಿ ಬೆದರಿಕೆ ಹಾಕಿ ದಾಖಲೆ ಬರೆಸಿಕೊಳ್ಳುವುದು, ತೀರ್ಪು ಬರೆಸಿಕೊಳ್ಳುವುದು, ಅಟ್ರಾಸಿಟಿ ಕೇಸ್ ಹಾಕಿಸುವುದಾಗಿ ಬೆದರಿಸುವುದು ನಡೆಯುತ್ತಿದೆ. ಅದೊಂದು ವಿಧಾನವಾಗಿ ಅಸಾಹಯಕತೆ ತೋರುತ್ತ, ಎಷ್ಟೋ ಅಧಿಕಾರಿಗಳು ಹೇಳಿಕೊಳ್ಳಲಾಗದೆ, ವಿಚಾರಣಾ ವಿಧಾನವನ್ನೇ ಏಕಪಕ್ಷೀಯವಾಗಿ ಮಾಡಿರುವ ಉದಾಹರಣೆಗಳು ದೊರೆಯುತ್ತವೆ. ಇಂದು ಈ ವಿಚಾರದಲ್ಲಿ ಅನೇಕ ಹಳೇ ನಿಯಮಗಳನ್ನು ಮರು ಪ್ರಕಟಿಸುವ ಹೊಣೆಯಿಂದ ಸರ್ಕಾರವೂ ಹಿಂಜರಿದಿದೆ. ಹೈಕೋರ್ಟಿನ ಸ್ಪಷ್ಟ ನಿರ್ದೇಶನದ ನಂತರವೂ ಈ ಬಗ್ಗೆ ನಿರ್ಲಕ್ಷತೆ ತೋರಿದೆ. ಈ ಎಲ್ಲಾ ವಿಚಾರಗಳಿಗೆ ತೆರೆಯೆಳೆಯಲು ಸಹಾಯವಾಗುವಂತೆ ನನ್ನ ಕೈಲಾದಷ್ಟು ಮಾಹಿತಿಯ ಅನೇಕ ವಿಚಾರಗಳನ್ನು ಅನ್ಲೈನ್ ನಲ್ಲಿ ನನ್ನ ಬ್ಲಾಗ್ ಗಳಲ್ಲಿ ಹಾಕಿದೆನಾದರೂ ಕನ್ನಡದಲ್ಲಿ ಈ ಬಗ್ಗೆ ಪುಸ್ತಕವನ್ನು ರಚಿಸಿ ಹೊರಹಾಕಿದರೆ, ತಮ್ಮ ಕೇಸು ಕಾನೂನು ವ್ಯಾಪ್ತಿಯಲ್ಲಿ ಎಷ್ಟು ಸುರಕ್ಷಿತ ಅಸುರಕ್ಷಿತ ಎಂದು ಗ್ರಾಂಟಿ ಕುಟುಂಬವಾಗಲೀ, ಖರೀದಿದಾರನಾಗಲೀ ವ್ಯರ್ಥ ವ್ಯಾಜ್ಯ ವೆಚ್ಚ ತಪ್ಪಿಸಿಕೊಂಡು, ಶಾಂತಿ ನೆಮ್ಮದಿಯ ಪರ್ಯಾಯ ಪ್ರಯೋಜನಾಕಾರಿ ಕೆಲಸದಲ್ಲಿ ನಿರತರಾಗಲೀ ಎಂಬ ಸದುದ್ದೇಶವೇ ಈ ನನ್ನ ಬರವಣಿಗೆಯ ಉದ್ದೇಶವಾಗಿದೆ.

ವಕೀಲರಾಗಿ ನಮ್ಮಲ್ಲಿ ಅಧ್ಯಯನಕ್ಕೆ ಕೊನೆಯಿಲ್ಲ. ನಿರಂತರ ಅಧ್ಯಯನವೇ ನಮ್ಮ ವೃತ್ತಿ ಬದುಕು. ಇಂತಹ ಅಧ್ಯಯನ ಶೀಲತೆಯಿಂದಲೇ ನಾವು ನಮ್ಮ ಕಕ್ಷಿದಾರರಿಗೆ ನ್ಯಾಯ ಒದಗಿಸಲು ಸಾಧ್ಯ. ನಮ್ಮಲ್ಲಿ ಅಧ್ಯಯನಕ್ಕೆ ಸಂಪನ್ಮೂಲವೇ ಕೊರತೆ ಇದೆ. ಎಲ್ಲಿಯವರೆಗೆ ಈರ್ಷಾ ಮನೋಭಾವ ಇದೆ ಎಂದರೆ, ಹೆಚ್ಚು ತಿಳಿದವರು ಎಂದರೆ ಎಲ್ಲಿ ನಮಗೆ ಮುಳ್ಳಾಗುವರೋ ಎಂದು ಅವರ ಬಗ್ಗೆ ಸುಳ್ಳು ಗಾಸಿಫ್ ಹಬ್ಬಿಸಿ ಅವರನ್ನು ಮೂಲೆಗುಂಪಾಗಿಸುವವರೇ ಹೆಚ್ಚು. ಇಂದು ವಕೀಲರು ತಮ್ಮ ಬಿಡುವಿನ ವೇಳೆಯನ್ನು ಲೈಬ್ರರಿಯಲ್ಲೋ ತಮ್ಮ ಕಚೇರಿಯಲ್ಲೋ ಅಧ್ಯಯನ ಶೀಲರಾಗಿ ವೃತ್ತಿ ನಡೆಸಬೇಕು. ಹೀಗೆ ಹೇಳಿದಾಗ ನಿಮಗೆ ಜೀವನ ನಡೆಸೋ ಕಲೆ ಗೊತ್ತಿಲ್ಲ, ನಾವು ಸದಾ ಕೋರ್ಟ್ ಬಳಿ ನಮ್ಮ ಕಕ್ಷಿದಾರರಿಗೆ ಸಿಗುವ ರೀತಿಯಲ್ಲಿ ಲಭ್ಯವಿರಬೇಕು, ಬೆಳಗ್ಗೆಯಿಂದ ಸಂಜೆವರೆಗೆ ಕೋರ್ಟ್ ಕಾರಿಡಾರ್ ನಲ್ಲಿ ಕಾಲ ಕಳೆಯಬೇಕು, ನಾವು ನಮ್ಮ ಡ್ರೆಸ್ ನಲ್ಲಿ ಇನ್ನೂ ವಕೀಲರಾಗಿ ಪ್ರಾಕ್ಟೀಸ್ ನಲ್ಲಿ ಇದ್ದೇವೆ ಎಂದು ತೋರಿಸಿದರೆ ತಾನೆ ನಮ್ಮಲ್ಲಿ ಕಕ್ಷಿದಾರರು ಹುಡುಕಿ ಬರುವುದು, ಎಂದು ವಾದಿಸುವವರೆ ಹೆಚ್ಚು. ಇಂದಿನ ಮೊಬೈಲ್ ಯುಗದಲ್ಲಿ ಮತ್ತು ಇಂದಿನ ಅನ್ಲೈನ್ ಯುಗದಲ್ಲಿ ಅಂತಹ ಹಳೇ ಕಾಲದ ಕಂದಾಚಾರಗಳಲ್ಲಿ ಎಷ್ಟು ಮಾತ್ರ ತಿರುಳಿದೆ ಅಂತಹ ಪ್ರಾಕ್ಟೀಸ್ ನಿರತರೇ ಹೇಳಬೇಕು. ನಮ್ಮಲ್ಲಿ ಪ್ರತಿಯೊಂದು ಪ್ರಕರಣದ ಹಂತವೂ ಸಂಶೋಧನಾತ್ಮಕ ಅಧ್ಯಯನಕ್ಕೆ ಬಾಗಿಲು ತೆರೆಯುವಂತಹದ್ದು. ವೈದ್ಯನಲ್ಲಿ ಅಂತಹ ಸಂಶೋಧನಾತ್ಮಕತೆ ಇಲ್ಲವಾದರೆ ರೋಗಿಯೊಬ್ಬ ತೊಂದರೆಗೆ ಒಳಗಾದಾನು, ವಕೀಲರಲ್ಲಿ ಅಂತಹ ಸಂಶೋಧನಾತ್ಮಕತೆ ಮರೆಯಾದಲ್ಲಿ ಕಕ್ಷಿದಾರನ ಇಡೀ ಕುಟುಂಬವೇ ಸಂಕಷ್ಟಕ್ಕೆ ಈಡಾಗುತ್ತದೆ ಎಂಬುದನ್ನು ನಾವು ಮರೆಯಬಾರದು. ಇನ್ನು ಸರ್ಕಾರದ ಮಟ್ಟದಲ್ಲಿ ಕೆಲವು ಅಧಿಕಾರಿಗಳು ಪ್ರಾಮಾಣಿಕ ಆಡಳಿತಕ್ಕೆ ಸಹಾಯವಾಗಲು ಅನೇಕ ನೇರ ಮಾಹಿತಿಯನ್ನು ಪಾರದರ್ಶಕವಾಗಿ ಸರ್ಕಾರಿ ವೆಬ್ ತಾಣದಲ್ಲಿ ಹಾಕುತ್ತಾರೆ. ಮತ್ತೆ ಇನ್ನಾರೋ ಸಂಕುಚಿತ ಮನೋಭಾವದವರು ಆಡಳಿತದ ಚುಕ್ಕಾಣಿ ಹಿಡಿದಾಗ ಅಂತಹ ಮಾಹಿತಿಯನ್ನು ಲಭ್ಯವಾಗದಂತೆ ನೋಡಿಕೊಳ್ಳುತ್ತಾರೆ. ಜನ ಎಲ್ಲಾ

ಬುದ್ಧಿವಂತರಾದರೆ ನಮಗೇನು ಲಾಭ, ನಮ್ಮನ್ನು ಪ್ರಶ್ನಿಸಿದರೆ ಹೇಗೆ ಎಂಬ ಮನೋಭಾವದಲ್ಲಿ ಅಜ್ಞಾನವನ್ನು ಜನರಲ್ಲಿ ಮೂಡಿಸುವ ಹಂಬಲದವರೂ ಈಗಲೂ ಇದ್ದಾರೆ. ಮೈಸೂರು ಲ್ಯಾಂಡ್ ರೆವಿನ್ಯೂ ಮ್ಯಾನ್ಯುಯಲ್ ಎಂಬ ಬಹು ಪ್ರಾಚೀನ ಗ್ರಂಥವೊಂದು ಅನೇಕ ಕಂದಾಯ ಇಲಾಖೆಯ ವ್ಯಾಜ್ಯಗಳಲ್ಲಿ ಮಾರ್ಗದರ್ಶಕವಾಗಿದೆ. ಇದನ್ನು ವ್ಯವಸ್ಥಿತವಾಗಿ ಇಲ್ಲವಾಗಿಸಿದ ಕೈ ಯಾವುದು, ಅದು ಏಕೆ ಎಲ್ಲಿಯೂ ಲಭ್ಯವಿಲ್ಲ. ಅಂತಹ ಮಾಹಿತಿ ಒಳಗೊಂಡ ಪುಸ್ತಕ 1967 ರಲ್ಲೇ ಪ್ರಕಟಗೊಳಿಸುವ ಬುದ್ಧಿವಂತರು ಇದ್ದಾಗ ಇಂದು ಬೆಳೆದಿರುವ ತಂತ್ರಜ್ಞಾನದಲ್ಲಿ ಏಕೆ ಸಾಧ್ಯವಾಗಿಲ್ಲ ಎಂಬ ಅಲೋಚನೆ, ಇದರಲ್ಲಿ ಶೋಷಿತ ವರ್ಗವನ್ನು ಶೋಷಿತವರ್ಗವಾಗೇ ಉಳಿಸುವವರ ಸಂಚು ಇರುವುದು ಅನುಮಾನಕ್ಕೆ ಎಡೆ ಮಾಡುತ್ತದೆ. ಶೋಷಿತವರ್ಗ ಇರುವವರೆಗೆ ಅವರ ಪರವಾಗಿ ಮೇಲ್ನೋಟಕ್ಕೆ ಹೋರಾಟ ಮಾಡುತ್ತ ಹೊಟ್ಟೆ ತುಂಬಿಸಿಕೊಳ್ಳುವ ಮಧ್ಯವರ್ತಿ ಸಮೂಹ ಈ ರೀತಿಯ ಕೃತ್ಯದಲ್ಲಿ ತೊಡಗಿರುವುದು ಒಂದು ಶೋಚನೀಯ ಸಂಗತಿಯಾಗಿದ್ದು, ಇದನ್ನು ತೊಡೆದು ಹಾಕಲು ಮಾತೃ ಭಾಷೆಯಲ್ಲಿ ಕಾನೂನು ಬಗ್ಗೆ ಅರಿವು ಮೂಡಿಸುವುದು ಹೆಚ್ಚಿನ ಅವಶ್ಯಕತೆ ಇರುತ್ತದೆ ಎಂಬ ಒತ್ತಾಸೆಯಲ್ಲಿ ಈ ಒಂದು ಸಣ್ಣ ಪ್ರಯತ್ನವನ್ನು ಮಾಡಿದ್ದೇನೆ.

ಇಂತಹ ಪ್ರಯತ್ನವನ್ನು ವ್ಯರ್ಥ ಮಾಡಲು ಹಲವಾರು ಜನರು ಪ್ರಕಾಶಕರ ಮೇಲೆ ಒತ್ತಡ ತಂದು ನನ್ನನ್ನು ತುಳಿಯಲು ಪ್ರಯತ್ನ ಪಟ್ಟರು ಎಂಬ ವಿಚಾರ ತಿಳಿದು ಅನ್ಲೈನ್ ನಲ್ಲಿ ಪ್ರಕಟಿಸುತ್ತಿದ್ದೇನೆ. ತಿಳಿದದ್ದನ್ನು ಹಂಚಲು ಇಂದು ಪುಸ್ತಕ ಬೇಕಾಗೇ ಇಲ್ಲ ಎನ್ನುವುದು ಮರೆತಿದ್ದಾರೆ, ಇದನ್ನು ಓದಿ ಹೆಚ್ಚಿನ ರೀತಿಯಲ್ಲಿ ಈ ಮಾಹಿತಿ ಇತರರಿಗೆ ತಿಳಿಯುವಂತೆ ಹಂಚಿಕೊಳ್ಳಿ.

**ಶ್ರೀಧರ ಬಾಬು. ಎನ್**

ವಕೀಲರು, ತುಮಕೂರು

https://sridharababu.blogspot.com/

sridharababu1234@gmail.com

# ಅಧ್ಯಾಯ–1

## ಈ ಕಾನೂನು ಬಗ್ಗೆ ಪರಿಚಯ

ಕಾನೂನು ಮಹತ್ತರ ಉದ್ದೇಶಗಳಿಗೆ ಜಾರಿಯಾಗುತ್ತದೆ. ಅದರ ಸದ್ಬಳಕೆಯು ನಡೆಯಬೇಕಾದ್ದು, ಸರ್ಕಾರದ ಮತ್ತು ಅಧಿಕಾರಿಗಳ ಪ್ರಾಮಾಣಿಕತೆಯಿಂದ ಎಂಬುದು ಪ್ರಬುದ್ಧರ ಅನಿಸಿಕೆಯಾಗಿರುವುದರಲ್ಲಿ ಸಂದೇಹವಿಲ್ಲ. ಆದರೆ ಅಧಿಕಾರಿಗಳು ಕಾನೂನು ಜಾರಿ ಮಾಡದೆ ಇದ್ದರೆ ಏನಂತೆ ಅದರ ಸದುಪಯೋಗ ನಾವು ಪಡೆಯೋಣ ಎಂದು ಅನೇಕ ಜಿಲ್ಲೆಗಳಲ್ಲಿ ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡಗಳ ಜನರ ಪರವಾಗಿ ಖಾಸಗಿ ಕಾನೂನು ಸಮರ ನಡೆಯುತ್ತಿರುವುದರ ಹಿನ್ನೆಲೆಯಲ್ಲಿ ಕಾನೂನು ಜಾರಿಗೆ ಸರ್ಕಾರಗಳು ಏಕೆ ತಾವಾಗೆ ಮುಂದಾಗಲಿಲ್ಲ ಎಂಬ ಚಿಂತನೆ ಮೂಡುತ್ತದೆ. ಇದಕ್ಕೆ ಅಧಿಕಾರಿಗಳು ತೋರಿರುವ ಅಸಡ್ಡೆ ಕುರುಡುತನವೋ ಅಥವ ಜಾಣ ಕುರುಡುತನವೋ ತಿಳಿಯದಾಗಿದೆ. ಆದರೆ ಅಂತಹ ಕಾನೂನು ಯಾವುದು? ನಮ್ಮಲ್ಲಿ ಅದರ ಬಗ್ಗೆ ಯಾವ ರೀತಿಯ ಪರಿಕಲ್ಪನೆ ಇದೆ ಎಂಬುದನ್ನು ಅರಿಯಲು ಮೊದಲಿಗೆ ಅದನ್ನು ಸರಿಯಾಗಿ ಅರ್ಥೈಸಿಕೊಳ್ಳಬೇಕಿರುತ್ತದೆ. ವಿಮರ್ಶಾತ್ಮಕ ಅರಿವು ಮೂಡಿಸಿಕೊಳ್ಳುವುದು ಅವಶ್ಯವಿರುತ್ತದೆ. ಕರ್ನಾಟಕ ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡಗಳ ಕೆಲವು ಸ್ವತ್ತು ಪರಭಾರೆ ನಿಷೇದ ಕಾಯ್ದೆ 1978 (ಪಿ.ಟಿ.ಸಿ.ಎಲ್. ಕಾಯ್ದೆ) ವಿಚಾರವಾಗಿ ಅನೇಕ ಕೇಸುಗಳು ರಾಜ್ಯದಾದ್ಯಂತ ನೊಂದಾವಣಿಯಾಗಿ ಅನೇಕರು ಜಮೀನು ಕಳೆದುಕೊಳ್ಳಬೇಕಾದ ಪರಿಸ್ಥಿತಿ ಬಂದಿದೆ. ಕೆಲವು ವಿಪರ್ಯಾಸವೇನೆಂದರೆ ಕೆಲವರು ಕಾನೂನು ತಜ್ಞರ ಅಭಿಪ್ರಾಯವನ್ನು ಪಡೆದು ಕೊಂಡಿರುತ್ತಾರೆ. ಅಲ್ಲಿಯೂ ಪಜೀತಿಗಳಾಗಿವೆ, ಇವೆಲ್ಲವುದಕ್ಕೆ ಮೂಲ ಕಾರಣ ಅನೇಕರಲ್ಲಿ ಈಗಲೂ ದ್ವಂದ್ವಗಳು, ಗೊಂದಲಕಾರಿ ತಪ್ಪು ಕಲ್ಪನೆಗಳು ಮತ್ತು ತಪ್ಪು ಅಂಶಗಳು ಇರುವುದು, ಕಾನೂನನ್ನು ಸರಿಯಾಗಿ ಅರ್ಥೈಸದೆ ಎಡವಿರುವುದು ಮುಖ್ಯವಾಗಿರುತ್ತದೆ. ಸದರಿ ಪಿ.ಟಿ.ಸಿ.ಎಲ್ ವ್ಯಾಪ್ತಿಗೆ ಯಾವ ಜಮೀನು ಬರುವುದು ಎಂದು ನಿರ್ದರಿಸಬೇಕಾದರೆ, ಸದರಿ ಜಮೀನಿನ ಮೂಲ ಮಾಲೀಕರು ಯಾರು ಎಂದು ಪರಿಶೀಲಿಸಬೇಕಿರುತ್ತದೆ. ಮೂಲದಲ್ಲಿ ಸದರಿ

ಜಮೀನು ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡದವರಿಗೆ ಭೂ ಮಂಜೂರು ಆಗಿರುವ ಜಮೀನು ಆಗಿರಬೇಕಿರುತ್ತದೆ. ಸರ್ಕಾರದಿಂದ ಮಂಜೂರಾತಿಯಾಗಿಲ್ಲದ ಜಮೀನು ಪಿ.ಟಿ.ಸಿ.ಎಲ್ ವ್ಯಾಪ್ತಿಗೆ ಬರುವುದಿಲ್ಲ. ಪರಿಶಿಷ್ಟರು ಇತರರಿಂದ ಗ್ರಾಂಟ್ ಅಲ್ಲದ ಜಮೀನನ್ನು ಕೊಂಡುಕೊಂಡು ಅನುಭವಿಸುತ್ತಿರುವ ಜಮೀನುಗಳಿಗೆ ಪಿ.ಟಿ.ಸಿ.ಎಲ್ ಕಾಯ್ದೆ ಅನ್ವಯಿಸುವುದಿಲ್ಲ.

ಸರ್ಕಾರದಿಂದ ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡಗಳ ಜನರಿಗೆ ಮಂಜೂರಾತಿಯಾದ ಜಮೀನು ಪರಭಾರೆ ಮಾಡಲು ಸರ್ಕಾರದಿಂದ 01-01-1979 ರ ನಂತರದಲ್ಲಿ ಅನುಮತಿ ಪಡೆಯುವುದು ಕಡ್ಡಾಯವಾಗಿರುತ್ತದೆ. ಅನುಮತಿ ಇಲ್ಲದೆ ಪರಭಾರೆ ಮಾಡಿದ್ದಲ್ಲಿ, ಅಂತಹ ಜಮೀನನ್ನು ಮತ್ತೆ ಮುಟ್ಟುಗೋಲು ಹಾಕಿಕೊಂಡು ಸದರಿ ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡದ ಫಲಾನುಭವಿಗಳಿಗೆ ಮತ್ತೆ ವಾಪಸ್ ಕೊಡಿಸುವ ಪ್ರಕ್ರಿಯೆ ಪಿ.ಟಿ.ಸಿ.ಎಲ್ ಕಾಯ್ದೆಯ ಕೆಳಗೆ ಇರುತ್ತದೆ. ಮಂಜೂರಾತಿ ಪತ್ರದಲ್ಲಿ ಹದಿನೈದು ವರ್ಷ ಪರಭಾರೆ ಮಾಡಬಾರದು ಎಂದು ಇದ್ದರೂ ಕೂಡ ಸದರಿ ನಿಗದಿಯಾದ 01-01-1979 ರ ನಂತರ ನಡೆಯುವ ಎಲ್ಲಾ ಪರಭಾರೆಗಳು ಸರ್ಕಾರದ ಅನುಮತಿ ಪಡೆಯುವುದು ಕಲಂ 4(2) ರ ರೀತ್ಯ ಕಡ್ಡಾಯವಾಗಿರುತ್ತದೆ. ಸದರಿ ಕಾಯ್ದೆಯನ್ನು ಮಾನ್ಯ ಕರ್ನಾಟಕ ಉಚ್ಚ ನ್ಯಾಯಾಲಯ ಅನೇಕ ತೀರ್ಪುಗಳಲ್ಲಿ ಬಹಳ ಸ್ಪಷ್ಟವಾಗಿ ಅರ್ಥೈಸಿರುತ್ತೆ. 01-01-1979 ಕ್ಕಿಂತ ಮುಂಚೆ ಪರಭಾರೆ ಮಾಡಿರುವ ಜಮೀನುಗಳಿಗೆ ಅನೇಕ ವ್ಯಾಖ್ಯಾನಗಳು ಮತ್ತು ಕಾನೂನು ಅರ್ಥೈಸುವಿಕೆಯಲ್ಲಿ ವಿಭಿನ್ನ ರೀತಿಯ ತೀರ್ಪುಗಳು ಲಭ್ಯವಿರುತ್ತದೆ. ಸಂಧರ್ಭೋಚಿತವಾಗಿ ಸದರಿ ಕಾನೂನು ಅರ್ಥೈಸುವಿಕೆ ಅಳವಡಿಸಿಕೊಳ್ಳಬೇಕಿರುತ್ತದೆ.

ಮಾನ್ಯ ಕರ್ನಾಟಕ ಹೈಕೋರ್ಟಿನ ದ್ವಿಸದಸ್ಯತ್ವದ ಪೀಠದಿಂದ ಆದೇಶಿಸಲ್ಪಟ್ಟಿರುವ (1993 ರಲ್ಲಿ ಪ್ರಕಟವಾಗಿರುವ) ತೀರ್ಪಿನ ಪ್ರಕಾರ ಕಾನೂನು ಜಾರಿಯಾದ 30 ವರ್ಷದ ಹಿಂದೆ ಅಂದರೆ 01-01-1949 ಕ್ಕಿಂತ ಮುಂಚೆ ಪರಭಾರೆ ಆಗಿರುವ ಸದರಿ ಅಂತಹ ಜಮೀನುಗಳ ಬಗ್ಗೆ ಯಾವ ಕ್ರಮವು ಜರುಗಿಸಲಾಗದು ಎನ್ನುತ್ತದೆ. ಇಲ್ಲಿ 1888 ರಿಂದಲೂ ಪರಿಶಿಷ್ಟ ಜಾತಿ

ಮತ್ತು ಪಂಗಡದವರಿಗೆ ಜಮೀನು ಮಂಜೂರಾತಿಯಾಗುತ್ತಿತ್ತು ಎನ್ನುವುದು ವಾಸ್ತವಿಕ ಸಂಗತಿಯಾಗಿರುತ್ತದೆ. ಸದರಿ ಜಮೀನು ಮಾರುವವರಿಗೆ ಯಾವಾಗ ಪ್ರಾಪ್ತಿಯಾಯಿತು? ಅವರು ಹೊಂದಿರುವ ಸ್ವಾಧೀನದ ವರ್ಷಗಳು ಎಷ್ಟು? ಅವರ ಹಿಂದಿನ ಮಾರಾಟಗಾರರಿಗೆ ಹೇಗೆ ಪ್ರಾಪ್ತವಾಯಿತು? 1888 ರಿಂದ 01-01-1949 ರವರೆಗೆ ಯಾರ ಸ್ವಾಧೀನದಲ್ಲಿ ಸದರಿ ಜಮೀನು ಇತ್ತು? ಸದರಿ ಭೂ ಮಂಜೂರಾತಿ ನಿಬಂದನೆಗಳನ್ನು ಉಲ್ಲಂಘನೆ ಮಾಡಲಾಗಿದೆಯೇ? ಗ್ರಾಂಟ್ (ಮಂಜೂರಾತಿ) ಆದ ತಾರೀಖಿನಲ್ಲಿ ಯಾವ ಕಾನೂನು ಜಾರಿಯಲ್ಲಿ ಇತ್ತು? ಗ್ರಾಂಟ್ ಯಾವ ನಿಬಂದನೆಗಳನ್ನು ಒಡ್ಡಿ ನೀಡಾಲಾಗಿದೆ? ಗ್ರಾಂಟ್ ಉಚಿತವಾಗಿ ನೀಡಲಾಗಿತ್ತೆ, ಅಪ್ಸೆಟ್ ಪ್ರೈಸ್ ಫಿಕ್ಸ್ ಮಾಡಲಾಗಿತ್ತೆ? ಹರಾಜು ಮೂಲಕ ಮಂಜೂರಾತಿ ಆಗಿರುತ್ತದೆಯೇ? ಎಷ್ಟು ವರ್ಷಗಳ ವರೆಗೆ ಪರಬಾರೆ ಮಾಡಬಾರದು ಎಂಬ ನಿರ್ಬಂದವಿರುತ್ತದೆ ? ಇಂತಹ ಹತ್ತು ಹಲವು ಪ್ರಶ್ನೆಗಳಿಗೆ ಉತ್ತರವನ್ನು ಸದರಿ ಜಮೀನಿನ ಬಗ್ಗೆ ಇರುವ ದಾಖಲಾತಿಗಳನ್ನು ಪರಿಶೀಲಿಸಿ ನೋಡಿ ಕಂಡುಕೊಳ್ಳಬೇಕಿರುತ್ತದೆ. ಅಂತಹ ಮೂಲದಾಖಲಾತಿಗಳು ಲಭ್ಯವಿಲ್ಲದೆ ಹೋದಲ್ಲಿ ಆ ದಿನದ ಇತರೆ ದಾಖಲಾತಿಗಳನ್ನೂ ಪರಿಶೀಲಿಸಿ ನಿರ್ದರಿಸಬೇಕಿರುತ್ತದೆ.

ಜಮೀನಿಗೆ ಸಾಮಾನ್ಯವಾಗಿ ಅತ್ಯವಶ್ಯವಾಗಿ ಈ ಬಗ್ಗೆ ಪರಿಶೀಲನೆಗೆ ನೋಡಬೇಕಾದ ದಾಖಲಾತಿಗಳು ಯಾವುದು? ಕರ್ನಾಟಕದಲ್ಲಿ 1968 ರಿಂದ ಆರ್.ಟಿ.ಸಿ (ಗೇಣಿ ಮತ್ತು ಪಹಣಿ ಪತ್ರಿಕೆ) ಹಾಲಿ ಇರುವ ರೂಪದಲ್ಲಿ ನಿರ್ವಹಿಸಲಾಗಿದೆ, ಇದರಲ್ಲಿ 1968 ರಿಂದ 2000 ನೇ ಇಸವಿಯವರೆಗೆ ಕೈ ಬರಹದ ಪಹಣಿ ಬರುತ್ತೆ, 2000 ದ ನಂತರ ಕಂಪ್ಯೂಟರ್ ಪಹಣಿ ಬರುತ್ತೆ. ಇದರಲ್ಲಿ ಯಾವ ರೀತಿಯಲ್ಲಿ ಹಾಲಿ ಮಾಲೀಕ ಮತ್ತು ಸ್ವಾಧೀನವಿರುವ ಉಳಿಮೆದಾರನು ಸ್ವಾಧೀನಕ್ಕೆ ಬಂದಿರುವನೆಂಬ ಮಾಹಿತಿ ಇರುತ್ತದೆ. ಅನೇಕ ಆರ್.ಆರ್. ನಂಬರ್ ಉಲ್ಲೇಖಗಳು, ಐ.ಸಿ.ಆರ್ ನಂಬರ್ ಉಲ್ಲೇಖಗಳು, ಎಂ.ಆರ್. ಅಥವ ಎಂ.ಟಿ ಉಲ್ಲೇಖಗಳು ಪಹಣಿಯ 10 ಮತ್ತು 11 ನೇ ಕಾಲಂ ನಲ್ಲಿ ನಮೂದಿರುತ್ತದೆ. ಸದರಿ ಅಂತಹ ದಾಖಲೆಗಳನ್ನು ತೆಗೆಸಬೇಕಿರುತ್ತದೆ ಮತ್ತು ದಾಖಲೆಯಲ್ಲಿರುವ ಉಲ್ಲೇಖಿತ ವಿವರಗಳನ್ನು ಪರಿಶೀಲಿಸಬೇಕಿರುತ್ತದೆ.

ಸದರಿ ಜಮೀನುಗಳ ಬಗ್ಗೆ ತಾಲೂಕು ಕಚೇರಿಯಲ್ಲಿ ದರಖಾಸ್ತು ರಿಜಿಸ್ಟರ್ ನಿರ್ವಹಿಸಲಾಗಿರುತ್ತದೆ, ಅಂತಹ ರಿಜಿಸ್ಟರ್ ಅನ್ನು ಪರಿಶೀಲಿಸಿ ಸದರಿ ಜಮೀನು ಪರಿಶಿಷ್ಟರಿಗೆ ಗ್ರಾಂಟ್ ಮಾಡಿರುವ ಹಿನ್ನೆಲೆ ಉಳ್ಳದ್ದೆ ಎಂದು ಪರಿಶೀಲಿಸಬಹುದಿರುತ್ತದೆ. 1968 ಕ್ಕಿಂತ ಮುಂಚೆ ಮತ್ತು ನಂತರದಲ್ಲಿ ಕರ್ನಾಟಕದ ವಿವಿದಕಡೆ ವಿವಿದ ರೀತಿಯಲ್ಲಿ ಕಂದಾಯ ದಾಖಲೆಗಳ ನಿರ್ವಹಣೆಯಾಗಿರುತ್ತದೆ. ಹಳೇ ಮೈಸೂರು ಪ್ರಾಂತ್ಯದಲ್ಲಿ ಪ್ರಚಲಿತ ಕೆಲವು ಕಂದಾಯ ದಾಖಲೆಗಳ ಹೆಸರು 'ಇಂಡೆಕ್ಸ್ ಆಫ್ ಲ್ಯಾಂಡ್ ರೆಕಾರ್ಡ್ (ಐ.ಎಲ್.ಆರ್), ನಮೂನೆ-1, ನಮೂನೆ-5, ಖೇತುವಾರು ನಕಲು, ಖರಾಬು ಉತ್ತಾರು, ಅಕಾರ್ ಬಂದ್, ಸರ್ವೆ ಟಿಪ್ಪಣಿ ನಕಲು, ಆರ್.ಆರ್ (ರೆಕಾರ್ಡ್ ಆಫ್ ರೈಟ್ಸ್), ಐ.ಸಿ.ಆರ್ (ಇನ್ ಹೆರಿಟೆನ್ಸ್ ಕೇಸ್ ರಿಜಿಸ್ಟರ್) ಎಂ.ಆರ್. (ಮ್ಯುಟೇಷನ್ ರಿಜಿಸ್ಟರ್) ಎಂ.ಟಿ (ಮುಟೇಷನ್ ಟ್ರ್ಯಾನ್ಸ್ಯಾಕ್ಶನ್).

ಇವುಗಳ ಜೊತೆಯಲ್ಲಿ 1850 ರಿಂದಲೂ ಹಲವು ಸಬ್ ರಿಜಿಸ್ಟ್ರಾರ್ ಕಚೇರಿಯಲ್ಲಿ ದಾಖಲೆಗಳು ಲಭ್ಯವಿರುತ್ತವೆ. ಸದರಿ ಕಚೇರಿಯಲ್ಲಿ ಎನ್ಕಂಬರೆನ್ಸ್ ಪ್ರತಿಯನ್ನು ತೆಗೆಸಬೇಕು ಇದರಲ್ಲಿ ಗ್ರಾಂಟ್ ಆಗಿರುವ ಬಗ್ಗೆ ಉಲ್ಲೇಖವಿರುವುದಿಲ್ಲ, ಯಾವ ತಾರೀಖಿನಲ್ಲಿ ಮೂಲ ಕ್ರಯ ಆಗಿದೆ ಎಂಬ ಮಾಹಿತಿ ದೊರೆಯುತ್ತದೆ. ಸದರಿ ಕ್ರಯ ಪತ್ರಗಳಲ್ಲಿ ಕ್ರಯದಾರನಿಗೆ ಯಾವ ರೀತಿಯಲ್ಲಿ ಪ್ರಾಪ್ತವಾಗಿತ್ತು ಎಂಬ ಉಲ್ಲೇಖಗಳನ್ನು ಪರಿಶೀಲಿಸಬೇಕಿರುತ್ತದೆ. ಅಲ್ಲಿ ಲಭ್ಯವಿಲ್ಲದೆ ಹೋದರೆ ಕಂದಾಯ ದಾಖಲೆಗಳಲ್ಲಿನ ಉಲ್ಲೇಖಗಳನ್ನು ಪರಿಶೀಲಿಸಿ ನಿರ್ದಿಷ್ಟವಾದ ಅಭಿಪ್ರಾಯಕ್ಕೆ ಬರಬೇಕಿರುತ್ತದೆ. ಈ ಎಲ್ಲಾ ಅಭಿಪ್ರಾಯಕ್ಕೆ ಬರಲು ನುರಿತ ಸ್ಥಳೀಯ ವಕೀಲರಿಂದ ಮಾತ್ರ ಸಾಧ್ಯಾವಾದ ಕೆಲಸವಾಗಿದ್ದು. ಸದರಿ ಸ್ಥಳೀಯ ವಕೀಲರು ಮಾನ್ಯ ಉಚ್ಚ ನ್ಯಾಯಾಲಯದ ಹಲವಾರು ತೀರ್ಪಿನ ಅಂಶ ಏನು ಹೇಳುತ್ತದೆ, ಕಾಲಮಿತಿ ಕಾನೂನಿನ ಅನ್ವಯ ಅನುಕೂಲವುಂಟೆ, ಸಕಾರಣಬದ್ದ ಅವದಿ ಇನ್ನು ಜೀವಂತ ಉಂಟೆ, ಹಾಲಿ ಪ್ರಕರಣಗಳಲ್ಲಿ ಆಗುತ್ತಿರುವ ವ್ಯಾಖ್ಯಾನ ಬದಲಾವಣೆಯಂತೆ, ಸ್ಥಳೀಯ ರೂಡಿಯಂತೆ ಇನ್ನು ಹೆಚ್ಚುವರಿ ದಾಖಲೆ ಎಲ್ಲಿ ಲಭ್ಯ ಮತ್ತು ಅವಶ್ಯ ಎಂಬ ಬಗ್ಗೆ ವಿಮರ್ಶೆ ಮಾಡಿ ಸಲಹೆ ನೀಡುತ್ತಾರೆ. ಕೇವಲ ರಿಯಲ್ ಎಸ್ಟೇಟ್

ಬ್ರೋಕರ್ ಗಳಿಂದ ಆಗಲೀ, ಸಬ್ ರಿಜಿಸ್ಟ್ರಾರ್ ಕಚೇರಿಯ ಮುಂದೆ ಕುಳಿತಿರುವ ಪತ್ರ ಬರಹಗಾರರಿಂದ ಆಗಲೀ ನಿಮ್ಮ ದಾಖಲೆಗಳ ಬಗ್ಗೆ ಪೂರ್ಣ ತನಿಖೆ ಸಾಧ್ಯವಲ್ಲದ ಪರಿಸ್ಥಿತಿ ಇರುತ್ತದೆ. ಈ ಬಗ್ಗೆ ಹಲವು ವಕೀಲರಲ್ಲದ ಪರಿಣಿತರು ಇರುತ್ತಾರೆ ಅಂತಹ ಅನುಭವ ಮಂಟಪವನ್ನು ಹುಡುಕಬೇಕಷ್ಟೆ.

ಪಿ.ಟಿ.ಸಿ.ಎಲ್ ಕಾಯ್ದೆಯ ರೀತ್ಯ ಸಕ್ಷಮ ಪ್ರಾಧಿಕಾರಿಯಾದ ಉಪವಿಭಾಗಾದಿಕಾರಿಯು ತನ್ನ ವಿಚಾರಣೆಯಲ್ಲಿ ಸದರಿ ಜಮೀನಿನ ಮೂಲ ಮಾಲೀಕನು (ಗ್ರಾಂಟಿದಾರನು) ಪರಿಶಿಷ್ಟ ಜಾತಿ ಅಥವ ಪರಿಶಿಷ್ಟ ಪಂಗಡಕ್ಕೆ ಸೇರಿದವರೆ ಎಂದು ಪರಿಶೀಲಿಸಬೇಕಿರುತ್ತದೆ, ಯಾವ ಕಾನೂನು ರೀತ್ಯ ಗ್ರಾಂಟ್ ಆಗಿದೆ, ಯಾವ ತಾರೀಖಿನಲ್ಲಿ ಮೊದಲ ಕ್ರಯ ಆಗಿದೆ, ಅಲ್ಲಿಂದ ಅರ್ಜಿ ಸಲ್ಲಿಸುವವರೆಗೆ ಅಥವ ಸರ್ಕಾರದ ಗಮನಕ್ಕೆ ಬರುವವರೆಗೆ ವಿಳಂಬಕ್ಕೆ ಸಕಾರಣವಿದೆಯೇ ಎಂಬ ಹಲವು ವಿಚಾರಗಳಲ್ಲಿ ದೃಡ ನಿರ್ದಾರಕ್ಕೆ ಬರಬೇಕಿರುತ್ತದೆ. ಸದರಿ ಮೂಲ ಗ್ರಾಂಟಿದಾರನು ಪರಿಶಿಷ್ಟನೆ ಇಲ್ಲವೆ ಎಂದು ತಿಳಿಸುವುದು ಹಾಲಿ ಬರೆಸಿಕೊಂಡು ಬಂದಿರುವ ವಂಶವೃಕ್ಷದಿಂದ ಆಗಲೀ ಅರ್ಜಿದಾರನು ತಾನು ಸದರಿ ಜಾತಿಯವನೆಂದು ತೋರಿ ಗ್ರಾಂಟಿಯ ವಂಶವೃಕ್ಷ ಹಾಜರು ಪಡಿಸಿದರೆ ಮಾತ್ರ ಸಾಲದು. ವಂಶವೃಕ್ಷವನ್ನು ಯಾವರೀತಿಯಲ್ಲಿ ಪರಿಗಣಿಸಬೇಕು ಎಂಬ ಬಗ್ಗೆ ಸರ್ವೋಚ್ಚ ನ್ಯಾಯಾಲಯ ಸ್ಟೇಟ್ ಆಫ್ ಬಿಹಾರ್ ವಿರುದ್ದ ರಾಧಕೃಷ್ಣಸಿಂಗ್ ಮತ್ತು ಇತರರು (ಎ.ಐ.ಆರ್. 1983 ಎಸ್.ಸಿ. 684) ಕೇಸಿನಲ್ಲಿ ವಂಶವೃಕ್ಷದ ರುಜುವಾತಿನ ಬಗ್ಗೆ ಮತ್ತು ಅದನ್ನು ಪರಿಗಣಿಸುವ ಬಗ್ಗೆ ಮಾರ್ಗದರ್ಶನವಿರುತ್ತದೆ. ಗ್ರಾಂಟಿಯು ಸದರಿ ಪರಿಶಿಷ್ಟನೆ ಎಂದು ತಿಳಿಸಲು ನೇರ ದಾಖಲಾತಿ ಇರಬೇಕು. ಕಂದಾಯ ದಾಖಲೆಗಳಲ್ಲಿ ಈ ಬಗ್ಗೆ ಹಿಂದೆಯೇ ಅಂತಹ ಜಾತಿ ವಿಚಾರವು ಮಂಜೂರಾತಿ ಅರ್ಜಿಯಲ್ಲಿ ಜಾತಿ ಪ್ರಮಾಣಪತ್ರದೊಂದಿಗೆ ಇರಬೇಕು ಮತ್ತು ದರಖಾಸ್ತು ರಿಜಿಸ್ಟರ್ ನಲ್ಲಿ ಉಲ್ಲೇಖವಿರಬೇಕು. ಸದರಿ ಜಮೀನು ಸರ್ಕಾರದಿಂದ ಮಂಜೂರು ಆಗಿರುವುದೆ ಎಂದು ಪರಿಶೀಲಿಸಬೇಕಿರುತ್ತದೆ. 01-01-1979 ರ ಹಿಂದೆ ಕ್ರಯ ಆಗಿರುವ ಜಮೀನುಗಳ ಬಗ್ಗೆ ಪರಿಶೀಲಿಸುವ ವೇಳೆಯಲ್ಲಿ ಸದರಿ ಗ್ರಾಂಟ್ ನಿಬಂದನೆ ಉಲ್ಲಂಘನೆ ಆಗಿದೆಯೇ ? ಉಚಿತವಾಗಿ ಗ್ರಾಂಟ್

ನೀಡಲಾಗಿತ್ತೆ ? ಅಪ್ಸೆಟ್ ಪ್ರೈಸ್ ಪಡೆಯಲಾಗಿತ್ತೆ ? ಕ್ರಯ ಆದ ದಿನದಿಂದ 01–01–1979 ರವೇಳೆಗೆ ಯಾವುದೇ ತೊಂದರೆ ಇಲ್ಲದೆ ಕ್ರಯದಾರನು 30 ವರ್ಷಗಳ ವರೆಗೆ ಸ್ವಾಧೀನದಲ್ಲಿ ಇದ್ದನೆ ? ಎಂಬುದನ್ನು ಪರಿಶೀಲಿಸಬೇಕಿರುತ್ತದೆ. ಗ್ರಾಂಟಿದಾರನು ಪರಿಶಿಷ್ಟನೆ, ಜಮೀನು ಆತನಿಗೆ ಗ್ರಾಂಟ್ ಆಗಿತ್ತೆ ಎಂಬ ಬಗ್ಗೆ ಯಾವುದೇ ನಿರ್ವಿವಾದವಿಲ್ಲದೆ ಹೋದಲ್ಲಿ ಪಿ.ಟಿ.ಸಿ.ಎಲ್ ವ್ಯಾಪ್ತಿಗೆ ಬರುವುದಿಲ್ಲ ಎಂಬ ಬೇರೆ ಅಂಶಗಳನ್ನು ಖರೀದಿಸಿರುವವನು ರುಜುವಾತುಪಡಿಸಲು ಬದ್ದನಾಗಿರುತ್ತಾನೆ.

ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡದವರೇ ಅಂತಹ ಗ್ರಾಂಟ್ ಜಮೀನನ್ನು ಕೊಳ್ಳಬಾರಾದು ಎಂಬ ನಿರ್ಬಂದವೂ ಒಳಗೊಂಡಿದೆ, ಇಲ್ಲಿ ಗ್ರಾಂಟಿದಾರರ ಅಸಹಾಯಕತೆ ಮತ್ತು ಬಡತನದ ದುರುಪಯೋಗ ಆಗದಂತೆ ತಡೆಯಲು ರೂಪಿಸಿರುವ ಕಾನೂನು ಇದಾದ್ದರಿಂದ ಇದು ಜಾತಿ ದ್ವೇಷವನ್ನು ಬಿತ್ತುವ ಅಸ್ತ್ರವಲ್ಲ ಎಂಬುದು ತಿಳಿಯಬೇಕಿರುತ್ತದೆ. ಅನೇಕ ಕಡೆಗಳಲ್ಲಿ ಜಮೀನನ್ನು ಪರಭಾರೆ ಮಾಡಿ ಬಡತನದಲ್ಲಿ ಜಮೀನನ್ನು ಕಳೆದುಕೊಳ್ಳುತ್ತಿರುವವರ ಪರಿಸ್ಥಿತಿಯನ್ನು ತಡೆಗಟ್ಟಲು ಮಾಡಿದ ಕಾನೂನು ಇದಾಗಿರುತ್ತದೆ. ಪರಬಾರೆಯಲ್ಲಿ ಭೋಗ್ಯ (ಸ್ವಾಧೀನ ಪಡೆಯಲಿ ಬಿಡಲಿ), ದಾನ, ಬದಲಿ ಮಾಡಿಕೊಳ್ಳುವಿಕೆ, ಕ್ರಯ, ಬಾಡಿಗೆ, ಸ್ವತ್ತು ಆಧಾರ ಮಾಡುವಿಕೆ, ಕ್ರಯಕ್ಕಾಗಿ ಕರಾರು ಮಾಡಿಕೊಳ್ಳುವಿಕೆ ಅಥವ ಇನ್ನಾವುದೇ ರೀತಿಯ ವ್ಯವಹಾರಗಳು ಮಾಡಲು ಬರುವುದಿಲ್ಲ. ಅಂತಹ ವ್ಯವಹಾರಗಳಿಗೆ ಪಿ.ಟಿ.ಸಿ.ಎಲ್ ಕಾಯ್ದೆ ಅನ್ವಯವಾಗುತ್ತೆ. ಆದರೆ ಕುಟುಂಬಸ್ಥರ ಮಧ್ಯೆ ವಿಭಾಗದ ಮುಖೇನ ಹಸ್ತಾಂತರ ಅಥವ ವಿಲ್ ಮುಖೇನ ಕುಟುಂಬಸ್ಥರಲ್ಲಿ ಹಸ್ತಾಂತರ ಇದರಲ್ಲಿ ಬರುವುದಿಲ್ಲ.

ಗ್ರಾಂಟ್ ಜಮೀನು ಅಂದರೆ ಯಾವುದು ಎಂದು ಉದ್ಬವವಾಗುವ ಪ್ರಶ್ನೆಗಳಿಗೆ ಅನೇಕ ವ್ಯಾಖ್ಯಾನಗಳು ಮಾಡಲಾಗುತ್ತದೆ. ಆದರೆ ಈ ವಿಚಾರದಲ್ಲಿ ಕಾಯ್ದೆಯಲ್ಲಿನ ಕಲಂ 3(1)(ಬಿ) ಅಡಿಯಲ್ಲಿ ನೋಡಿದಾಗ ಸರ್ಕಾರದಿಂದ ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡದವರಿಗೆ, ವಿವಿದ ಜಾರಿಯಲ್ಲಿದ್ದ ಕಾನೂನಿನ ಅಡಿಯಲ್ಲಿ ಮಂಜೂರಾತಿಯಾದ ಅಥವ ಅಲಾಟ್ ಮೆಂಟ್ ಆದ

ಜಮೀನು ಗ್ರಾಂಟ್ ಜಮೀನು ಆಗಿರುತ್ತದೆ.  ಸದರಿ ಜಾರಿಯಲಿದ್ದ ಕಾನೂನಿನ ಬಗ್ಗೆ ಹೇಳುವಾಗ್ಗೆ  ವ್ಯವಸಾಯ ಕ್ಷೇತ್ರದ ಸುಧಾರಣೆ (ಅಗ್ರೇರಿಯನ್ ರಿಫಾರ್ಮ್ಸ್) ಬಗ್ಗೆ ಇರುವ ಕಾನೂನು, ಲ್ಯಾಂಡ್ ಸೀಲಿಂಗ್ ನಲ್ಲಿ ಇರುವ ಕಾನೂನು, ಇನಾಂ ರದ್ದತಿ ಯಲ್ಲಿನ ಕಾನೂನು ಅಡಿಯಲ್ಲಿ <u>ಪರಿಶಿಷ್ಟರಿಗೆ ಮಂಜೂರಾತಿ ಅಥವ ಅಲಾಟ್ ಮೆಂಟ್ ಆಗಿರುವ ಜಮೀನಿಗೆ ಪಿ.ಟಿ.ಸಿ.ಎಲ್ ಅನ್ವಯವಾಗುತ್ತದೆ.</u> ಆದರೆ ಅಂತಹ ಕಾನೂನಿನ ಅಡಿಯಲ್ಲಿ ಅನುವಂಶೀಯ (ವಂಶಪಾರಂಪರ್ಯ) ಹಕ್ಕಿನಿಂದ ಗ್ರಾಂಟ್ ಆಗಿದ್ದಲ್ಲಿ ಇತರೆ ಹಕ್ಕುಗಳಿಂದ ಗ್ರಾಂಟ್ ಆಗಿದ್ದಲ್ಲಿ ಈ ಪಿ.ಟಿ.ಸಿ.ಎಲ್ ಕಾಯ್ದೆ ಅನ್ವಯಿಸುವುದಿಲ್ಲ ಎಂದು ಸ್ಪಷ್ಟತೆ ಇದೆ.

ಪಿ.ಟಿ.ಸಿ.ಎಲ್ ವ್ಯಾಪ್ತಿಗೆ ಬರುವ ಯಾವುದೇ ಜಮೀನಿನಲ್ಲಿ ಖರೀದಿದಾರನು ಹೂಡಿರುವ ಬಂಡವಾಳವನ್ನಾಗಲೀ ಮಾರಾಟಗಾರನಿಗೆ ನೀಡಿರುವ ಮಾರಾಟ ಮೌಲ್ಯವಾಗಲೀ, ಕ್ರಯ ಕರಾರಿಗೆ ನೀಡಿರುವ ಮುಂಗಡವಾಗಲೀ ವಾಪಸ್ ಪಡೆಯಲು ಬರುವುದಿಲ್ಲ. ಇದಕ್ಕೆ ಕಾನೂನು ರೀತ್ಯ ಪರಿಹಾರವೇ ಇಲ್ಲ. ಸದರಿ ಆ ರೀತಿಯ ವ್ಯವಹಾರವನ್ನು ಮತ್ತು ಕರಾರುಗಳನ್ನು ಕಾನೂನು ಭಾಹಿರವೆಂದು ಪಿ.ಟಿ.ಸಿ.ಎಲ್ ಕಾಯ್ದೆ ಹೇಳಿರುವಾಗ್ಗೆ ಕಾನೂನು ಭಾಹಿರ ಚಟುವಟಿಕೆಯಲ್ಲಿ ಹಣವನ್ನು ವಿನಿಯೋಗಿಸುವುದು ಕಾನೂನು ಭಾಹಿರವಾಗಿರುತ್ತದೆ. ಆದ ಕಾರಣ ಕಾನೂನು ರೀತಿಯಲ್ಲಿ ವಸೂಲಿಯೂ ಆಗುವುದಿಲ್ಲ, ಇದಕ್ಕೆ ಪರಿಹಾರವೂ ದೊರೆಯುವುದಿಲ್ಲ. ಆದ್ದರಿಂದಲೇ ಜಮೀನು ಕೊಂಡುಕೊಳ್ಳುವವನು ಜಾಗ್ರತೆ ವಹಿಸಬೇಕಿರುತ್ತದೆ.

ಪಿ.ಟಿ.ಸಿ.ಎಲ್ ಕಾಯ್ದೆಯ ಕಲಂ 5(3) ರಲ್ಲಿ ಹೇಳಿರುವಂತೆ ಯಾವ ಗ್ರಾಂಟ್ ಜಮೀನು ಗ್ರಾಂಟಿಯ ಸ್ವಾಧೀನದಲ್ಲಿ ಅಥವ ಅವನ ವಾರಸ್ಸುದಾರರ ಸ್ವಾಧೀನದಲ್ಲಿ ಇರುವುದಿಲ್ಲವೋ ಅಂತಹ ಪರಬಾರೆಯು ಬೇರೆ ಅನ್ಯತಾ ರುಜುವಾತು ಪಡಿಸುವವರೆಗೆ ಕಾನೂನು ಬಾಹಿರವೆಂದು ತಿಳಿಯುವುದು ಎಂದು ಹೇಳಿರುತ್ತದೆ. ಇಲ್ಲಿ ಗ್ರಾಂಟಿ ಜಮೀನು ಎಂದು ನಿರ್ಧರಿಸುವಲ್ಲಿ ಇನಾಂ ರದ್ದತಿ, ಭೂಸುದಾರಣೆ ಟೆನೆನ್ಸಿ ರೀತ್ಯ, ಮತ್ತು ಇನ್ನಿತರೆ ರೀತ್ಯ ಬಂದಿರುವ

ಜಮೀನುಗಳು ಯಾವುದಾದರೂ ಅನುವಂಶಿಕ ಹಕ್ಕಿನಿಂದ ಅಥವ ಇತರೆ ಹಕ್ಕಿನಿಂದ ಪ್ರಾಪ್ತವಾಗಿರುವುದೇ ಎಂದು ರುಜುವಾತು ಪಡಿಸುವ ಜವಾಬ್ದಾರಿ ಖರೀದಿದಾರನದ್ದಾಗಿರುತ್ತದೆ. ಈ ರೀತಿಯ ಪ್ರಿಸಮ್ಶನ್ (ಊಹೆಯ) ಕಾನೂನು ಇರುವುದಕ್ಕೇ ಇದೂ ಸ್ವಲ್ಪ ಕಠಿಣವಾದ ಕಾನೂನು ಆಗಿರುವುದು ಎಂದರೆ ತಪ್ಪಾಗಲಾರದು. ಕಾನೂನಿನ ಅರಿವು ಇಲ್ಲದ ಮತ್ತು ಕಾನೂನು ತಿಳುವಳಿಕೆ ಪಡೆಯಲೂ ಎಚ್ಚರವಿಲ್ಲದ ವ್ಯವಸಾಯ ಭೂಮಿ ಖರೀದಿದಾರ ಸಂಕಷ್ಟಕ್ಕೆ ಸಿಲುಕಿಯಾನು ಎಂಬುದು ಅಕ್ಷರ ಸಹ ಸತ್ಯವಾಗಿರುತ್ತದೆ.

ಪಿ.ಟಿ.ಸಿ.ಎಲ್ ಕಾಯ್ದೆಯಲ್ಲಿ ಪರಬಾರೆಯೊಂದೇ ನಿರ್ಬಂದವಿದಿಸಿರುವುದಿಲ್ಲ. ಆ ರೀತಿಯ ಖರೀದಿದಾರನ ಕೃತ್ಯವನ್ನು ಕಲಂ 8 ರಲ್ಲಿ ಕಾಗ್ನಿಸಿಬಲ್ ಅಪರಾಧವನ್ನಾಗಿಸಿದೆ ಆರು ತಿಂಗಳು ಶಿಕ್ಷೆ ಅಥವ ಎರಡುಸಾವಿರದವರೆಗೆ ಜುಲ್ಮಾನೆ ಅಥವ ಎರಡನ್ನೂ ವಿದಿಸಬಹುದಿರುತ್ತದೆ. ನೊಂದಾವಣಾಧಿಕಾರಿಗಳು ಸದರಿ ಪಿ.ಟಿ.ಸಿ.ಎಲ್ ವ್ಯಾಪ್ತಿಗೆ ಬರುವ ಜಮೀನುಗಳನ್ನು ನೊಂದಾಯಿಸಬಾರದು ಎಂದು ಕಲಂ 7 ರಲ್ಲಿ ಹೇಳಿದೆ. ಬಹಳ ಹಿಂದಿನಿಂದಲೂ ಸರ್ಕಾರಿ ಸುತ್ತೋಲೆಗಳಲ್ಲಿ ಕಂದಾಯ ಇಲಾಖೆಗೆ ಅಂತಹ ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡದ ಜನರಿಗೆ ನೀಡಿರುವ ಮಂಜೂರಾದ ಜಮೀನಿನ ಬಗ್ಗೆ ಪಹಣಿಯಲ್ಲಿ ಉಲ್ಲೇಖಿಸುವಂತೆ ಮತ್ತು ನೊಂದಾವಣಿ ಕಚೇರಿಗೆ ಲಿಸ್ಟ್ ನೀಡುವಂತೆ ಆದೇಶಗಳು ಆಗುತ್ತಲೇ ಇವೆ ಆದರೆ ಅದು ಸಮರ್ಪಕವಾಗಿ ಜಾರಿಯಾಗಿಲ್ಲ. ಇತ್ತೀಚೆಗೆ ಬಂದಿರುವ ಆದೇಶದಲ್ಲಿ ಸದರಿ ಅಂತಹ ಜಮೀನುಗಳ ಪಹಣಿಯಲ್ಲಿ ಸೀಲನ್ನು ಹಾಕಲು ಆದೇಶಿಸಲಾಗಿದೆ ಎಂದು ತಿಳಿದು ಬರುತ್ತದೆ. ಸೀಲು ಏಕೆ ಬೇಕು ಶಾಶ್ವತವಾಗಿ ನಮೂದಿಸಲು ಇರುವ ಅಡಚಣೆ ಏನು ? ಎಷ್ಟೋ ಜನ ಘಟಭದ್ರರು ಇಂತಹ ಜಮೀನು ಕೊಂಡಿದ್ದಾರೆ ? ಅವರನ್ನು ಸರ್ಕಾರ ರಕ್ಷಿಸುತ್ತಿದೆಯೇ ? ಆಕಸ್ಮಿಕ ಸೀಲು ಹಾಕುವವರ ತಪ್ಪಿನಿಂದ ಉಂಟಾಗುವ ಪಜೀತಿಗೆ ಸರ್ಕಾರ ಹೊಣೆಯಾಗುವುದೆ ? ಭ್ರಷ್ಟತೆಯಲ್ಲಿ ಸೀಲು ಹಾಕುವುದು ತಪ್ಪಿದರೆ ಕಾನೂನು ಜಾರಿಯನ್ನು ಸರ್ಕಾರ ಮೊಟಕುಗೊಳಿಸುವುದೆ ?

# ಅಧ್ಯಾಯ-2

## ಮೂಲಭೂತ ವಿಚಾರಗಳು

### ಪಿ.ಟಿ.ಸಿ.ಎಲ್. ಕಾನೂನು ಉದ್ದೇಶಗಳು

[1]ಕಾಯಿದೆಯ ಮುನ್ನುಡಿಯಲ್ಲಿ ಹೀಗೆ ಹೇಳಲಾಗಿದೆ: "ರಾಜ್ಯದಿಂದ ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡಕ್ಕೆ ಸೇರಿದ ವ್ಯಕ್ತಿಗಳಿಗೆ ಸರ್ಕಾರ ನೀಡಿದ ಕೆಲವು ಜಮೀನುಗಳನ್ನು ವರ್ಗಾವಣೆ ಮಾಡುವುದನ್ನು ನಿಷೇಧಿಸುವ ಕಾಯ್ದೆ; ರಾಜ್ಯದಲ್ಲಿ ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡಕ್ಕೆ ಸೇರಿದ ವ್ಯಕ್ತಿಗಳಿಗೆ ಸರ್ಕಾರವು ಮಂಜೂರು ಮಾಡಿದ ಜಮೀನುಗಳ ವರ್ಗಾವಣೆ ನಿಷೇಧ ಮತ್ತು ಪುನಃಸ್ಥಾಪನೆಗಾಗಿ ಒದಗಿಸುವುದು ಸೂಕ್ತವಾಗಿದೆ." ಕಾಯ್ದೆ ಜಾರಿಗೆ ಹಿಂದಿನ ಉದ್ದೇಶವನ್ನು ಕಂಡುಹಿಡಿಯಲು, ನಾವು ಸಂವಿಧಾನದ 31 ಸಿ ಮತ್ತು 46 ನೇ ವಿಧಿಗಳನ್ನು ಉಲ್ಲೇಖಿಸಬೇಕಾಗಿದೆ. ವಿಧಿ 31 ಸಿ ಹೀಗೆನ್ನುತ್ತದೆ: "31 ಸಿ. ಕೆಲವು ನಿರ್ದೇಶನ ತತ್ವಗಳಿಗೆ (ಡೈರೆಕ್ಟೀವ್ ಪ್ರಿನ್ಸಿಪಲ್ಸ್) ಪರಿಣಾಮ ಬೀರುವ ಕಾನೂನುಗಳ ಉಳಿಸುವಿಕೆ: – ವಿಧಿ 13 ರಲ್ಲಿ ಏನಿದ್ದರೂ, ಭಾಗ IV ರಲ್ಲಿ ಹೇಳಲಾದ ಎಲ್ಲಾ ಅಥವಾ ಆ ಪೈಕಿ ಯಾವುದೇ ತತ್ವಗಳನ್ನು ಅನ್ವಯವನ್ನು ಸುನಿಶ್ಚಿತಗೊಳಿಸುವ ರಾಜ್ಯ ನೀತಿಯನ್ನು ಜಾರಿಗೆ ತರುವ ಯಾವುದೇ ಕಾನೂನು, 14ನೇ ಅಥವ 19ನೇ ವಿಧಿಯಿಂದ ಪ್ರಧಾನ ಮಾಡಲಾಗಿರುವ ಹಕ್ಕುಗಳಲ್ಲಿ ಯಾವುದಕ್ಕಾದರೂ ಅಸಮಂಜಸವಾಗಿದೆ, ಅಥವಾ ಕಸಿದುಕೊಂಡು ಹೋಗುತ್ತದೆ ಅಥವಾ ಮೊಟಕುಗೊಳಿಸುತ್ತದೆ ಎಂಬ ನೆಲೆಯಲ್ಲಿ ಅನೂರ್ಜಿತವೆಂದು ಪರಿಗಣಿಸಲಾಗುವುದಿಲ್ಲ. ಮತ್ತು ಅಂತಹ ನೀತಿಯನ್ನು ಜಾರಿಗೆ ತರುವ ಉದ್ದೇಶವನ್ನು ಹೊಂದಿರುವ, ಯಾವುದೇ ಕಾನೂನನ್ನು, ಅದು ಅಂತಹ ನೀತಿಗೆ ಪರಿಣಾಮ ಬೀರುವುದಿಲ್ಲ ಎಂಬ ಕಾರಣಕ್ಕೆ, ಯಾವುದೇ ನ್ಯಾಯಾಲಯದಲ್ಲಿ ಪ್ರಶ್ನಿಸಲಾಗುವುದಿಲ್ಲ: ಆದರೆ ಒಂದು ರಾಜ್ಯದ ಶಾಸಕಾಂಗವು ಅಂತಹ ಕಾನೂನನ್ನು ಮಾಡಿದಲ್ಲಿ, ಅಂತಹ ಕಾನೂನು ರಾಷ್ಟ್ರಪತಿಗಳ ಪರಿಗಣನೆಗೆ ಕಾಯ್ದಿರಿಸಲ್ಪಟ್ಟಿದ್ದು ಅದಕ್ಕೆ ಅವನ

---

[1] ಚಿಕ್ಕಕುಳ್ಳೇಗೌಡ ವಿ. ರಾಜ್ಯ – 1991 (3) ಕರ್.ಎಲ್.ಜೆ 142

ಅನುಮತಿಯನ್ನು ಪಡೆದಿದ್ದ ಹೊರತು ಈ ವಿಧಿಯ ನಿಬಂಧನೆಗಳು ಅನ್ವಯಿಸುವುದಿಲ್ಲ. ಸಂವಿಧಾನದ 46 ನೇ ವಿಧಿ ಹೀಗೆನ್ನುತ್ತದೆ: "ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡ ಮತ್ತು ಇತರ ದುರ್ಬಲ ವರ್ಗಗಳ ಶೈಕ್ಷಣಿಕ ಮತ್ತು ಆರ್ಥಿಕ ಹಿತಾಸಕ್ತಿಗಳ ಉತ್ತೇಜನ – ರಾಜ್ಯವು ದುರ್ಬಲ ವರ್ಗದ ಜನರ ಶೈಕ್ಷಣಿಕ ಮತ್ತು ಆರ್ಥಿಕ ಹಿತಾಸಕ್ತಿಗಳನ್ನು ಮತ್ತು ವಿಶೇಷವಾಗಿ ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡದವರ ವಿಶೇಷ ಕಾಳಜಿಯೊಂದಿಗೆ ಉತ್ತೇಜಿಸುತ್ತದೆ, ಮತ್ತು ಸಾಮಾಜಿಕ ಅನ್ಯಾಯ ಮತ್ತು ಎಲ್ಲಾ ರೀತಿಯ ಶೋಷಣೆಯಿಂದ ಅವರನ್ನು ರಕ್ಷಿಸುತ್ತದೆ." ಇದರಿಂದ ತಿಳಿಯುವುದೇನೆಂದರೆ, ರಾಜ್ಯದ ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡಕ್ಕೆ ಸೇರಿದ ವ್ಯಕ್ತಿಗಳಿಗೆ ಸರ್ಕಾರವು ನೀಡಿರುವ ಕೆಲವು ಜಮೀನುಗಳನ್ನು ಹಸ್ತಾಂತರಿಸುವುದನ್ನು ನಿಷೇಧಿಸುವುದು ಮತ್ತು ಅಂತಹ ಜಮೀನುಗಳನ್ನು, ಅಂತಹ ವ್ಯಕ್ತಿಗಳಿಗೆ ಪುನಃಸ್ಥಾಪನೆಗಾಗಿ ಕಾಯ್ದೆಯ ಉದ್ದೇಶ ಸ್ಪಷ್ಟವಾಗಿದೆ."

ಮಹಾರಾಷ್ಟ್ರ ರಾಜ್ಯದ ಇಂತದ್ದೇ ಕಾಯ್ದೆಯ ಬಗ್ಗೆ ಸುಪ್ರೀಮ್ ಕೋರ್ಟ್[1] ಹೀಗೆಂದಿದೆ, "ಪ್ರಸ್ತುತ ಶಾಸನವು ಆಧುನಿಕ ನ್ಯಾಯಶಾಸ್ತ್ರಜ್ಞರಿಗೆ ತಿಳಿದಿರುವಂತೆ ವಿತರಣಾ ನ್ಯಾಯದ ಪರಿಕಲ್ಪನೆಯ ಒಂದು ವಿಶಿಷ್ಟ ಉದಾಹರಣೆಯಾಗಿದೆ. ಶಾಸಕಾಂಗ, ನ್ಯಾಯಾಧೀಶರು ಮತ್ತು ನಿರ್ವಾಹಕರು ಈಗ ವಿತರಣಾ ನ್ಯಾಯದ ಪರಿಕಲ್ಪನೆಯನ್ನು ತಿಳಿದಿದ್ದಾರೆ. ನಮ್ಮ ಸಂವಿಧಾನವು "ವಿತರಣಾ ನ್ಯಾಯ" ಎಂದು ಕರೆಯಲ್ಪಡುವದನ್ನು ನಿರ್ವಹಿಸಲು ರಾಜ್ಯವನ್ನು ಅನುಮತಿಸುತ್ತದೆ ಮತ್ತು ನಿರ್ದೇಶಿಸುತ್ತದೆ. ಕಾನೂನು ರಚಿಸುವ ಅರ್ಥಗಳು, ಇತರ ವಿಷಯಗಳ ನಡುವೆ, ಆರ್ಥಿಕ ಅಸಮಾನತೆಗಳನ್ನು ತೆಗೆದುಹಾಕುವುದು ಮತ್ತು ಸಮಾಜದಲ್ಲಿನ ಅಸಮಾನತೆಗಳ ನಡುವಿನ ವ್ಯವಹಾರಗಳು ಅಥವಾ ವಹಿವಾಟಿನಿಂದ ಉಂಟಾಗುವ ಅನ್ಯಾಯವನ್ನು ಸರಿಪಡಿಸುವುದು. ಸಮಾಜದ ಸದಸ್ಯರಲ್ಲಿ ನ್ಯಾಯದ ಸಂಪತ್ತಿನ ವಿಭಜನೆಯನ್ನು ಸಾಧಿಸಲು ಕಾನೂನನ್ನು ವಿತರಣಾ ನ್ಯಾಯದ ಸಾಧನವಾಗಿ

---

[1] ಲಿಂಗಪ್ಪ ವಿ. ಮಹಾರಾಷ್ಟ್ರರಾಜ್ಯ – ಎ.ಐ.ಆರ್ 1985 ಎಸ್.ಸಿ 389

ಬಳಸಬೇಕು: ಪ್ರತಿಯೊಬ್ಬರಿಂದ ಅವನ ಸಾಮರ್ಥ್ಯಕ್ಕೆ ಅನುಗುಣವಾಗಿ, ಪ್ರತಿಯೊಬ್ಬರಿಗೂ ಅವನ ಅಗತ್ಯಗಳಿಗೆ ಅನುಗುಣವಾಗಿ ವಿತರಣಾ ನ್ಯಾಯವು ಸಾಧಿಸುವುದಕ್ಕಿಂತ ಹೆಚ್ಚಿನದನ್ನು ಗ್ರಹಿಸುತ್ತದೆ, ಭೇದಾತ್ಮಕ ತೆರಿಗೆಯಿಂದ ಅಸಮಾನತೆ ಕಡಿಮೆಯಾಗುವುದನ್ನು, ಕೃಷಿ ಮತ್ತು ನಗರ ಎರಡೂ ಹಿಡುವಳಿಗಳ ಮೇಲೆ ಸೀಲಿಂಗ್ (ಮಿತಿಗಳನ್ನು) ಹೇರುವ ಮೂಲಕ ಅಥವಾ ಕೆಲವು ವಹಿವಾಟುಗಳನ್ನು ನಿಷೇಧಿಸುವ ಮೂಲಕ, ಒಪ್ಪಂದದ ವಹಿವಾಟುಗಳನ್ನು ನೇರವಾಗಿ ನಿಯಂತ್ರಿಸುವ ಮೂಲಕ ಮತ್ತು ಒಬ್ಬ ಹೊಂದಿರುವ ಆಸ್ತಿಯನ್ನು ಆಸ್ತಿ ಇಲ್ಲದ ಹಲವರಿಗೆ ವಿತರಿಸುವ ಮೂಲಕ, ಸಾಲ ಪರಿಹಾರದ ಮುಖೇನ. ಅಸಮರ್ಥವಾದ ಚೌಕಾಶಿ ಮೂಲಕ ತಮ್ಮ ಆಸ್ತಿಗಳಿಂದ ವಂಚಿತರಾದವರನ್ನು ಅವರ ಆಸ್ತಿಯಲ್ಲಿ ಪುನಃಸ್ಥಾಪಿಸಬೇಕು ಎಂದರ್ಥದಲ್ಲಿ. ಅಂತಹ ಎಲ್ಲಾ ಕಾನೂನುಗಳು ಸಮಾಜದ ಸದಸ್ಯರಲ್ಲಿ ಮೂಲ ಸಂಪನ್ಮೂಲಗಳ ನ್ಯಾಯಯುತ ವಿಭಜನೆಯನ್ನು ಸಾಧಿಸುವ ಸಾಧನವಾಗಿ ಸಂಪತ್ತಿನ ಬಲವಂತದ ಪುನರ್ವಿತರಣೆಯ ರೂಪವನ್ನು ತೆಗೆದುಕೊಳ್ಳಬಹುದು. ಅಥವಾ ಅನ್ಯಾಯದ ಒಪ್ಪಂದಗಳ ಶಾಸಕಾಂಗ ನಿಯಂತ್ರಣ ಇರಬಹುದು."

1991 ರಲ್ಲಿ, ಮಂಚೇಗೌಡ ಪ್ರಕರಣದಲ್ಲಿ[1] ಸುಪ್ರೀಮ್ ಕೋರ್ಟ್ ಹೀಗೆಂದಿದೆ, "ಶಾಸಕಾಂಗವು ನಿಸ್ಸಂದೇಹವಾಗಿ ಒಂದು ಶಾಸನವನ್ನು ಜಾರಿಗೆ ತರಲು ಸಮರ್ಥವಾಗಿದೆ, ಅಂತಹ ಮಂಜೂರು ಮಾಡಿದ ಜಮೀನುಗಳ, ಈ ಜಮೀನುಗಳನ್ನು ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡದವರ ಒಳತಿಗಾಗಿ ಮಾತ್ರ ಮಂಜೂರು ಮಾಡಲಾಗಿದ್ದು, ಅಂತಹ ಜಮೀನುಗಳ ವರ್ಗಾವಣೆಯನ್ನು ಅನೂರ್ಜಿತಗೊಳಿಸುತ್ತದೆ, ಕೇವಲ ಅನೂರ್ಜಿತವಲ್ಲ, ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡದವರ ಹಿತಾಸಕ್ತಿಗಳನ್ನು ಸರಿಯಾಗಿ ಕಾಪಾಡಲು ಮತ್ತು ರಕ್ಷಿಸಲು ಶಾಸನ ಮಾಡಲಾಗಿದೆ............ ಸುದೀರ್ಘವಾದ ಕಾನೂನು ಪ್ರಕ್ರಿಯೆಗಳು ನಿಸ್ಸಂದೇಹವಾಗಿ ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ

[1] ಮಂಚೇಗೌಡ ವಿ. ಕರ್ನಾಟಕ ರಾಜ್ಯ – ಎ.ಐ.ಆರ್ 1984 ಎಸ್.ಸಿ 1151

ಪಂಗಡದ ಸದಸ್ಯರ ಹಿತಾಸಕ್ತಿಗೆ ಪೀಡಿತವಾಗುತ್ತವೆ, ಯಾರ ಅನುಕೂಲಕ್ಕಾಗಿ ಮಂಜೂರು ಮಾಡಿದ ಭೂಮಿಯನ್ನು ವಾಪಸ್ ಪಡೆಯಲು ಉದ್ದೇಶಿಸಲಾಗಿದೆ, ಅಂತಹ ವರ್ಗಾವಣೆಯ ನಿಷೇಧಕ್ಕೆ ಸಂಬಂಧಿಸಿದ ಷರತ್ತನ್ನು ಉಲ್ಲಂಘಿಸಿ ಮೂಲ ಅನುದಾನ ಪಡೆದವರಿಂದ ವರ್ಗಾವಣೆಯ ಮೂಲಕ ಅಂತಹ ಮಂಜೂರು ಮಾಡಿದ ಭೂಮಿಯನ್ನು ಸ್ವಾಧೀನಪಡಿಸಿಕೊಳ್ಳುವ ಯಾವುದೇ ವ್ಯಕ್ತಿಯು ಅಂತಹ ಮಂಜೂರು ಮಾಡಿದ ಭೂಮಿಯನ್ನು ವರ್ಗಾವಣೆ ಮಾಡಲು ವಿಧಿಸಲಾಗಿರುವ ನಿಷೇಧದ ಬಗ್ಗೆ ತಿಳಿದಿರಬೇಕು ಎಂದು ಭಾವಿಸಬೇಕು. ಅಂತಹ ಮಂಜೂರು ಮಾಡಿದ ಭೂಮಿಯನ್ನು ವರ್ಗಾವಣೆಗೆ ಸಂಬಂಧಿಸಿದ ನಿಷೇಧಕ್ಕೆ ವಿರುದ್ಧವಾಗಿ ಅಂತಹ ಮಂಜೂರು ಭೂಮಿಯನ್ನು ಸ್ವಾಧೀನಪಡಿಸಿಕೊಳ್ಳುವುದು, ಮೌಲ್ಯಕ್ಕಾಗಿ ಉತ್ತಮ ಖರೀದಿದಾರ ಎಂದು ಪರಿಗಣಿಸಲಾಗುವುದಿಲ್ಲ; ಅಂತಹ ವರ್ಗಾವಣೆದಾರರು ತಮ್ಮ ಜ್ಞಾನಕ್ಕೆ ಮಂಜೂರು ಮಾಡಿದ ಭೂಮಿಗೆ ಅನೂರ್ಜಿತ ಮಾಲೀಕತ್ವವನ್ನು ಮಾತ್ರ ಪಡೆದುಕೊಳ್ಳುತ್ತಾರೆ ........ ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡಕ್ಕೆ ಸೇರಿದ ಮೂಲ ಅನುದಾನ ಪಡೆದವರ ಅನುಕೂಲ ಮತ್ತು ಸಂತೋಷಕ್ಕಾಗಿ ಅನುದಾನಿತ ಭೂಮಿಯನ್ನು ಉದ್ದೇಶಿಸಲಾಗಿದೆ .... ದೇಶದಲ್ಲಿ ಹಿಂದುಳಿದ ನಾಗರಿಕರು ಮತ್ತು ದುರ್ಬಲ ವರ್ಗಗಳಾಗಿ ಗುರುತಿಸಲ್ಪಟ್ಟ ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡದ ಸದಸ್ಯರ ಅನುಕೂಲಕ್ಕಾಗಿ ಈ ಕಾಯ್ದೆಯನ್ನು ನಿಸ್ಸಂದೇಹವಾಗಿ ಅಂಗೀಕರಿಸಲಾಗಿದೆ. ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡಕ್ಕೆ ಸೇರಿದ ವ್ಯಕ್ತಿಗಳನ್ನು ಪ್ರತ್ಯೇಕ ಮತ್ತು ವಿಭಿನ್ನ ವರ್ಗಗಳೆಂದು ಪರಿಗಣಿಸಲಾಗುವುದಿಲ್ಲ, ಅದರಲ್ಲೂ ವಿಶೇಷವಾಗಿ ಅವರ ಆರ್ಥಿಕ ಮತ್ತು ಶೈಕ್ಷಣಿಕ ಹಿತಾಸಕ್ತಿಗಳ ಸಂರಕ್ಷಣೆ ಮತ್ತು ರಕ್ಷಣೆಯ ವಿಷಯದಲ್ಲಿ ಯಾವುದೇ ರೀತಿಯ ಅನುಮಾನಗಳಿಲ್ಲ. ಈ ಎರಡು ವರ್ಗಗಳ ವಿಲಕ್ಷಣ ಅವಸ್ಥೆಯ ದೃಷ್ಟಿಯಿಂದ, ಸಂವಿಧಾನದ ವಿಧಿ 15 (4) ರ ಅಡಿಯಲ್ಲಿರುವ ಸಂವಿಧಾನವು ಈ ಎರಡು ವರ್ಗಗಳ ಬಗ್ಗೆ ನಿರ್ದಿಷ್ಟ ಉಲ್ಲೇಖವನ್ನು ನೀಡುತ್ತದೆ ಮತ್ತು ವಿಧಿ 16 (4) ರ ಅಡಿಯಲ್ಲಿ ಹಿಂದುಳಿದ ವರ್ಗದ ನಾಗರಿಕರ ಬಗ್ಗೆ ಹೇಳುತ್ತದೆ. ಸಂವಿಧಾನದ 46 ನೇ ವಿಧಿ ಅಡಿಯಲ್ಲಿರುವ ನಿರ್ದೇಶನ ತತ್ವಗಳಲ್ಲಿ "ರಾಜ್ಯವು

ದುರ್ಬಲ ವರ್ಗದ ಜನರ ಮತ್ತು ನಿರ್ದಿಷ್ಟವಾಗಿ ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡದವರ ಶೈಕ್ಷಣಿಕ ಮತ್ತು ಆರ್ಥಿಕ ಹಿತಾಸಕ್ತಿಗಳನ್ನು ವಿಶೇಷ ಕಾಳಜಿಯಿಂದ ಉತ್ತೇಜಿಸುತ್ತದೆ ಮತ್ತು ಅವುಗಳನ್ನು ಸಾಮಾಜಿಕ ಅನ್ಯಾಯ ಮತ್ತು ಎಲ್ಲಾ ರೀತಿಯ ಶೋಷಣೆಗಳಿಂದ ರಕ್ಷಿಸುತ್ತದೆ, "ಈ ಕಾಯ್ದೆಯ ಉದ್ದೇಶವೆಂದರೆ ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡಕ್ಕೆ ಸೇರಿದ ವ್ಯಕ್ತಿಗಳ ಶೋಷಣೆಯನ್ನು ತಡೆಯಲು ಅವರ ಆರ್ಥಿಕ ಹಿತಾಸಕ್ತಿಗಳನ್ನು ರಕ್ಷಿಸುವುದು ಮತ್ತು ಸಂರಕ್ಷಿಸುವುದು. ಪ್ರಸ್ತುತ ಕಾಯ್ದೆಯ ಉದ್ದೇಶಕ್ಕಾಗಿ, ವರ್ಗೀಕರಣವು ಸಾಧಿಸಲು ಪ್ರಯತ್ನಿಸಿದ ವಸ್ತುಗಳಿಗೆ ಸ್ಪಷ್ಟವಾದ ಸಂಬಂಧವಾಗಿದೆ. ಆದ್ದರಿಂದ, ಮಂಜೂರಾದ ಭೂಮಿಯನ್ನು ಪುನರಾರಂಭಿಸಲು ಮಾಡಿದ ವಿಶೇಷ ನಿಬಂಧನೆಗಳನ್ನು ಮೂಲತಃ ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡದ ಸದಸ್ಯರಿಗೆ ನೀಡಲಾಗಿದೆ ಮತ್ತು ಅದನ್ನು ಮೂಲ ಅನುದಾನ ನೀಡುವವರಿಗೆ ಅಥವಾ ಅವರ ಉತ್ತರಾಧಿಕಾರಿಗಳಿಗೆ ಮತ್ತು ಕಾನೂನು ಪ್ರತಿನಿಧಿಗಳಿಗೆ ವಾಪಸ್ ಕೊಡಿಸುತ್ತದೆ. ಅವುಗಳಲ್ಲಿ ಇತರೆ ಸಮುದಾಯಗಳ ಸದಸ್ಯರನ್ನು ವಿಫಲಗೊಳಿಸುವುದರಿಂದ ಸಂವಿಧಾನದ 14 ನೇ ವಿಧಿಯನ್ನು ಉಲ್ಲಂಘಿಸುವುದಿಲ್ಲ."

ಪ್ರಕರಣವೊಂದರಲ್ಲಿ ನ್ಯಾಯಾಧೀಶರು ಸಂವಿಧಾನ ವಿಧಿ 39 (ಬಿ) ಮತ್ತು ಸಂವಿಧಾನದ 46 ನೇ ವಿಧಿ ಗಮನ ಸೆಳೆದು ಹೀಗೆಂದಿದ್ದಾರೆ, "ಆರ್ಥಿಕ ನ್ಯಾಯವು ಸ್ವಾತಂತ್ರ್ಯದ ಒಂದು ಮುಖವಾಗಿದೆ, ಅದಿಲ್ಲದೇ ವ್ಯಕ್ತಿಯ ಸಮಾನತೆ ಮತ್ತು ವ್ಯಕ್ತಿಯ ಘನತೆ ಭ್ರಮೆಗಳನ್ನು ಕೀಟಲೆ ಮಾಡುತ್ತದೆ"[1]

ರಾಜ್ಯ ನೀತಿಯ ನಿರ್ದೇಶನ ತತ್ವಗಳನ್ನು (ಡೈರೆಕ್ಟೀವ್ ಪ್ರಿನ್ಸಿಪಲ್ಸ್ ಆಫ್ ಸ್ಟೇಟ್ ಪಾಲಿಸಿ) ಒಳಗೊಂಡಂತೆ ಸಂವಿಧಾನದ ಮುನ್ನುಡಿಯಲ್ಲಿ ನಮೂದಿಸಲಾದ ಉದ್ದೇಶದೊಂದಿಗೆ ಈ ಕಾಯ್ದೆಯನ್ನು ಜಾರಿಗೆ ತರಲಾಯಿತು. ಸಮಾಜದ ದುರ್ಬಲ ವರ್ಗಗಳಿಗೆ ಸೇರಿದ ವ್ಯಕ್ತಿಗಳ ಸಾಮಾಜಿಕ ಮತ್ತು ಆರ್ಥಿಕ ಸ್ಥಿತಿಗತಿಗಳನ್ನು ಸುಧಾರಿಸಲು ಮತ್ತು

---

[1] ಪಾಪಯ್ಯ ವಿ. ಕರ್ನಾಟಕ ರಾಜ್ಯ – 1996 (10) ಎಸ್.ಸ್.ಸಿ 533

ನಿರ್ದಿಷ್ಟವಾಗಿ, ಎಸ್ಸಿ ಮತ್ತು ಎಸ್ಟಿ ವರ್ಗಗಳಿಗೆ ಸೇರಿದವರು. ಅನುದಾನದ ನಿಯಮಗಳನ್ನು ಉಲ್ಲಂಘಿಸಿ ಭೂಮಿಯ ಯಾವುದೇ ವರ್ಗಾವಣೆ ನಡೆದಿರುವುದು ಕಂಡುಬಂದರೆ, ಭೂಮಿಯನ್ನು ವಾಪಸ್ ಪಡೆಯಲು ಮತ್ತು ಅದನ್ನು ಅನುದಾನ ನೀಡುವವರಿಗೆ ಪುನಃ ಕೊಡಲು ಕಾಯ್ದೆ ನಿಬಂಧನೆಗಳ ಕಾರಣದಿಂದ ರಾಜ್ಯಕ್ಕೆ ಅಧಿಕಾರ ನೀಡಲಾಗಿದೆ. ಅನಗತ್ಯ ವಿಳಂಬವನ್ನು ತಪ್ಪಿಸಲು ಅಥವಾ ವಿಚಾರಣೆಯನ್ನು ವಿಳಂಬ ತಡೆ ಉದ್ದೇಶದಿಂದ ಅಂತಹ ವಾಪಸ್ ಪಡೆಯುವ ಆದೇಶವನ್ನು ರವಾನಿಸಬೇಕಾಗುತ್ತದೆ.[1]

"ನಾವು ಪಿ.ಟಿ.ಸಿ.ಎಲ್ ಕಾಯ್ದೆಯನ್ನು ಭಾರತೀಯ ಸಮಾಜದ ಹಿಂದುಳಿದ ವರ್ಗಗಳಿಗೆ ಮಂಜೂರು ಮಾಡಿದ ಭೂಮಿಯನ್ನು ಅವರು ಆನಂದಿಸುವ ಮತ್ತು ಮುಂದುವರಿಸುವ ರೀತಿಯಲ್ಲಿ ಓದಲು ಮತ್ತು ರಚಿಸಲು ಬದ್ಧರಾಗಿದ್ದೇವೆ. ಅನುಮಾನದ ಲಾಭ ಅಥವಾ ಶಾಸನದ ನಿರ್ಮಾಣವು ಖರೀದಿದಾರರಿಗೆ ದಬ್ಬಾಳಿಕೆಯಂತೆ ಕಂಡುಬರುತ್ತದೆಯಾದರೂ ಅದು ಅನುದಾನ ಪಡೆದವರ / ಮಾರಾಟಗಾರರ ಅನುಕೂಲಕ್ಕೆ ತಕ್ಕಂತೆ ಇರಬೇಕು. ಅಂತಹ ಭೂಮಿಯನ್ನು ವರ್ಗಾವಣೆ ಮಾಡಲು ಕಾನೂನುಬದ್ಧ ಅನುಮತಿಯನ್ನು ಪಡೆದುಕೊಳ್ಳಲು, ಖರೀದಿದಾರರಿಗೆ ಎಲ್ಲಿದೆ ಎಂದು ನಾವು ನೆನಪಿಸಿಕೊಳ್ಳುವಾಗ ಜಾರಿಮಾಡುವಿಕೆ ಗಣನೀಯವಾಗಿ ಹಗುರವಾಗುತ್ತದೆ."[2]

ಕರ್ನಾಟಕ ಹೈಕೋರ್ಟ್ ಸದರಿ ಕಾಯ್ದೆಯ ಮಹತ್ತರ ಉದ್ದೇಶಗಳನ್ನು ಉಲ್ಲೇಖಿಸಿ ಗ್ರಾಂಟಿದಾರರ ವಾರಸ್ಸಿಗೆ ಬಿ.ಡಿ.ಎ ವತಿಯಿಂದ ಭೂಸ್ವಾಧೀನದ ಪರಿಹಾರದ ಪರ್ಯಾಯವಾಗಿ ಸೈಟು ಮತ್ತು ಮನೆ ಕಟ್ಟಿಕೊಡಲು ಆದೇಶಿಸುತ್ತದೆ. "ವಿಷಯದ ಭೂಮಿಯನ್ನು ಮೂಲತಃ ಕೃಷಿ ಭೂಮಿಯ ಒಂದು ಭಾಗವಾಗಿ ಗ್ರಾಂಟ್ ಮಾಡಲಾಗಿತ್ತು, ಇದು ಸಮಾಜದ ದುರ್ಬಲ ವರ್ಗದ ವ್ಯಕ್ತಿಗಳಿಗೆ ಜೀವನೋಪಾಯದ ಮೂಲವನ್ನು ಹೊಂದಲು ಅನುವು ಮಾಡಿಕೊಡುತ್ತದೆ, ಇಲ್ಲದಿದ್ದರೆ ಸಮಾಜದಲ್ಲಿ ಅಂತಹ ವ್ಯಕ್ತಿಗಳು ಎಂದಿಗೂ ತಮ್ಮದೇ ಆದ ಭೂಮಿಯನ್ನು ಹೊಂದಲು ಸಮರ್ಥರಾಗಿರಲಿಲ್ಲ,

---

[1] ಹರಿಶ್ಚಂದ್ರ ಹೆಗ್ಡೆ ವಿ. ಕರ್ನಾಟಕರಾಜ್ಯ – 2004 (9) ಎಸ್.ಸಿ.ಸಿ 780

[2] ವೆಂಕಟರೆಡ್ಡಿ ವಿ. ಜಿಲ್ಲಾಧಿಕಾರಿಗಳು – ಐ.ಎಲ್.ಆರ್ 2012 ಕರ್ 3168 (ಡಿ.ಬಿ)

ಅದು ಅವರು ತಮ್ಮ ಜೀವನೋಪಾಯವನ್ನು ಸಂಪಾದಿಸಲು ಬೆಳೆಸಬಹುದು. ........ ಅಂತಹ ಸಾಮಾಜಿಕವಾಗಿ ಖಿನ್ನತೆಗೆ ಒಳಗಾದ ಮತ್ತು ಶೋಷಿತ ವರ್ಗದ ವ್ಯಕ್ತಿಗಳನ್ನು ಸಕ್ರಿಯಗೊಳಿಸುವುದಕ್ಕಾಗಿ, ಅಂತಹ ಸಾಮಾಜಿಕವಾಗಿ ಹಿಂದುಳಿದ ಸಮುದಾಯಕ್ಕೆ ಸೇರಿದ ವ್ಯಕ್ತಿಗಳ ಪರವಾಗಿ ಸರ್ಕಾರಿ ಭೂಮಿಯನ್ನು ನೀಡುವ ಯೋಜನೆಯನ್ನು ಸ್ವಾತಂತ್ರ್ಯ ಪೂರ್ವದ ದಿನಗಳಿಂದಲೂ ಜಾರಿಗೆ ತರಲಾಗಿದೆ. 1978 ರಲ್ಲಿ ಜಾರಿಗೆ ಬಂದ ಎಸ್‌ಸಿ / ಎಸ್‌ಟಿ ಕಾಯ್ದೆಯ ಗುರಿ ಮತ್ತು ಉದ್ದೇಶವೆಂದರೆ, ಕಂದಾಯ ಭೂಮಿಯನ್ನು ಮಂಜೂರು ಮಾಡಿದ ಅಂತಹ ವ್ಯಕ್ತಿಗಳು ಸಂಪೂರ್ಣ ಅಜ್ಞಾನ ಅಥವಾ ಬಡತನದಿಂದ ಅಥವಾ ಬೇರೆ ಯಾವುದೇ ಕಾರಣಕ್ಕಾಗಿ ಭೂಮಿಯನ್ನು ಕಳೆದುಕೊಳ್ಳದಂತೆ ನೋಡಿಕೊಳ್ಳುವುದು ಮತ್ತು ಅವರು ಅನುದಾನದ ನಿಯಮಗಳನ್ನು ಉಲ್ಲಂಘಿಸಿ ಭೂಮಿಯನ್ನು ಪರಭಾರೆ ಮಾಡಿದ್ದರೆ, ಭೂಮಿಯನ್ನು ಮಂಜೂರು ಮಾಡುವ ಉದ್ದೇಶವೇ ಸೋಲಿಸಲ್ಪಡುತ್ತದೆ, ಅಂತಹ ಪರಭಾರೆಗಳೆಲ್ಲವೂ ಅನೂರ್ಜಿತವಾಗಿದೆಯೆ ಎಂದು ಖಚಿತಪಡಿಸಿಕೊಳ್ಳಲು ಶಾಸಕಾಂಗವು ಹೆಜ್ಜೆ ಹಾಕಿತು ಮತ್ತು ಕರ್ನಾಟಕ ಭೂ ಕಂದಾಯ ಕಾಯ್ದೆಯಡಿ ಕಾರ್ಯನಿರ್ವಹಿಸುತ್ತಿರುವ ಉಪವಿಭಾಗ ಅಧಿಕಾರಿಗಳು ಮೂಲ ಅನುದಾನ ನೀಡುವವರು ಜೀವಂತವಾಗಿರದಿದ್ದರೆ, ಭೂಮಿಯನ್ನು ಮೂಲ ಅನುದಾನ ಪಡೆದವರಿಗೆ ಅಥವಾ ಕಾನೂನುಬದ್ಧ ವಾರಸುದಾರರಿಗೆ ಮರುಸ್ಥಾಪಿಸುವುದನ್ನು ಖಚಿತಪಡಿಸಿಕೊಳ್ಳಲು ಈ ವಿಷಯದ ಬಗ್ಗೆ ವಿಚಾರಿಸಲು ಅಧಿಕಾರ ನೀಡಲಾಗಿದೆ. ............ ಎಸ್‌ಸಿ / ಎಸ್‌ಟಿ ಕಾಯ್ದೆಯ ನಿಬಂಧನೆಗಳ ಪ್ರಕಾರ, ಸಮಾಜ ಕಲ್ಯಾಣ ಶಾಸನದ ಒಂದು ಭಾಗ, ವರ್ಗಾವಣೆ ಅನುದಾನದ ಷರತ್ತುಗಳನ್ನು ಉಲ್ಲಂಘಿಸಿದರೆ, ಕಾಯ್ದೆ ಜಾರಿಗೆ ಬರಲು ಬಹಳ ಹಿಂದೆಯೇ ಮಾಡಿದ ಪರಭಾರೆಯನ್ನು ರದ್ದುಪಡಿಸಿ, ಮತ್ತು ಅಂತಹ ಭೂಮಿಯನ್ನು ಮೂಲ ಅನುದಾನ ಪಡೆದವರಿಗೆ ಅಥವಾ ಅವರ ಸಂತತಿಗೆ ಪುನಃ ಕೊಡಿಸುವುದು. ...... ಹಾಲಿ ಕೇಸಿನಲ್ಲಿ ಎ.ಸಿ. ಮತ್ತು ಡಿ.ಸಿ ನ್ಯಾಯಾಲಯಗಳಲ್ಲಿ ಗ್ರಾಂಟಿ ಜಯಗಳಿಸಿದರೂ ಹೈಕೋರ್ಟಿನಲ್ಲಿ ಇರುವಾಗ ಬಿ.ಡಿ.ಎ ಭೂಸ್ವಾಧೀನ ಪಡಿಸಿಕೊಂಡ ಕಾರಣ .....

ಸ್ವಾಧೀನಪಡಿಸಿಕೊಳ್ಳುವ ಪ್ರಾಧಿಕಾರದ ಗುರಿ ಮತ್ತು ಉದ್ದೇಶ ಮೂಲಭೂತವಾಗಿ ವಸತಿ ಪ್ಲಾಟ್‌ಗಳನ್ನು ರೂಪಿಸುವುದು, ಮತ್ತು ಈಗ ಭೂಮಿ ಬೆಂಗಳೂರು ನಗರದ ಸುತ್ತಮುತ್ತಲಿನ ಪ್ರದೇಶಗಳಲ್ಲಿರುವುದರಿಂದ, ಅರ್ಜಿದಾರರು ತಮ್ಮ ಜೀವನೋಪಾಯವನ್ನು ಹೊರಹಾಕಲು ಮತ್ತು ಭೂಮಿಯನ್ನು ಪುನರಾರಂಭಿಸಲು ಯಾವುದೇ ಮಾರ್ಗವಿಲ್ಲ. ಅಂತಹ ಸಾಧ್ಯತೆಯ ಅನುಪಸ್ಥಿತಿ, ಬಹುಶಃ, ಅರ್ಜಿದಾರರಿಗೆ ಅವರ ತಲೆಯ ಮೇಲೆ ಕನಿಷ್ಠ ಮೇಲ್ಛಾವಣಿಯನ್ನು ಒದಗಿಸಬೇಕು ಮತ್ತು ಮೂಲ ಅನುದಾನ ಪಡೆದವರ ಪ್ರಸ್ತುತ ಉತ್ತರಾಧಿಕಾರಿಗಳ ಸ್ಥಿತಿ ಮತ್ತು ಸಾಮರ್ಥ್ಯವನ್ನು ಗಮನಿಸುವುದಾದರೆ, ಅರ್ಜಿದಾರರ ಸಾಧ್ಯತೆಯಲ್ಲಿ ಅರ್ಜಿದಾರರು ಸೈಟ್ ಅನ್ನು ಸ್ವಾಧೀನಪಡಿಸಿಕೊಳ್ಳಲು ಅಥವಾ ಸೈಟ್ನಲ್ಲಿ ಮನೆ ನಿರ್ಮಿಸಲು ಸಮರ್ಥವಾಗಿರದ ಕಾರಣ ಅವರ ತಲೆಯ ಮೇಲೆ ಮೇಲ್ಛಾವಣಿಯನ್ನು ಪಡೆಯುವುದು ಮತ್ತೆ ಮಂಕಾಗಿರುತ್ತದೆ. ...... ಸಮಾಜದ ಸಾಮಾಜಿಕವಾಗಿ ಹಿಂದುಳಿದ ಮತ್ತು ಶೋಷಿತ ವರ್ಗಗಳನ್ನು ಪುನರ್ವಸತಿ ಮಾಡಲು ಮತ್ತು ಶಕ್ತಗೊಳಿಸಲು ರಾಜ್ಯ ಸರ್ಕಾರವು ಅನೇಕ ಪ್ರಯೋಜನಕಾರಿ ಯೋಜನೆಗಳೊಂದಿಗೆ ಬರುತ್ತಿರುವುದರಿಂದ ಮತ್ತು ಪ್ರಸ್ತುತ ಪ್ರಕರಣದ ವಿಶಿಷ್ಟ ಸಂದರ್ಭಗಳಲ್ಲಿ, ಅಭಿವೃದ್ಧಿ ಪ್ರಾಧಿಕಾರವು ಈಗಾಗಲೇ ಅವಾರ್ಡ್ ಮಾಡಿರುವ ಮೊತ್ತವನ್ನು ಅರ್ಜಿದಾರರು ಸ್ವೀಕರಿಸುವಂತೆ ಕೇಳುವ ಬದಲು 40 X 60 ಅಡಿಗಳಿಗಿಂತ ಕಡಿಮೆಯಿಲ್ಲದ ಅಳತೆಯ ಸೈಟಿನಲ್ಲಿ ಬಿಡಿಎ ವೆಚ್ಚದಲ್ಲಿ ಸೈಟ್ನಲ್ಲಿ 100 ಚದರ ಮೀಟರ್‌ಗಿಂತ ಕಡಿಮೆಯಿಲ್ಲದಂತೆ, ಅದು ನಿವಾಸಿಗಳ ತಲೆಯ ಮೇಲೆ ಬೀಳದಂತೆ ಜಾಗ್ರತೆ ವಹಿಸಿ, ಉಳಿದ ಪ್ರದೇಶವನ್ನು ಹಂಚಿಕೆ ಮಾಡುವುದು..."[1] ಈ ತೀರ್ಪಿನಿಂದ ತೃಪ್ತರಾಗದೆ ಭೂ ಸ್ವಾಧೀನವನ್ನೇ ಪ್ರಶ್ನಿಸಿ ಸದರಿ ಭೂಸ್ವಾಧೀನ ಲ್ಯಾಪ್ಸ್ ಆಗಿದೆ ಎಂದು ರಿಟ್ ಅಪೀಲು 4211/2011 ಸಲ್ಲಿಸುತ್ತಾರೆ. ಸದರಿ ಅಪೀಲನ್ನು ವಜಾ ಮಾಡಿ ಏಕಸದಸ್ಯ ಪೀಠದ ಮೇಲಿನ ತೀರ್ಪನ್ನೂ ರದ್ದು ಮಾಡಿ ಆದೇಶವಾಗಿರುತ್ತದೆ.[2] 1967 ಮತ್ತು 1969 ರಲ್ಲೇ

---

[1] ನಂಜಮ್ಮ ವಿ. ಕರ್ನಾಟಕ ರಾಜ್ಯ – 2011 (3) ಕೆ.ಸಿ.ಸಿ.ಆರ್ 2014

[2] ನಂಜಮ್ಮ ವಿ. ಕರ್ನಾಟಕ ರಾಜ್ಯ – ಮನು/ಕೆ.ಎ/3285/2019 (ಡಿ.ಬಿ)

ಕ್ರಯ ಮಾಡಿದ್ದಾರೆ, 1982 ರಲ್ಲಿ ಭೂಸ್ವಾದೀನ ಆಗಿದೆ. ಆ ಸಮಯದಲ್ಲಿ ಪಿ.ಟಿ.ಸಿ.ಎಲ್ ಕಾಯ್ದೆಯಲ್ಲಿ ಕ್ರಮವನ್ನೂ ನಡೆಸಿರುವುದಿಲ್ಲ. ಪ್ರಾರ್ಥಮಿಕ ಅಧಿಸೂಚನೆ ಸಮಯದಲ್ಲಿ ಅವರು ಮಾಲೀಕರೂ ಅಲ್ಲ ಪಹಣಿಯಲ್ಲಿ ಹೆಸರೂ ಇಲ್ಲ, 2008 ರಲ್ಲಿ ಅವರ ಪಿ.ಟಿ.ಸಿ.ಎಲ್ ಪ್ರಕರಣ ಮುಕ್ತಾಯ ಕಂಡಿರುತ್ತದೆ, ಆ ಸಮಯಕ್ಕೆ ಭೂಸ್ವಾಧೀನ ಪೂರ್ಣವಾಗಿರುತ್ತದೆ. ಆ ಸಮಯದಲ್ಲಿ ಏಕಸದಸ್ಯ ಪೀಠ ನೀಡಿದ ತೀರ್ಪು ಸರಿಯಲ್ಲ. ಅರ್ಜಿದಾರರು ಭೂಸ್ವಾಧೀನದ ಫಲವನ್ನು ಪಡೆಯಲು ಅನರ್ಹರು, ಕೇಸಿನಲ್ಲಿ ಭೂಮಾಲೀಕರನ್ನು ಪಾರ್ಟಿ ಮಾಡಿರುವುದಿಲ್ಲ.

ಅನುದಾನದ ನಿಯಮಗಳು ಮತ್ತು ಷರತ್ತುಗಳನ್ನು ಉಲ್ಲಂಘಿಸಿ ಮಂಜೂರು ಮಾಡಿದ ಭೂಮಿಯನ್ನು ಪರಕೀಯಗೊಳಿಸುವುದನ್ನು ಅನೂರ್ಜಿತವೆಂದು ಘೋಷಿಸುವುದನ್ನು ನೋಡಲು ಪಿ.ಟಿ.ಸಿ.ಎಲ್ ಕಾಯ್ದೆಯ ಉದ್ದೇಶ, ಅಂತಹ ಭೂಮಿಯನ್ನು ಪುನರ್ ವಶಪಡಿಸಿಕೊಳ್ಳಬೇಕು ಮತ್ತು ಅನುದಾನ ಪಡೆದವರನ್ನು ಪುನಃಸ್ಥಾಪಿಸಬೇಕು. ಸಮಾಜದ ದುರ್ಬಲ ವರ್ಗಗಳಿಗೆ, 2 ನೇ ಪ್ರತಿವಾದಿಯಿಂದ (ಅಧಿಕಾರಿಗಳಿಂದ) ಭೂಮಿಯನ್ನು ಪುನಃಸ್ಥಾಪಿಸಲು ಅವರಿಗೆ ಅನುಕೂಲವಾಗಬೇಕು, ಏಕೆಂದರೆ ಅವರು ಭೂಮಿಯನ್ನು ಕೃಷಿ ಮಾಡುವ ಉದ್ಯೋಗವನ್ನು ಹೊಂದಿರಬೇಕು ಮತ್ತು ತಮ್ಮ ಮತ್ತು ತಮ್ಮ ಕುಟುಂಬ ಸದಸ್ಯರಿಗೆ ತಮ್ಮ ಜೀವನೋಪಾಯಕ್ಕಾಗಿ ಸಂಪಾದಿಸಬೇಕು. ರಾಜ್ಯ ನೀತಿಯ ನಿರ್ದೇಶನ (ಡೈರೆಕ್ಟೀವ್ ಪ್ರಿನ್ಸಿಪಲ್ಸ್) ತತ್ವಗಳಲ್ಲಿ ಪ್ರತಿಪಾದಿಸಿರುವ ಸಾಂವಿಧಾನಿಕ ಆದೇಶ.[1]

**ಎಸ್.ಸಿ, ಎಸ್.ಟಿ ಜನರ ಪಿತ್ರಾರ್ಜಿತ ಸ್ವತ್ತಿಗೆ ಅನ್ವಯಿಸದು**

ಪಿ.ಟಿ.ಸಿ.ಎಲ್ ಕಾಯ್ದೆ ಗ್ರಾಂಟ್ ಜಮೀನಿಗೆ ಮಾತ್ರ ಅನ್ವಯಿಸುತ್ತದೆ, ಅದು ತುಳಿತಕ್ಕೆ ಒಳಗಾದ ವರ್ಗದ ಪೂರ್ವಜರ ಸ್ವತ್ತಿಗೆ ಮತ್ತು ಸ್ವತಂತ್ರವಾಗಿ ಅರ್ಜಿಸಿದ ಅವರ ಸ್ವತ್ತಿಗೆ ಅನ್ವಯಿಸುವುದಿಲ್ಲ.[2]

---

[1] ತಿಪ್ಪಾನಾಯ್ಕ ವಿ. ಜಿಲ್ಲಾಧಿಕಾರಿಗಳು – 2010 (1) ಕರ್.ಎಲ್.ಜೆ 275 (ಡಿ.ಬಿ)

[2] ತಿಮ್ಮಯ್ಯ ವಿ. ವಿಶೇಷ ಜಿಲ್ಲಾಧಿಕಾರಿ – 2018 (2) ಕೆ.ಸಿ.ಸಿ.ಆರ್ 1912

ಒಮ್ಮೆ ಗ್ರಾಂಟ್ ಆಗಿ ಅದನ್ನು ನಿಯಮ ಉಲ್ಲಂಘಿಸದೆ ಮಾರಾಟಮಾಡಿ, ನಂತರ ಅದೇ ಜಮೀನನ್ನು ಗ್ರಾಂಟಿ ಖರೀದಿಸಿರುವಾಗಲು ಅದು ಗ್ರಾಂಟ್ ಜಮೀನು ಆಗದು. (ರಿಟ್ ಅಪೀಲು; 6610/2017)[1]

ಅಕ್ಯುಪೆನ್ಸಿ (ಸ್ವಾಧೀನದ) ಹಕ್ಕಿನಿಂದ ಪ್ರಾಪ್ತವಾದ ಗ್ರಾಂಟ್ ಪಿ.ಟಿ.ಸಿ.ಎಲ್ ವ್ಯಾಪ್ತಿಗೆ ಬರುವುದಿಲ್ಲ. ಇಲ್ಲಿ ಭೂಸುದಾರಣೆ ಕಾಯ್ದೆಯಲ್ಲಿ ಟೆನೆನ್ಸಿ ಹಕ್ಕಾಗಿ ಪರಿಶಿಷ್ಟ ಜಾತಿ ವ್ಯಕ್ತಿಗೆ ಗ್ರ್ಯಾಂಟ್ ಆಗಿರುವ ಬಗ್ಗೆ ಕರ್ನಾಟಕ ಹೈಕೋರ್ಟ್– (ರಿಟ್ ಪೆಟೀಷನ್; 51716/2016)[2] ತೀರ್ಪು ನೀಡಿದೆ.

ಪರಿಶಿಷ್ಟರು ಎಂದು ಜಮೀನು ಗ್ರಾಂಟ್ ಮಾಡಿಲ್ಲವಾದರೆ ಅಂತಹ ಸಂಧರ್ಬದಲ್ಲಿ ಪಿ.ಟಿ.ಸಿ.ಎಲ್ ಕಾಯ್ದೆ ಅನ್ವಯವಾಗದು ಎಂದು ಕರ್ನಾಟಕ ಹೈಕೋರ್ಟಿನ ದ್ವಿಸದಸ್ಯ ಪೀಠ ಹೇಳಿದೆ,[3] "...........ಈ ಹಿನ್ನೆಲೆಯಲ್ಲಿ ನಾವು ವಿಷಯವನ್ನು ಪರಿಶೀಲಿಸಿದ್ದೇವೆ. ಜಿಎಂಎಫ್ ಯೋಜನೆಯಡಿ ಮರಪ್ಪಾಗೆ ಪ್ರಶ್ನಾರ್ಹ ಭೂಮಿಯನ್ನು ನೀಡಲಾಗಿದೆ ಎಂಬುದು ಒಪ್ಪಿಕೊಳ್ಳಬಹುದಾಗಿದೆ. ಜಿಎಂಎಫ್ ಯೋಜನೆಯಡಿ ಜಮೀನು ಗುತ್ತಿಗೆ ಯಾವುದೇ ನಿರ್ದಿಷ್ಟ ಜಾತಿ ಅಥವಾ ಸಮುದಾಯಕ್ಕೆ ಸೀಮಿತವಾಗಿಲ್ಲ. ಭಾರತದಲ್ಲಿ ಆಹಾರದ ಕೊರತೆ ಇದ್ದುದರಿಂದ, ಅದೇ ವ್ಯಕ್ತಿಯ ಪರವಾಗಿ ಭೂಮಿಯನ್ನು ದೃಢೀಕರಿಸಲಾಗುವುದು ಎಂಬ ಆಯ್ಕೆಯನ್ನು ನೀಡುವ ಮೂಲಕ ರೈತರನ್ನು ಷರತ್ತಿನೊಂದಿಗೆ ಗುತ್ತಿಗೆಗೆ ತೆಗೆದುಕೊಳ್ಳಲು ರೈತರನ್ನು ಉತ್ತೇಜಿಸಲು ಯೋಜನೆಯನ್ನು ತರಲಾಯಿತು. ಅದರಂತೆ, ಹೆಚ್ಚಿನ ಆಹಾರವನ್ನು ಬೆಳೆಯಲು ಆಸಕ್ತಿ ಹೊಂದಿರುವ ರೈತರು ಭೂಮಿಯನ್ನು ಗುತ್ತಿಗೆಗೆ ತೆಗೆದುಕೊಂಡಿದ್ದಾರೆ ಮತ್ತು ನಂತರ ಭೂಮಿಯನ್ನು ಅವರಿಗೆ ಸೀಮಿತಗೊಳಿಸಲಾಗಿದೆ. 'ಗ್ರೋ ಮೋರ್ ಫುಡ್ ಸ್ಕೀಮ್' ಅಡಿಯಲ್ಲಿ ಭೂಮಿಯನ್ನು ತೆಗೆದುಕೊಂಡಾಗ, ಗುತ್ತಿಗೆದಾರನು ಮೊದಲ ವರ್ಷ ಬಾಡಿಗೆ ಅಥವಾ ಗುತ್ತಿಗೆ ಪಾವತಿಸುವ ಅಗತ್ಯವಿಲ್ಲ ಮತ್ತು ನಂತರದ ವರ್ಷಗಳವರೆಗೆ ಭೂಮಿಯ ಮೌಲ್ಯಮಾಪನದ

---

[1] ದರ್ಮಲಿಂಗಮ್ ವಿ. ಕರ್ನಾಟಕ ರಾಜ್ಯ – ಮನು/ ಕೆ.ಎ/4892/2019 (ಡಿ.ಬಿ)

[2] ಸಿದ್ದರಾಮು ವಿ. ಕರ್ನಾಟಕ ರಾಜ್ಯ – 2017 (5) ಕರ್.ಎಲ್.ಜೆ 495

[3] ಮುನಿರಾಜು ವಿ. ಕರ್ನಾಟಕ ರಾಜ್ಯ – 2015 (4) ಕೆ.ಸಿ.ಸಿ.ಆರ್ 3291 (ಡಿ.ಬಿ)

ಅರ್ಧದಷ್ಟು ಹಣವನ್ನು ಅವನು ಪಾವತಿಸಬೇಕಾಗಿತ್ತು. ಸನ್ನಿವೇಶಗಳಲ್ಲಿ, ಮರಪ್ಪಾಗೆ (ಗ್ರಾಂಟಿಗೆ) 'ಗ್ರೋ ಮೋರ್ ಫುಡ್ ಸ್ಕೀಮ್' ಅಡಿಯಲ್ಲಿ ಗುತ್ತಿಗೆಗೆ ಭೂಮಿಯನ್ನು ಮಂಜೂರು ಮಾಡಿದರೆ ಮತ್ತು ನಂತರ ಅದನ್ನು ಅವನಿಗೆ ದೃಢೀಕರಿಸಿದರೆ, ಅವನನ್ನು ಪರಿಶಿಷ್ಟ ಜಾತಿ ಎಂದು ಪರಿಗಣಿಸಿ ಅಥವಾ ಖಿನ್ನತೆಗೆ ಒಳಗಾದ ವ್ಯಕ್ತಿ ಎಂದು ನೀಡಿಲ್ಲವಾದರೆ, ........ ಮೇಲ್ಮನವಿದಾರರು ಇದು ಮಂಜೂರು ಮಾಡಿದ ಭೂಮಿ ಎಂಬ ವಾದವನ್ನು ದೃಢೀಕರಿಸಲು ಆರ್.ಟಿ.ಸಿ ಸಾರಗಳನ್ನು ಮಾತ್ರ ಅವಲಂಬಿಸಿದ್ದಾರೆ. ಆದರೆ ಆರ್‌ಟಿಸಿ ನಮೂದುಗಳ ಆಧಾರದ ಮೇಲೆ, ಪಿಟಿಸಿಎಲ್ ಕಾಯ್ದೆಯ ನಿಬಂಧನೆಗಳನ್ನು ಆಕರ್ಷಿಸುವ ಸಲುವಾಗಿ ಮರಪ್ಪ ಅವರು ಖಿನ್ನತೆಗೆ ಒಳಗಾದ ವರ್ಗ ಅಥವಾ ಪರಿಶಿಷ್ಟ ಜಾತಿಗೆ ಸೇರಿದವರಾಗಿರುವುದರಿಂದ ಯಾವುದೇ ಭೂಮಿಯನ್ನು ನೀಡಲಾಗಿದೆ ಎಂದು ಯಾವುದೇ ನ್ಯಾಯಾಲಯವು ಹೇಳಲಾಗುವುದಿಲ್ಲ."

ಕರ್ನಾಟಕ ಹೈಕೋರ್ಟಿನ ದಾರವಾಡ ದ್ವಿಸದಸ್ಯ ಪೀಠದ ಮುಂದೆ ಬಂದಂತಾ ಪ್ರಕರಣದಲ್ಲಿ (ರಿಟ್ ಅಪೀಲ್.ನಂ. 100858/2014)[1] ಹೀಗೆ ವ್ಯಾಖ್ಯಾನಿಸಲಾಗಿದೆ, "ಗ್ರ್ಯಾಂಟೆಡ್ ಲ್ಯಾಂಡ್ಸ್" (ಮಂಜೂರಾದ ಭೂಮಿ) ಎಂದರೆ ಯಾವುದೇ ಪರಿಶಿಷ್ಟ ಜಾತಿ ಅಥವಾ ಪರಿಶಿಷ್ಟ ಪಂಗಡಕ್ಕೆ ಸೇರಿದ ವ್ಯಕ್ತಿಗಳಿಗೆ ಸರ್ಕಾರವು ನೀಡಿದ ಜಮೀನುಗಳು ಎಂದು ವ್ಯಾಖ್ಯಾನವು ಹೊರಬರುತ್ತದೆ. ವ್ಯಾಖ್ಯಾನದಲ್ಲಿ ಅಂತರ್ಗತ ಷರತ್ತು "ಗ್ರಾಂಟ್ ಭೂಮಿ" ಎಂಬ ಪದದಲ್ಲಿ ಕೃಷಿ ಸುಧಾರಣೆಗಳು ಅಥವಾ ಭೂ ಮಿತಿಗಳು ಅಥವಾ ಇನಾಮ್‌ಗಳ ನಿರ್ಮೂಲನೆಗೆ ಸಂಬಂಧಿಸಿದ ಜಾರಿಯಲ್ಲಿರುವ ಸಂಬಂಧಿತ ಕಾನೂನುಗಳ ಅಡಿಯಲ್ಲಿ ಪರಿಶಿಷ್ಟ ಜಾತಿ ಅಥವಾ ಪರಿಶಿಷ್ಟ ಪಂಗಡಕ್ಕೆ ಸೇರಿದ ಜನರಿಗೆ ನೀಡಲಾದ ಅಥವಾ ಮಂಜೂರು ಮಾಡಿದ ಭೂಮಿಯನ್ನು ಒಳಗೊಂಡಿರುತ್ತದೆ. ಆದಾಗ್ಯೂ, "ಮಂಜೂರು ಭೂಮಿ" ಎಂಬ ವ್ಯಾಖ್ಯಾನದ ವ್ಯಾಪ್ತಿಯಿಂದ ಆನುವಂಶಿಕ ಕಚೇರಿ ಅಥವಾ ಆನುವಂಶಿಕ ಹಕ್ಕುಗಳಿಗೆ ಸಂಬಂಧಿಸಿದ ಭೂಮಿಯನ್ನು ಹೊರತುಪಡಿಸುವ ಒಂದು ಹೊರಗಿಡುವ ಷರತ್ತು ಇದೆ. .....

---

[1] ಗಂಗವ್ವ ವಿ. ಗೌಡಪ್ಪ – ಮನು/ಕೆ.ಎ/1480/2015 (ಡಿ.ಬಿ)

ಕರ್ನಾಟಕ ಗ್ರಾಮ ಕಚೇರಿಗಳ ನಿರ್ಮೂಲನ ಕಾಯ್ದೆ (ವಿಲೇಜ್ ಆಫೀಸ್ ಅಬಾಲಿಷನ್) 1961 ರ ಸೆಕ್ಷನ್ 2 (ಎನ್), "ಗ್ರಾಮ ಕಚೇರಿ" ಎಂಬ ಪದವನ್ನು ಈ ಕೆಳಗಿನಂತೆ ವ್ಯಾಖ್ಯಾನಿಸುತ್ತದೆ: " "ವಿಲೇಜ್ ಆಫೀಸ್"ಎಂದರೆ ಪ್ರತಿ ಹಳ್ಳಿ ಕಚೇರಿ, ಅದಕ್ಕೆ ಯಾವ ಸಂಬಳಗಳನ್ನು ಲಗತ್ತಿಸಲಾಗಿದೆ ಮತ್ತು ಸಂವಿಧಾನವನ್ನು ಪ್ರಾರಂಭಿಸುವ ಮೊದಲು ಗ್ರಾಮ ಕಚೇರಿಗೆ ಸಂಬಂಧಿಸಿದ ಅಸ್ತಿತ್ವದಲ್ಲಿರುವ ಕಾನೂನಿನಡಿಯಲ್ಲಿ ಆನುವಂಶಿಕವಾಗಿ ನಡೆಸಲಾಗುತ್ತಿತ್ತು,[1] ಆಡಳಿತ ಅಥವಾ ಸಂಗ್ರಹಣೆಗೆ ಸಂಬಂಧಿಸಿದ ಕರ್ತವ್ಯಗಳ ಕಾರ್ಯಕ್ಷಮತೆಗಾಗಿ ಕಂದಾಯ ಅಥವಾ ವ್ಯವಸ್ಥೆ ನಿರ್ವಹಣೆಯೊಂದಿಗೆ ಅಥವಾ ಒಂದು ಹಳ್ಳಿಯ ನಾಗರಿಕ ಆಡಳಿತ ಅಥವ ಗಡಿರೇಖೆಗಳ ಪರಿಹರಿಸುವಿಕೆ ಅಥವಾ ಇತರ ವಿಷಯಗಳ ಇತ್ಯರ್ಥದೊಂದಿಗೆ, ಮೂಲತಃ ಕಚೇರಿಗೆ ಸಂಬಂಧಿಸಿದ ಸೇವೆಗಳು ಮುಂದುವರಿಯುತ್ತವೆಯೇ ಅಥವಾ ನಿರ್ವಹಿಸಲು ಅಥವಾ ಬೇಡಿಕೆಯನ್ನು ನಿಲ್ಲಿಸಿರಲಿ ಮತ್ತು ಯಾವುದೇ ಹೆಸರಿನಿಂದ ಕಚೇರಿ ಸ್ಥಳೀಯವಾಗಿ ತಿಳಿದಿರಬಹುದು." ಎಂಬ ಅರ್ಥದಲ್ಲಿ ಇದೆ ............ಒಂದು ವೇಳೆ ನಿರ್ದಿಷ್ಟ ವ್ಯಕ್ತಿಗೆ ಜಮೀನು ಮಂಜೂರು ಮಾಡಲು ಹಿಂದಿನ ಅಸ್ತಿತ್ವದಲ್ಲಿರುವ ಶಾಸನಬದ್ಧ ಹಕ್ಕು ಕಾರಣವಾಗಿದ್ದರೆ, ಹೇಳಲಾದ ವ್ಯಕ್ತಿಯು ಪ್ರಾಸಂಗಿಕವಾಗಿ ಪರಿಶಿಷ್ಟ ಜಾತಿ ಅಥವಾ ಪರಿಶಿಷ್ಟ ಪಂಗಡಕ್ಕೆ ಸೇರಿದವನಾಗಿದ್ದರೂ ಸಹ, ಅವನ ಪರವಾಗಿ ಮಾಡಿದ ಮರು-ಅನುದಾನವು ಪಿಟಿಸಿಎಲ್ ಕಾಯ್ದೆಯ ಉದ್ದೇಶಕ್ಕಾಗಿ "ಮಂಜೂರು ಭೂಮಿ" ವ್ಯಾಖ್ಯಾನದ ವ್ಯಾಪ್ತಿಗೆ ಬರುವುದಿಲ್ಲ.

**ಎಲ್ಲಿಯವರೆಗೆ ಗ್ರಾಂಟ್ ಜಮೀನು ಅಂತಹ ಪಾತ್ರತೆ ಹೊಂದಿರುತ್ತೆ**

"ಗ್ರಾಂಟ್ ಭೂಮಿ" ಎಂಬ ಪದವು ಪರಭಾರೆ ನಿಷಿದ್ಧ ಅವಧಿ ಮುಗಿದ ನಂತರ ಮಂಜೂರು ಮಾಡಿದ ಭೂಮಿಯ ವಿಶಿಷ್ಟತೆಯನ್ನು ಉಳಿಸಿಕೊಳ್ಳುತ್ತದೆಯೇ" – ಈ ಬಗ್ಗೆ ಕರ್ನಾಟಕ ಹೈಕೋರ್ಟ್ನ ದ್ವಿಸದಸ್ಯ ಪೀಠ ಹೀಗೆಂದಿದೆ, "......ಸರ್ಕಾರವು ಪರಿಶಿಷ್ಟ ಜಾತಿ ಅಥವಾ ಪರಿಶಿಷ್ಟ ಪಂಗಡದ

[1] ಈ ಬಗ್ಗೆ ಅನುಭಂದ 16 ಗಮನಿಸಿ

ವ್ಯಕ್ತಿಗೆ ಯಾವುದೇ ಭೂಮಿಯನ್ನು ಸಂಬಂಧಿತ ಕಾನೂನು ಅಡಿಯಲ್ಲಿ ನೀಡಲಾಗಿದ್ದರೆ, ಅಂದರೆ ಭೂ ಸುಧಾರಣೆಗಳು ಮತ್ತು ಭೂ ಮಿತಿಗಳು ಅಥವಾ ಇನಾಮ್‌ಗಳ ನಿರ್ಮೂಲನೆಗೆ ಸಂಬಂಧಿಸಿದಂತೆ ಸದ್ಯಕ್ಕೆ ಜಾರಿಯಲ್ಲಿರುವ ಕಾನೂನಿನಲ್ಲಿ ಮಂಜೂರು ಮಾಡಿದ ಭೂಮಿಯಾಗಿ ಮಾತ್ರ ಪರಿಗಣಿಸಬೇಕು. ಕಾಯ್ದೆಯ ಸೆಕ್ಷನ್ 3 (1) (ಬಿ) ಅಡಿಯಲ್ಲಿ ವ್ಯಾಖ್ಯಾನಿಸಲಾದ 'ಮಂಜೂರು ಭೂಮಿ' ಎಂಬ ಪದವನ್ನು ನಿರ್ಬಂಧಿತ ಅರ್ಥವನ್ನು ನೀಡಲಾಗುವುದಿಲ್ಲ, ಪರಭಾರೆ ಅವಧಿ ಮುಗಿದ ನಂತರ ಮಂಜೂರು ಮಾಡಿದ ಭೂಮಿಯ ವಿಶಿಷ್ಟತೆಯನ್ನು ಭೂಮಿ ಕಳೆದುಕೊಳ್ಳುತ್ತದೆ ಎಂದು ಹೇಳಲಾಗದು. ಕಾಯ್ದೆಯ ಸೆಕ್ಷನ್ 3 (1) (ಬಿ) ನಲ್ಲಿ ಬಳಸಲಾಗಿರುವ 'ಮಂಜೂರು ಭೂಮಿ' ಎಂಬ ಪದದ ವ್ಯಾಖ್ಯಾನವು ಅಂತಹ ಗ್ರಾಂಟ್ ಭೂಮಿಗೆ ಮಾತ್ರ ಸೀಮಿತವಾಗಿಲ್ಲ. ಪರಭಾರೆ ಅವಧಿ ಅಥವಾ ಸ್ಥಿತಿಯ ಅವಧಿ ಮುಗಿದ ನಂತರವೂ, ಈ ಕಾಯ್ದೆಯ ಉದ್ದೇಶಕ್ಕಾಗಿ ಭೂಮಿಯನ್ನು ಮಂಜೂರು ಮಾಡಿದ ಭೂಮಿಯಾಗಿ ಮುಂದುವರಿಸಲಾಗಿದೆ."[1]

ಕಲಂ 3(1) (ಬಿ) ಉಲ್ಲೇಕಿಸಿ ಸುಪ್ರೀಮ್ ಕೋರ್ಟ್ ಹೀಗೆ ವ್ಯಾಖ್ಯಾನಿಸಿದೆ "ಗ್ರಾಂಟ್ ಲ್ಯಾಂಡ್" ಎಂದರೆ ಸರ್ಕಾರವು ಪರಿಶಿಷ್ಟ ಜಾತಿ ಅಥವ ಪರಿಶಿಷ್ಟ ಪಂಗಡಕ್ಕೆ ಸೇರಿದ ವ್ಯಕ್ತಿಗೆ ಗ್ರಾಂಟ್ ಮಾಡಲಾಗಿರುವ ಜಮೀನು ಮತ್ತು ಇದರಲ್ಲಿ ಒಳಗೊಂಡಂತೆ, ಅಂತಹ ವ್ಯಕ್ತಿಗೆ, ಆ ವೇಳೆಯಲ್ಲಿ ಜಾರಿಯಲ್ಲಿರುವ ಸಂಬಂದಿತ ಕಾನೂನು ಅಡಿಯಲ್ಲಿ, ಸಂಬಂದಿಸಿದ ವ್ಯವಸಾಯ ಸುದಾರಣೆಗೆ ಅಥವ ಲ್ಯಾಂಡ್ ಸೀಲಿಂಗ್ ಅಥವ ಇನಾಮ್ ರದ್ದತಿಗಳಲ್ಲಿ ಲ್ಯಾಂಡ್ ಅಲಾಟ್ ಮಾಡಲಾಗಿರುವುದು ಅಥವ ಗ್ರಾಂಟ್ ಮಾಡಲಾಗಿರುವುದು ಸೇರಿದಂತೆ ಗ್ರಾಂಟೆಡ್ ಎಂಬ ಶಬ್ದವನ್ನು ಅರ್ಥ ಮಾಡಿಕೊಳ್ಳಬೇಕಿರುತ್ತದೆ. ಇದರಲ್ಲಿ ವಂಶಪಾರಂಪರ್ಯವಾಗಿ ನಿರ್ವಹಿಸಲ್ಪಟ್ಟ ಕಚೇರಿಗಳಲ್ಲಿ ಅಥವ ಹಕ್ಕುಗಳಲ್ಲಿ ಪ್ರಾಪ್ತವಾದ ಗ್ರಾಂಟ್ ಜಮೀನು ಬರುವುದಿಲ್ಲ.[2]

---

[1] ಭೀಮಣ್ಣ ವಿ. ಜಿಲ್ಲಾಧಿಕಾರಿಗಳು – ಐ.ಎಲ್.ಆರ್ 2010 ಕರ್ 5011

[2] ಧರ್ಮಾನಾಯಕ ವಿ. ರಾಮಾ ನಾಯಕ – ಎ.ಐ.ಆರ್ 2008 ಎಸ್.ಸಿ 1276

ದಾಖಲೆಯಲ್ಲಿ "ಸರ್ಟಿಫಿಕೇಟ್ ಆಫ್ ಗ್ರಾಂಟ್" ಎಂದು ಬರೆಯಲಾಗಿದೆ ಎಂಬ ಮಾತ್ರಕ್ಕೆ ಅದು ಗ್ರಾಂಟ್ ಜಮೀನು ಆಗುವುದಿಲ್ಲ[1]

ಹಾಲಿ ಜಾರಿಯಲ್ಲಿರುವ ಲ್ಯಾಂಡ್ ಗ್ರ್ಯಾಂಟ್ ರೂಲ್ಸ್ 1969 ರಲ್ಲಿನ **ನಿಯಮ 4 ರಲ್ಲಿ ವ್ಯವಸಾಯ ಜಮೀನು ಮಂಜೂರು (ಗ್ರ್ಯಾಂಟ್) ಪಡೆಯಲು ಕೆಲವು ಅರ್ಹತೆಯನ್ನು ಘೋಷಿಸಲಾಗಿದೆ** (1) ವ್ಯಕ್ತಿಗೆ 18 ವರ್ಷ ವಯಸ್ಸಾಗಿರಬೇಕು (2) ಆತನ ವಾರ್ಷಿಕ ಅಧಾಯ ಎಂಟು ಸಾವಿರ ಮೀರಿರಬಾರದು, (3) ಆತ ಪ್ರಾಮಾಣಿಕವಾಗಿ ಸ್ವಯಂ ವ್ಯವಸಾಯಗಾರ ನಾಗಿರಬೇಕು ಅಥವ ಪ್ರಾಮಾಣಿಕವಾಗಿ ವ್ಯವಸಾಯ ವೃತ್ತಿಯನ್ನು ಕೈಗೊಳ್ಳುವ ಉದ್ದೇಶವುಳ್ಳವನಾಗಿರಬೇಕು (4) ಆತ 4 ಹೆಕ್ಟೇರ್ ರಿಂದ 8 ಹೆಕ್ಟೇರ್ ವರೆಗೆ ಗಾರ್ಡನ್ ಜಮೀನಿನ ಸ್ವರೂಪದಿಂದ ಒಣಭೂಮಿವರೆಗಿನ ಜಮೀನನ್ನು ಹೊಂದಿರಬಾರದು. (5) ಆದರೆ ಈ ಮೇಲಿನ ಶರತ್ತನ್ನು ಲೆಕ್ಕಿಸದೆ ವ್ಯಕ್ತಿಯ ಜಮೀನಿನ ಪಕ್ಕದ ಜಮೀನನ್ನು ಉತ್ತಮ ಅನುಭವಕ್ಕಾಗಿ ಅವಶ್ಯಕತೆ ಕಂಡು ಬಂದಲ್ಲಿ ಮಾರುಕಟ್ಟೆ ಬೆಲೆ ಕಟ್ಟಿಸಿಕೊಂಡು ಗ್ರಾಂಟ್ ಮಾಡಬಹುದು, ಆದರೆ ಅದರಲ್ಲಿ ಅರ್ದ ಹೆಕ್ಟೇರ್ ನಿಂದ ಒಂದು ಹೆಕ್ಟೇರ್ ವರೆಗೆ ಮಾತ್ರ ಭೂಸುದಾರಣಾ ಕಾಯ್ದೆ ಭೂಮಿತಿ ಹೆಚ್ಚಾಗದಂತೆ ಗ್ರಾಂಟ್ ಮಾಡಬಹುದು. **ನಿಯಮ 5 ರಲ್ಲಿ ಕೆಲವು ಮೀಸಲಾತಿಯನ್ನು ಘೋಷಿಸಲಾಗಿದೆ** (1) ಸೇನಾ ನಿವೃತ್ತರಿಗೆ 10% (2) ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡದವರಿಗೆ 50% (3) ಹಿಂದುಳಿದ ಬುಡಕಟ್ಟು ಜನಾಂಗಕ್ಕೆ 5% (4) ರಾಜಕೀಯವಾಗಿ ನೊಂದವರಿಗೆ 10% (5) ಇತರೆಯವರಿಗೆ 25% (6) ನಾಲ್ಕು ಹೆಕ್ಟೇರ್ ಗಿಂತ ಕಡಿಮೆ ಇದ್ದಲ್ಲಿ ಪೂರ್ತಿ ಜಮೀನನ್ನು ಆ ಗ್ರಾಮದ ಅಥವ ಪಕ್ಕದ ಗ್ರಾಮದ ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡದವರಿಗೆ ಮಾತ್ರ ನೀಡಬೇಕು, ಅವರು ಲಭ್ಯವಿಲ್ಲವಾದರೆ ಇತರೆಯವರಿಗೆ ನೀಡಬೇಕು. **ನಿಯಮ 6 ರಲ್ಲಿ ಇತರೆಯವರಿಗೆ 25% ವಿತರಣಾ ವ್ಯವಸ್ಥೆಯಲ್ಲಿ ಈ ರೀತಿಯಾದ ಮೀಸಲಾತಿ ಒದಗಿಸಿದೆ** (1) ಗ್ರಾಮದಲ್ಲಿ ವಾಸಿಸುವ ಭೂರಹಿತರಿಗೆ (2) ಗ್ರಾಮದಲ್ಲಿ

---

[1] ಮುನಿರಾಜು ವಿ. ಕರ್ನಾತಕ ರಾಜ್ಯ – ಎ.ಐ.ಆರ್ 2008 ಎಸ್.ಸಿ 1438

ವಾಸಿಸುವ 4 ಹೆಕ್ಟೇರ್ ರಿಂದ 8 ಹೆಕ್ಟೇರ್ ವರೆಗೆ ಗಾರ್ಡನ್ ಜಮೀನಿನ ಸ್ವರೂಪದಿಂದ ಒಣಭೂಮಿವರೆಗಿನ ಜಮೀನನ್ನು ಹೊಂದಿರದ ವ್ಯಕ್ತಿಗೆ (3) ಅದೇ ತಾಲೂಕಿನ ಬೇರೆ ಗ್ರಾಮಗಳಲ್ಲಿ ಅಥವ ಪಕ್ಕದ ತಾಲೂಕಿನ ಗ್ರಾಮಗಳಲ್ಲಿ ಇರುವ ಭೂರಹಿತರಿಗೆ (4) ಇತರರಿಗೆ. ಆದರೆ ಕಲಂ 71 ಕರ್ನಾಟಕ ಭೂ ಕಂದಾಯ ಕಾಯ್ದೆಯಡಿಯಲ್ಲಿ ಆದೇಶಿಸಿ ಯಾವುದಾದರೂ ಪ್ರಾಜೆಕ್ಟ್ ನಿಂದ ನಿರಾಶ್ರಿತರಾದವರಿಗೆ ಭೂ ಕಳೆದುಕೊಂಡವರಿಗೆ ನಿಯಮ 5 ಮತ್ತು 6 ರಲ್ಲಿ ವಿನಾಯ್ತಿ ಘೋಷಿಸಿ ಹಂಚಬಹುದು. - ಇಂತಹ ನಿಯಮಗಳ ಅಡಿಯಲ್ಲಿ ಗ್ರಾಂಟ್ ಜಮೀನು ಪರಿಶಿಷ್ಟರಿಗೆ ನೀಡಲಾಗಿರುವುದೇ ಇಲ್ಲವೆ ಎಂದು ನಿರ್ದರಿಸಲು ಸಹಾಯವಾಗುತ್ತದೆ. ನಿಯಮ 26 ರಲ್ಲಿ ರಾಜ್ಯ ಸರ್ಕಾರಕ್ಕೆ ಲ್ಯಾಂಡ್ ಗ್ರ್ಯಾಂಟ್ ರೂಲ್ಸ್ ಅನ್ವಯಿಸುವಿಕೆಯನ್ನು ವಿನಾಯ್ತಿ ಗೊಳಿಸಲು ಅಧಿಕಾರವಿರುತ್ತದೆ. ವಿಭಾಗಾದಿಕಾರಿ ಅಥವ ಜಿಲ್ಲಾಧಿಕಾರಿ ಶಿಫಾರಸ್ಸಿನ ಮೇರೆಗೆ ವಿಶೇಷ ಪ್ರಕರಣವೆಂದು ಪರಿಗಣಿಸಿ ಭೂ ಮಂಜೂರಾತಿ ನಿಯಮ ಅನ್ವಯಿಸುವಿಕೆಯಿಂದ ವಿನಾಯ್ತಿ ಮಾಡಿ ಆದೇಶ ಹೊರಡಿಸಿದ ಗ್ರಾಂಟ್ ಪಿ.ಟಿ.ಸಿ.ಎಲ್ ಕಾಯ್ದೆಯಲ್ಲಿ ಗ್ರಾಂಟ್ ಜಮೀನು ಆಗುತ್ತದೆಯೇ ಎಂದು ಅವಲೋಕಿಸಬೇಕಿರುತ್ತದೆ. 4 ಹೆಕ್ಟೇರ್ ಭೂಮಿಗಿಂತ ಕಡಿಮೆ ಇದ್ದಲ್ಲಿ ಅದು ನಿಯಮದಂತ ಪೂರ್ತಿ ಜಮೀನನ್ನು ಆ ಗ್ರಾಮದ ಅಥವ ಪಕ್ಕದ ಗ್ರಾಮದ ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡದವರಿಗೆ ಮಾತ್ರ ನೀಡಬೇಕು ಎಂಬ ನಿಯಮದಲ್ಲಿ ಸಡಿಲಗೊಳಿಸಿ ಆದೇಶಿಸಿದ್ದರೆ ಅದು ಗ್ರಾಂಟ್ ಜಮೀನು ಆಗಲು ಹೇಗೆ ಸಾಧ್ಯ.?

"ಮಂಜೂರು ಮಾಡಿದ ಭೂಮಿಯನ್ನು ವರ್ಗಾವಣೆ ಮಾಡುವುದರ ವಿರುದ್ಧ ನಿಷೇಧವು ನಡೆಯುವವರೆಗೂ, ಪರಕೀಯಮಾಡಬಾರದ ಅವಧಿ ಮುಗಿಯುವವರೆಗೂ ಅನುದಾನ ಪಡೆದವರಿಗೆ ಯಾವುದೇ ಮಾನ್ಯ ಮಾಲೀಕತ್ವ ಇಲ್ಲ ಎಂಬುದು ಸ್ಪಷ್ಟವಾಗಿದೆ, ಇಲ್ಲಿ ಸರ್ಕಾರ ಜಮೀನಿನ ಮಾಲೀಕರು ಮತ್ತು ಅನುದಾನ ಪಡೆದವರಲ್ಲ. ಆದ್ದರಿಂದ, ನಿಷೇಧದ ಸಮಯದಲ್ಲಿ ಅನುದಾನ ಪಡೆದವರಿಂದ ಸ್ವಾಧೀನಪಡಿಸಿಕೊಂಡ ಭೂಮಿಗೆ ಯಾವುದೇ ಮಾಲೀಕತ್ವ ಅಥವಾ ಹಕ್ಕು ಅನೂರ್ಜಿತ ಗೊಳಿಸುವ ಮಾಲೀಕತ್ವ ಅಥವಾ ಹಕ್ಕು ಆಗಿದೆ.

ಇದು ಕಾನೂನಿನ ಪ್ರಕಾರ ಸೂಕ್ತವಾದ ಕ್ರಮದಿಂದ ಸೋಲಿಸಲ್ಪಟ್ಟು ಭೂಮಿಯನ್ನು ಮರು ಸ್ವಾಧೀನಪಡಿಸಿಕೊಳ್ಳುವ ಮೂಲಕ ಗ್ರಾಂಟಿ ವಾಪಸ್ ಪಡೆಯಬಹುದು. ಆದ್ದರಿಂದ ಅಂತಹ ಪರಭಾರೆ ಹೊಂದಿದವರಿಗೆ ಅಂತಹ ಭೂಮಿಯನ್ನು ಗುತ್ತಿಗೆ ನೀಡಲು ಯಾವುದೇ ಮಾನ್ಯ ಮಾಲೀಕತ್ವ ಅಥವಾ ಹಕ್ಕಿಲ್ಲ ಎಂದು ಹೇಳಬೇಕಾಗಿಲ್ಲ ಮತ್ತು ಅಂತಹ ಭೂಮಿಯ ಪರಭಾರೆ ಹೊಂದಿದವರಿಂದ ಯಾವುದೇ ಗುತ್ತಿಗೆ ಇದ್ದರೆ, ಅದು ಕಾನೂನಿನ ರೀತಿಯಲ್ಲಿ ನಿಲ್ಲಲು ಸಾಧ್ಯವಿಲ್ಲ".[1] ಭೂಪರಿವರ್ತನೆ ಮಾಡಿದರೆ ಅಂತಹ ಗ್ರಾಂಟ್ ಜಮೀನು ಸ್ವಬಾವ ಹೊಂದಿರುವುದೇ ಅನ್ನುವ ವಿಚಾರಕ್ಕೆ ಇತ್ತೀಚಿನ ದ್ವಿಸದಸ್ಯ ಪೀಠದ ತೀರ್ಪು ಹೊಂದುವುದಿಲ್ಲ ಎಂದು ಕೊಟ್ಟರೆ, ಈ ಹಿಂದೆಯೇ, ಅನೇಕ ಏಕಸದಸ್ಯ ಪೀಠ ಉತ್ತಮ ಕಾರಣಗಳೊಂದಿಗೆ ಭೂಪರಿವರ್ತನೆ ನಂತರವೂ ಗ್ರಾಂಟ್ ಜಮೀನಿನ ಸ್ವಭಾವ ಕಳೆದುಕೊಳ್ಳುವುದಿಲ್ಲ ಎಂದು ತೀರ್ಪಿತ್ತಿದೆ. ಇದನ್ನು ಅಧ್ಯಾಯ–8 ರಲ್ಲಿ ವಿವರವಾಗಿ ಚರ್ಚಿಸಿರುತ್ತೆ.

ಕರ್ನಾಟಕ ಹೈಕೋರ್ಟ್ ಬೆಂಗಳೂರು ಮುಂದಿನ ಪ್ರಕರಣವೊಂದರಲ್ಲಿ (ಡಬ್ಲ್ಯು.ಎ 6610/2017)[2] 1957 ರಲ್ಲಿ ಗ್ರಾಂಟ್ ಆಗಿರುತ್ತದೆ, 1974 ರಲ್ಲಿ ಮೊದಲ ಕ್ರಯ ಆಗಿರುತ್ತದೆ. 1977 ರಲ್ಲಿ ಮತ್ತೆ ಗ್ರಾಂಟಿ ಖರೀದಿ ಮಾಡಿರುತ್ತಾನೆ. ಮೊದಲ ಮಾರಾಟ ಶರತ್ತು ಅವದಿಯ ನಂತರ ಆಗಿದೆ. ಅದು ಮಾರಾಟ ಅಲ್ಲ ಅಡಮಾನ ಎನ್ನುವುದು ಸರಿಯಲ್ಲ. ಸದರಿ ಜಮೀನು ಗ್ರಾಂಟ್ ಜಮೀನಿನ ಸ್ವರೂಪವನ್ನು ಕಳೆದುಕೊಂಡಿದೆ ಎಂದು ತೀರ್ಪಾಗಿದೆ.

ಸ್ವಾಧೀನದ ಹಕ್ಕನ್ನು (ಆಕ್ಯುಪೆನ್ಸಿ ರೈಟ್ಸ್) ಮಾನ್ಯ ಮಾಡಿ ಆದಂತಾ ಭೂ ಮಂಜೂರಾತಿಯನ್ನು ಪಿ.ಟಿ.ಸಿ.ಎಲ್ ಕಾಯ್ದೆ ವ್ಯಾಪ್ತಿಯ ಗ್ರ್ಯಾಂಟ್ ಲ್ಯಾಂಡ್ ವ್ಯಾಪ್ತಿಯಲ್ಲಿ ತರಲು ಸಾಧ್ಯವಿಲ್ಲ ಎಂದಿದೆ ಕರ್ನಾಟಕ ಹೈಕೋರ್ಟಿನ ಪೂರ್ಣ ಪೀಠ. ಇದರಲ್ಲಿ ಭೂಸುದಾರಣೆ ಕಾಯ್ದೆ ವ್ಯಾಪ್ತಿಯ ಆಕ್ಯುಪೆನ್ಸಿ ರೈಟ್ಸ್ ನೀಡುವುದಕ್ಕೆ ಸಂಬಂದಿಸಿದಂತೆ ವ್ಯಾಖ್ಯಾನವಾಗಿದೆ.[3]

---

[1] ಧ್ಯಾಮಪ್ಪ ವಿ. ಅಪ್ಪಣ್ಣಾ ಭೋವಿ– ಐ.ಎಲ್.ಆರ್ 1993 ಕರ್ 1894

[2] ದರ್ಮಲಿಂಗಮ್ ವಿ. ಕರ್ನಾಟಕ ರಾಜ್ಯ – ಮನು/ಕೆ.ಎ/4892/2019 (ಡಿ.ಬಿ)

[3] ಮೊಹಮ್ಮದ್ ಜಾಫರ್ ವಿ. ಕರ್ನಾಟಕ ರಾಜ್ಯ – 2003 (1) ಕೆ.ಸಿ.ಸಿ.ಆರ್ 110

**ಅರ್ಜಿದಾರರು ಗ್ರಾಂಟಿ ವಾರಸ್ಸು ಅಲ್ಲ, ಎಂದಾದರೆ ಹೇಗೆ?**

ಅರ್ಜಿದಾರರು ಗ್ರಾಂಟಿ ವಾರಸ್ಸು ಅಲ್ಲ ಎಂಬ ವಿವಾದವಿದ್ದರೆ ಸಿವಿಲ್ ಕೋರ್ಟ್ ನಲ್ಲಿ ಸೂಕ್ತ ಆದೇಶ ಆಗಬೇಕು ಎಂಬ ಅಂಶವನ್ನು ಮಾನ್ಯ ಹೈಕೋರ್ಟ್ ಎತ್ತಿ ಹಿಡಿದಿದೆ.[1]

ಹಕ್ಕನ್ನು ಪಡೆದುಕೊಳ್ಳಲು, ಸ್ಥಾಪಿಸಲು ಅಥವಾ ಸಾಬೀತುಪಡಿಸಲು, ಸುಳ್ಳು ವಂಶಾವಳಿಯನ್ನು ತಮ್ಮ ತುದಿಗಳಿಗೆ ತಕ್ಕಂತೆ ರೂಪಿಸಲು, ಸೃಷ್ಟಿಸಲು ಅಥವಾ ಪಡೆಯಲು ಆಸಕ್ತ ವ್ಯಕ್ತಿ ಅಥವಾ ಪಾರ್ಟಿಯ ಕಡೆಯಿಂದ ಹಲವು ಪ್ರವೃತ್ತಿ ಕಂಡುಬರುತ್ತವೆ, ನ್ಯಾಯಾಲಯಗಳ ಮುಂದಿಟ್ಟಿರುವ ವಂಶಾವಳಿಯನ್ನು ಅವಲಂಬಿಸುವ ಮುನ್ನ ದಾಖಲೆಗಳ ಸರಣಿ ಅಥವಾ ಚಕ್ರವ್ಯೂಹದಿಂದ ಹಾಕಲ್ಪಟ್ಟ ಬಲೆಗೆ ಬೀಳದಂತೆ ಕೆಲವು ಜಾಗ್ರತೆ ತೆಗೆದುಕೊಳ್ಳುವುದು ಉತ್ತಮ..... ಅಂತಹ ಪ್ರಕರಣಗಳನ್ನು ನಿಯಂತ್ರಿಸುವ ತತ್ವಗಳನ್ನು ಹೀಗೆ ಸಂಕ್ಷೇಪಿಸಬಹುದು:-[2]

(1) ವಂಶಾವಳಿಗಳು ಒಪ್ಪಿಕೊಂಡಾಗಿದ್ದರೆ ಅಥವಾ ಹಳೆಯದಾಗಿದೆ ಎಂದು ಸಾಬೀತಾಗಿದ್ದರೆ ಮತ್ತು ಹಿಂದಿನ ಪ್ರಕರಣಗಳಲ್ಲಿ ಅವಲಂಬಿತವಾಗಿದ್ದರೆ, ನಿಸ್ಸಂದೇಹವಾಗಿ ಪ್ರಸ್ತುತವಾಗುತ್ತದೆ ಮತ್ತು ಕೆಲವು ಸಂದರ್ಭಗಳಲ್ಲಿ ಅದು ಸಾಬೀತಾದ ಸಂಗತಿಗಳ ಬಗ್ಗೆ ನಿರ್ಣಾಯಕವಾಗಬಹುದು ಆದರೆ ವಂಶಾವಳಿಗಳನ್ನು ಸ್ವೀಕರಿಸುವ ಅಥವಾ ಅವಲಂಬಿಸುವ ಮೊದಲು ನ್ಯಾಯಾಲಯಗಳು ಹಲವಾರು ಪರಿಗಣನೆಗಳನ್ನು ಮನಸ್ಸಿನಲ್ಲಿ ಇಟ್ಟುಕೊಳ್ಳಬೇಕು.:

(ಎ) ವಂಶಾವಳಿಯ ಮೂಲ ಮತ್ತು ಅದರ ವಿಶ್ವಾಸಾರ್ಹತೆ.

(ಬಿ) ಎವಿಡೆನ್ಸ್ ಆಕ್ಟ್ ಅಡಿಯಲ್ಲಿ ವಂಶಾವಳಿಯ ಪ್ರವೇಶ.

(ಸಿ) ನಿರ್ಧಾರಗಳು ಅಥವಾ ತೀರ್ಪುಗಳಲ್ಲಿ ಹೇಳಲಾದ ವಂಶಾವಳಿಗಳ ಸರಿಯಾದ ಬಳಕೆ ಅದರ ಮೇಲೆ ಅವಲಂಬನೆಯನ್ನು ಇರಿಸಲಾಗುತ್ತದೆ.

(ಡಿ) ವಂಶಾವಳಿಯ ವಯಸ್ಸು.

---

[1] ಭೈರಯ್ಯ ವಿ. ಬೆಟ್ಟೇಗೌಡ – 2015 (4) ಕೆ.ಸಿ.ಸಿ.ಆರ್ 3736 (ಡಿ.ಬಿ)

[2] ಬಿಹಾರ ರಾಜ್ಯ ವಿ. ರಾಧಾಕೃಷ್ಣಸಿಂಗ್ – 1983 (3) ಎಸ್.ಸಿ.ಸಿ 118

(ಇ) ಅಂತಹ ವಂಶಾವಳಿಗಳು ಇರುವ ದಾವೆಗಳಲ್ಲಿ ಸ್ವೀಕರಿಸಲಾಗಿದೆ ಅಥವಾ ತಿರಸ್ಕರಿಸಲಾಗಿದೆ.

(2) ಅಂಗೀಕಾರದ ಪ್ರಶ್ನೆಯ ಮೇಲೆ ಈ ಕೆಳಗಿನ ಪರೀಕ್ಷೆಗಳನ್ನು ಅಳವಡಿಸಿಕೊಳ್ಳಬೇಕು:

(ಎ) ಎವಿಡೆನ್ಸ್ ಆಕ್ಟ್ನ ಸೆಕ್ಷನ್ 32 (5) ಅಥವಾ ಸೆಕ್ಷನ್ 13 ರ ನಾಲ್ಕು ಮೂಲೆಗಳಲ್ಲಿ ಸಂಬಂಧಪಟ್ಟ ಕುಟುಂಬಗಳ ವಂಶಾವಳಿಗಳು ಈ ವ್ಯಾಪ್ತಿಗೆ ಬರಬೇಕು.

(ಬಿ) ಪೋಸ್ಟ್ ಲಿಟೆಮ್ ಮೋಟಮ್ ಸಿದ್ಧಾಂತದಿಂದ ಅವು ತಾಗಬಾರದು. (ದಾವೆ ಸಲ್ಲಿಸಿದ ಮೇಲೆ ಅಥವ ಆ ಸಂಧರ್ಬದಲ್ಲಿ ತಯಾರಿಸಿದ ವಂಶಾವಳಿಗಳು ಆಗಬಾರದು.)

(ಸಿ) ವಂಶಾವಳಿಗಳು ಅಥವಾ ಹಕ್ಕನ್ನು ಘೋಷಣೆಗಳಿಂದ ಸಾಬೀತುಪಡಿಸಲು ಸಾಧ್ಯವಿಲ್ಲ, ನಡೆದ ತೀರ್ಪಿನಲ್ಲಿ ನಿರೂಪಣೆಗಳು ಅಥವಾ ಸಂಗತಿಗಳು ನಿರೂಪಿಸಲ್ಪಟ್ಟಿದ್ದರೆ ದೀರ್ಘ ನಿರ್ಧಾರಗಳಿಂದ ಅನುಮತಿಸಲಾಗದು.

(ಡಿ) ಮೌಖಿಕ ಸಾಕ್ಷ್ಯಗಳಿಂದ ವಂಶಾವಳಿಯನ್ನು ಸಾಬೀತುಪಡಿಸಿದರೆ, ಹೇಳಿದ ಪುರಾವೆಗಳು ನಿಖರವಾಗಿ ಬಹಿರಂಗಪಡಿಸುವ ಗೊತ್ತಿರುವ ವಿಶೇಷ ವಿಧಾನಗಳನ್ನು ಸ್ಪಷ್ಟವಾಗಿ ತೋರಿಸಬೇಕು, ಮೂಲ, ಸಮಯ ಮತ್ತು ಜ್ಞಾನವನ್ನು ಸ್ವಾಧೀನಪಡಿಸಿಕೊಂಡ ಸಂದರ್ಭಗಳು ಮತ್ತು ಇದನ್ನು ಸ್ಪಷ್ಟವಾಗಿ ಮತ್ತು ನಿರ್ಣಾಯಕವಾಗಿ ಸಾಬೀತುಪಡಿಸಬೇಕು.

ಭಾರತೀಯ ಸಾಕ್ಷ್ಯ ಕಾಯ್ದೆ ಸೆಕ್ಷನ್ 50 ಹೀಗೇಳುತ್ತದೆ "ಒಬ್ಬ ವ್ಯಕ್ತಿಯ ಸಂಬಂಧಕ್ಕೆ ಸಂಬಂಧಿಸಿದಂತೆ ನ್ಯಾಯಾಲಯವು ಒಂದು ಅಭಿಪ್ರಾಯವನ್ನು ರೂಪಿಸಬೇಕಾದಾಗ, ಒಬ್ಬ ವ್ಯಕ್ತಿಯ ನಡವಳಿಕೆಯಿಂದ ವ್ಯಕ್ತವಾಗುವ ಅಭಿಪ್ರಾಯ, ಅಂತಹ ಸಂಬಂಧದ ಅಸ್ತಿತ್ವದ ಬಗ್ಗೆ, ಯಾವುದೇ ವ್ಯಕ್ತಿಯ, ಕುಟುಂಬದ ಸದಸ್ಯರಾಗಿ ಅಥವಾ ಇಲ್ಲದಿದ್ದರೆ, ಈ ವಿಷಯದ ಬಗ್ಗೆ ವಿಶೇಷ ಜ್ಞಾನದ ವಿಧಾನಗಳನ್ನು ಹೊಂದಿದ್ದಾರೆ ಎನ್ನುವುದು ಸಂಬಂಧಿತ ಸಂಗತಿಯಾಗಿದೆ". ಈ ಬಗ್ಗೆ ಅರ್ಥೈಸಿರುವ ಸುಪ್ರೀಮ್ ಕೋರ್ಟ್ ಹೀಗೆ

ಹೇಳಿದೆ.[1] "ಅದು ಒಂದು ನಿರ್ದಿಷ್ಟ ಸಂಗತಿಯ ಪ್ರಸ್ತುತತೆಯೊಂದಿಗೆ ವ್ಯವಹರಿಸುತ್ತದೆ ಎಂಬುದು ಸ್ಪಷ್ಟವಾಗಿದೆ. ಅದು ಪರಿಣಾಮಕಾರಿಯಾಗಿ ಹೇಳುತ್ತದೆ, ಒಬ್ಬ ವ್ಯಕ್ತಿಯ ಸಂಬಂಧದ ಬಗ್ಗೆ ನ್ಯಾಯಾಲಯವು ಒಂದು ಅಭಿಪ್ರಾಯವನ್ನು ರೂಪಿಸಬೇಕಾದಾಗ, ಆ ಸಂಬಂಧದ ವಿಷಯದ ಬಗ್ಗೆ ವಿಶೇಷ ಜ್ಞಾನದ ಸಾಧನಗಳನ್ನು ಹೊಂದಿರುವ ಯಾವುದೇ ವ್ಯಕ್ತಿಯ ಅಂತಹ ಸಂಬಂಧದ ಅಸ್ತಿತ್ವದ ಬಗ್ಗೆ ನಡವಳಿಕೆಯಿಂದ ವ್ಯಕ್ತವಾಗುವ ಅಭಿಪ್ರಾಯ. ಸಂಬಂಧಿತ ಸಂಗತಿಯಾಗಿದೆ ಎಂದು. ಈ ಕಾನೂನಿನಲ್ಲಿ ಸೇರ್ಪಡೆಗೊಂಡ ಎರಡು ವಿವರಣೆಗಳು ಸೆಕ್ಷನಿನ ನಿಜವಾದ ವ್ಯಾಪ್ತಿ ಮತ್ತು ಪರಿಣಾಮವನ್ನು ಸ್ಪಷ್ಟವಾಗಿ ತರುತ್ತವೆ. ಸೆಕ್ಷನಿನ ಅಗತ್ಯ ಅವಶ್ಯಕತೆಗಳು ನಮಗೆ ಹೀಗೆ ಗೋಚರಿಸುತ್ತವೆ – (1) ಒಬ್ಬ ವ್ಯಕ್ತಿಯ ಸಂಬಂಧಕ್ಕೆ ಸಂಬಂಧಿಸಿದಂತೆ ನ್ಯಾಯಾಲಯವು ಅಭಿಪ್ರಾಯವನ್ನು ರೂಪಿಸಬೇಕಾದ ಸಂದರ್ಭವಿರಬೇಕು; (2) ಅಂತಹ ಸಂದರ್ಭದಲ್ಲಿ, ಅಂತಹ ಸಂಬಂಧದ ಅಸ್ತಿತ್ವದ ಬಗ್ಗೆ ನಡವಳಿಕೆಯಿಂದ ವ್ಯಕ್ತವಾಗುವ ಅಭಿಪ್ರಾಯವು ಸಂಬಂಧಿತ ಸಂಗತಿಯಾಗಿದೆ; (3) ಆದರೆ ನಡವಳಿಕೆಯಿಂದ ವ್ಯಕ್ತವಾಗುವ ವ್ಯಕ್ತಿಯು ಪ್ರಸ್ತುತವಾಗಬೇಕಾದ ವ್ಯಕ್ತಿಯು ಕುಟುಂಬದ ಸದಸ್ಯನಾಗಿರಬೇಕು ಅಥವಾ ಸಂಬಂಧದ ನಿರ್ದಿಷ್ಟ ವಿಷಯದ ಬಗ್ಗೆ ವಿಶೇಷ ಜ್ಞಾನದ ಸಾಧನಗಳನ್ನು ಹೊಂದಿರಬೇಕು; ಬೇರೆ ರೀತಿಯಲ್ಲಿ ಹೇಳುವುದಾದರೆ, ವ್ಯಕ್ತಿಯು ಸೆಕ್ಷನ್ ನಂತರದ ಭಾಗದಲ್ಲಿ ತಿಳಿಸಿರುವ ಸ್ಥಿತಿಯನ್ನು ಪೂರೈಸಬೇಕು. ವ್ಯಕ್ತಿಯು ಆ ಸ್ಥಿತಿಯನ್ನು ಪೂರೈಸಿದರೆ, ವರ್ತನೆಯಿಂದ ವ್ಯಕ್ತವಾಗುವ ಅವನ ಅಭಿಪ್ರಾಯವು ಪ್ರಸ್ತುತವಾಗಿದೆ. ಅಭಿಪ್ರಾಯ ಎಂದರೆ ಕೇವಲ ಗಾಸಿಪ್ ಅಥವಾ ಕೇಳುವಿಕೆಯ ಚಿಲ್ಲರೆ ವ್ಯಾಪಾರಕ್ಕಿಂತ ಹೆಚ್ಚಿನದು; ಇದರರ್ಥ ತೀರ್ಪು ಅಥವಾ ನಂಬಿಕೆ, ಅಂದರೆ ಒಂದು ನಿರ್ದಿಷ್ಟತೆಯ ಬಗ್ಗೆ ಒಬ್ಬರು ಏನು ಯೋಚಿಸುತ್ತಾರೋ ಅದರ ಪರಿಣಾಮವಾಗಿ ಉಂಟಾಗುವ ನಂಬಿಕೆ ಅಥವಾ ದೃಢೀಕರಣ ಅಭಿಪ್ರಾಯ."........" ಸೆಕ್ಷನ್ 60 ರಲ್ಲಿನಂತೆ ನಡವಳಿಕೆಯು ನೋಡಬಹುದಾದ

[1] ದೊಲ್ಗೊಬಿಂದ ವಿ. ನಿಮಯ್ – ಎ.ಐ.ಆರ್ 1959 ಎಸ್.ಸಿ 914

ಯಾವುದನ್ನಾದರೂ ಸಂಬಂಧಿಸಿದ್ದರೆ, ಅದನ್ನು ನೋಡಿದ ವ್ಯಕ್ತಿಯಿಂದ ಅದನ್ನು ಸಾಬೀತುಪಡಿಸಬೇಕು; ಅದು ಕೇಳಬಹುದಾದ ಸಂಗತಿಯಾಗಿದ್ದರೆ, ಅದನ್ನು ಕೇಳಿದ ವ್ಯಕ್ತಿಯಿಂದ ಅದನ್ನು ಸಾಬೀತುಪಡಿಸಬೇಕು; ಮತ್ತು ಇತ್ಯಾದಿ... ಈ ಎರಡೂ ಸೆಕ್ಷೆನ್ಗಳು ಒಂದಕ್ಕೊಂದು ಸಂಬಂದಿತವಾಗಿವೆ"

ಪ್ರತಿವಾದಿಯ ಸಾಕ್ಷಿಯಾಗಿದ್ದರೂ ಕೂಡ ಆತನಿಗೆ ಸಂಬಂದಗಳ ಬಗ್ಗೆ ವಿಶೇಷ ಜ್ಞಾನವಿದ್ದರೆ ಅದು ಸೆಕ್ಷನ್ 50 ಭಾರತೀಯ ಸಾಕ್ಷ್ಯದ ಅನುಸಾರವಿದ್ದರೆ ಅದನ್ನು ಸಾಕ್ಷಿಯಾಗಿ ಪರಿಗಣಿಸಬಹುದು.[1]

**ಯಾವ ರೀತಿಯ ವರ್ಗಾವಣೆಯನ್ನು ನಿರ್ಬಂದಿಸಲಾಗಿದೆ**

ಕಾಯ್ದೆಯ ಸೆಕ್ಷನ್ 4 ಮತ್ತು 5 ರ ಉದ್ದೇಶಕ್ಕಾಗಿ ಅತಿಕ್ರಮಣವಾಗಿರುವುದು ವರ್ಗಾವಣೆಯಲ್ಲ – ಕಾಯ್ದೆಯ ಸೆಕ್ಷನ್ 3 (ಇ) ಅಡಿಯಲ್ಲಿ "ವರ್ಗಾವಣೆ" ಎಂಬ ಪದ – ಚರ್ಚಿಸಲಾಗಿದೆ – 'ವರ್ಗಾವಣೆ' ಎಂಬ ಪದವನ್ನು ಮಾರಾಟ (ಸೇಲ್), ಉಡುಗೊರೆ (ಗಿಫ್ಟ್), ವಿನಿಮಯ (ಎಕ್ಸಚೇಂಜ್), ಅಡಮಾನ (ಮಾರ್ಟಗೇಜ್), ಗುತ್ತಿಗೆ (ಲೀಸ್), ಅಥವಾ ಬೇರೆ ಯಾವುದೇ ವಹಿವಾಟು ಎಂದು ವ್ಯಾಖ್ಯಾನಿಸಲಾಗಿದೆ, ವಿಭಾಗದ (ಪಾರ್ಟಿಷನ್) ವಹಿವಾಟನ್ನು ಹೊರತುಪಡಿಸಿ. – ಪಿಟಿಸಿಎಲ್ ಕಾಯ್ದೆಯ ಸೆಕ್ಷನ್ 4, ಕಾಯ್ದೆ ಪ್ರಾರಂಭವಾಗುವ ಮೊದಲು ಅಥವಾ ನಂತರ ನೀಡಲಾದ ಮಂಜೂರು ಮಾಡಿದ ಭೂಮಿಯನ್ನು, ಅನುದಾನದ ನಿಯಮಗಳಿಗೆ ವಿರುದ್ಧವಾಗಿ, ವರ್ಗಾವಣೆ ಮಾಡಿರುವುದಾಗಿ ಪೂರ್ವ– ಊಹಿಸುತ್ತದೆ, ಅಂತಹ ಸಂದರ್ಭದಲ್ಲಿ ವರ್ಗಾವಣೆಯನ್ನು ಶೂನ್ಯ ಮತ್ತು ಅನೂರ್ಜಿತವೆಂದು, ಅಂತಹ ಮಂಜೂರು ಮಾಡಿದ ಭೂಮಿಯನ್ನು ವರ್ಗಾವಣೆ ಪಡೆದವರಿಗೆ ಭೂಮಿಯಲ್ಲಿ ಯಾವುದೇ ಹಕ್ಕು, ಮಾಲೀಕತ್ವ ಅಥವಾ ಆಸಕ್ತಿ ಇರುವುದಿಲ್ಲವೆಂದು ಘೋಷಿಸಲಾಗುತ್ತದೆ. – ಪಿಟಿಸಿಎಲ್ ಕಾಯ್ದೆಯಲ್ಲಿ 'ವರ್ಗಾವಣೆ' ಮತ್ತು ಸೆಕ್ಷನ್ 4 ರ ವ್ಯಾಖ್ಯಾನವನ್ನು ಒಟ್ಟುಗೂಡಿಸಿ ಓದಿದಾಗ, ಅನುದಾನದ ನಿಯಮಗಳಿಗೆ ವಿರುದ್ಧವಾಗಿ ಅನುದಾನ ಪಡೆದವರು ಅಥವಾ ಅವರ ಕಾನೂನು

---

[1] ಬಂತ್ ಸಿಂಗ್ ವಿ. ನಿರಂಜನ್ ಸಿಂಗ್ – ಎ.ಐ.ಆರ್ 2008 ಎಸ್.ಸಿ 1512

ಉತ್ತರಾಧಿಕಾರಿಗಳು ಮಾಡಿದ ಯಾವುದೇ ವರ್ಗಾವಣೆಯು ಅಂತಹ ವರ್ಗಾವಣೆಯನ್ನು ಶೂನ್ಯ ಮತ್ತು ಅನೂರ್ಜಿತಗೊಳಿಸುತ್ತದೆ ಮತ್ತು ಅಸಿಸ್ಟೆಂಟ್ ಕಮೀಷನರ್ ಭೂಮಿಯನ್ನು ವಾಪಸ್ ಪಡೆಯಲು ಮುಂದುವರಿಯುವ ಅಧಿಕಾರವನ್ನು ಹೊಂದಿರುತ್ತಾರೆ. – ಪ್ರಸ್ತುತ ಕೇಸಿನಲ್ಲಿ, ಪಿಟಿಸಿಎಲ್ ಕಾಯ್ದೆಯ ಸೆಕ್ಷನ್ 4 ಮತ್ತು 5 ರ ಪ್ರಕಾರ ಅವರು ಭೂಮಿಯನ್ನು ಹಸ್ತಾಂತರಿಸಿದ್ದಾರೆ ಎಂಬುದು ಪ್ರತಿವಾದಿ ಸಂಖ್ಯೆ 4 ಮತ್ತು 5 ರವರ ವಾದವಲ್ಲ. ಯಾವುದೇ ಮೌಖಿಕ ವಹಿವಾಟಿನಿಂದ ಅವರು 'ಎಕ್ಸ್' ರನ್ನು ಕಾನೂನುಬದ್ಧ ಸ್ವಾಧೀನಕ್ಕೆ ಸೇರಿಸಿಕೊಂಡಿದ್ದಾರೆ ಎಂಬುದು ಮೇಲ್ಮನವಿಯ ವಿಷಯವೂ ಅಲ್ಲ. 'ಎಕ್ಸ್' ಕೇವಲ ಅತಿಕ್ರಮಣಕಾರ ಎಂದು ಅದು ಬಹಿರಂಗಪಡಿಸುತ್ತದೆ ಮತ್ತು ಅವನು ವಂಚನೆ ಮಾಡುವ ಮೂಲಕ ಕಂದಾಯ ದಾಖಲೆ ನಮೂದುಗಳನ್ನು ತನ್ನ ಪರವಾಗಿ ರಚಿಸಿದನು ಮತ್ತು ಕೆನರಾ ಬ್ಯಾಂಕಿನಲ್ಲಿ ಭೂಮಿಯನ್ನು ಅಡಮಾನ ಇಟ್ಟನು. ಪಿ.ಟಿ.ಸಿ.ಎಲ್ ಕಾಯ್ದೆಯಡಿ 'ಎಕ್ಸ್' ಪರವಾಗಿ ಯಾವುದೇ ವರ್ಗಾವಣೆಯಾಗಿರುವುದಿಲ್ಲ, ಆದ್ದರಿಂದ ಪ್ರತಿವಾದಿ ಸಂಖ್ಯೆ 4 ಮತ್ತು 5 ರ ಹಕ್ಕು ಪಿ.ಟಿ.ಸಿ.ಎಲ್ ಕಾಯ್ದೆ ಅಡಿಯಲ್ಲಿ ಪರಿಗಣನೆಗೆ ಒಳಪಡುವ ವಿಷಯವಾಗಿಲ್ಲ. ಅವರು ಭೂಮಿಗೆ ಸಂಬಂಧಿಸಿದಂತೆ ಯಾವುದೇ ಮಾನ್ಯ ಮಾಲೀಕತ್ವವನ್ನು ಹೊಂದಿದ್ದರೆ, ಅವರು ಕಾನೂನಿನ ಪ್ರಕಾರ ಸಿವಿಲ್ ನ್ಯಾಯಾಲಯದ ಮುಂದೆ ಸ್ವಾಧೀನಪಡಿಸಿಕೊಳ್ಳಲು ತಮ್ಮ ಹಕ್ಕನ್ನು ಸಮರ್ಥಿಸಿಕೊಳ್ಳಬೇಕು.[1]

**ಯಾವ ರೀತಿಯ ಜಮೀನು ಗ್ರಾಂಟ್ ಮಾಡಲು ಬರುವುದಿಲ್ಲ**

ಒಣಗಿದ ಅಥವಾ ಬಳಕೆಯಲ್ಲಿಲ್ಲದಂತಹ ಕೆರೆಗಳು ಮತ್ತು ಜಲಮೂಲಗಳಿಗೆ ಸಂಬಂಧಿಸಿದಂತೆ ಯಾವುದೇ ಪಟ್ಟಾವನ್ನು ನೀಡಲಾಗುವುದಿಲ್ಲ.[2] ರಾಜ್ಯ ಮತ್ತು ಪಂಚಾಯ್ತಿಗಳಿಗೆ ಸೂಕ್ತ ಮಾರ್ಗದರ್ಶನವನ್ನು ನೀಡಿ ಗ್ರಾಮದ ಸುತ್ತಮುತ್ತ ಇರುವ ಕೆರೆಗಳನ್ನು ಸೂಕ್ತವಾಗಿ ನಿರ್ವಹಿಸುವಂತೆ, ನೀರು ವ್ಯತ್ಯಯ ಆಗದಂತೆ ಮತ್ತು ಪರಿಸರ

---

[1] ಇಂದುಮತಿ ವಿ. ಜಿಲ್ಲಾಧಿಕಾರಿಗಳು – 2013 (2) ಕೆ.ಸಿ.ಸಿ.ಆರ್ 1528 (ಡಿ.ಬಿ)

[2] ಸರ್ವೆಪಲ್ಲಿ ರಾಮಯ್ಯ ವಿ. ಡಿಸ್ಟ್ರಿಕ್ ಕಲೆಕ್ಟರ್ – ಎ.ಐ.ಆರ್ 2019 ಎಸ್.ಸಿ 1706

ಮೇಲೆ ಮೇಲ್ಮನವಿ ಪರಿಗಣಿಸಲು ಕಾಯ್ದೆಯ ಸೆಕ್ಷನ್ 5 ಎ ಅಡಿಯಲ್ಲಿ ಮೇಲ್ಮನವಿ ನ್ಯಾಯವ್ಯಾಪ್ತಿಯನ್ನು ಚಲಾಯಿಸುವಂತಹ ಮೇಲ್ಮನವಿ ಪ್ರಾಧಿಕಾರಕ್ಕೆ ಇದು ಮುಕ್ತವಾಗಿಲ್ಲ. ಸೆಕ್ಷನ್ 5 ಎ ಅಡಿಯಲ್ಲಿ ಪ್ರಾಧಿಕಾರದ ವ್ಯಾಪ್ತಿ ಮತ್ತು ಅಧಿಕಾರವು ಅಸಿಸ್ಟೆಂಟ್ ಕಮೀಷನರ್ ಆದೇಶವನ್ನು ಮೇಲ್ಮನವಿ ಪ್ರಾಧಿಕಾರವಾಗಿ ಒಮ್ಮೆ ಮಾತ್ರ ಪರಿಶೀಲಿಸಬಹುದು, ಪುನರಾವರ್ತಿತವಾಗಿ ಅಲ್ಲ. ...... ಕೆ.ಎಲ್.ಆರ್ ಕಾಯ್ದೆಯಡಿ (ಕರ್ನಾಟಕ ಭೂ ಕಂದಾಯ ಕಾಯ್ದೆ) ಇಂತಹ ಅನಿಯಂತ್ರಿತ ಆದೇಶಗಳನ್ನು ಕಂದಾಯ ಅಧಿಕಾರಿಗಳು ಚಲಾಯಿಸಿ ಸಾಕಾಗದೆ, ಅಧಿಕಾರ ಚಲಾಯಿಸಲು ಎಸ್.ಸಿ./ಎಸ್.ಟಿ ಕಾಯ್ದೆಯ ನಿಬಂಧನೆಗಳ ಅಡಿಯಲ್ಲಿ ಆದೇಶಗಳನ್ನು ಮಾಡಲು ವಿಸ್ತರಿಸಿ ಪ್ರಯತ್ನಿಸಲಾಗಿದೆ. ಈ ಕಾಯ್ದೆಯ (ಪಿ.ಟಿ.ಸಿ.ಎಲ್) ನಿಬಂಧನೆಗಳ ಅಡಿಯಲ್ಲಿ ಅಥವಾ ನಿಯಮಗಳ ಅಡಿಯಲ್ಲಿ ಅಂತಹ ಯಾವುದೇ ಪ್ರೇರಣಾ ನಿಯಮ ಇಲ್ಲ, ಇದುವರೆಗೆ ಕಾಯ್ದೆಯ ಸೆಕ್ಷನ್ 5 ಎ ಅಡಿಯಲ್ಲಿ ಮೇಲ್ಮನವಿ ವಿಲೇವಾರಿ ಮಾಡುವ ನಿಯಮಗಳ ನಿಯಮ 5 ಎ ಯೊಂದಿಗೆ ಓದಿಕೊಳ್ಳಬೇಕು, ಈ ಕಾಯ್ದೆಯಡಿ ಮೇಲ್ಮನವಿ ಅಧಿಕಾರಕ್ಕೆ, ಕರ್ನಾಟಕ ಭೂ ಕಂದಾಯ ಕಾಯ್ದೆ, 1964 ಸೆಕ್ಷನ್ 25 ಅನ್ನು ಆಹ್ವಾನಿಸಲು ಅನುವು ಮಾಡಿಕೊಡುವುದಿಲ್ಲ.[1] ಕಾಯ್ದೆಯ ಸೆಕ್ಷನ್ 5 ಎ ಅಡಿಯಲ್ಲಿ ಈ ಕಾಯ್ದೆಯಡಿ ಶಾಸನಬದ್ಧ ನ್ಯಾಯಮಂಡಳಿಯಾದ ಮೇಲ್ಮನವಿ ಪ್ರಾಧಿಕಾರವು ಕಂದಾಯ ನ್ಯಾಯಾಲಯವಾಗದು ಅಥವಾ ಅಂತಹ ಕಂದಾಯ ನ್ಯಾಯಾಲಯದ ಯಾವುದೇ ಅಧಿಕಾರಗಳು ಇರುತ್ತೆ ಎಂದು ಸೂಚಿಸಲು ಈ ಎರಡೂ ನಿಬಂಧನೆಗಳಲ್ಲಿ ಏನೂ ಇಲ್ಲ. ಕಾಯ್ದೆಯ ಸೆಕ್ಷನ್ 5 ಎ ಅಡಿಯಲ್ಲಿ ಜಿಲ್ಲಾಧಿಕಾರಿಗಳು ಮೇಲ್ಮನವಿ ಪ್ರಾಧಿಕಾರವಾಗಿ ಕಾರ್ಯನಿರ್ವಹಿಸುತ್ತಿದ್ದಾರೆ.[2]

---

[1] ಆದರೆ ಪ್ರಕರಣವೊಂದರಲ್ಲಿ ಕರ್ನಾಟಕ ಭೂಕಂದಾಯ ಕಾಯ್ದೆ ಕಲಂ 25 ರಲ್ಲಿ ಮಧ್ಯಂತರ ಆಜ್ಞೆಗೆ ಅರ್ಜಿ ಸಲ್ಲಿಸಬಹುದು. ಈ ಕಾಯ್ದೆ ಕಲಂ 25, ಪಿ.ಟಿ.ಸಿ.ಎಲ್ ಕಾಯ್ದೆಗೆ ವ್ಯತಿರಿಕ್ತವಾಗಿ ಇಲ್ಲ ಎಂದಿದೆ ಕರ್ನಾಟಕ ಹೈಕೋರ್ಟ್. (ಮುನಿರಾಜು ವಿ. ಕರ್ನಾಟಕ ರಾಜ್ಯ – ಎ.ಐ.ಆರ್ 2008 ಎಸ್.ಸಿ 1438)

[2] ಹನುಮಂತಯ್ಯ ವಿ. ಕರ್ನಾಟಕ ರಾಜ್ಯ – ಐ.ಎಲ್.ಆರ್ 2006 ಕರ್ 174

## ದಾಖಲೆಯ ಪಠ್ಯವನ್ನು ನೋಡಬೇಕೇ ಹೊರತು ಶೀರ್ಷಿಕೆಯಲ್ಲ

ಸುಪ್ರೀಮ್ ಕೋರ್ಟ್ ಮುಂದೆ ಬಂದ ಪ್ರಕರಣವೊಂದರಲ್ಲಿ,[1] "ದಿನಾಂಕ 04-03-1948 ರಲ್ಲಿ ಗ್ರಾಂಟ್ ಸರ್ಟಿಫಿಕೇಟ್ ನೀಡಲಾಗಿರುತ್ತದೆ, ಅದರಲ್ಲಿ ಸಾರ್ವಜನಿಕ ಹರಾಜಿನಲ್ಲಿ ರೂ 408-12 ಕ್ಕೆ 2 ಎಕರೆ 29 ಗುಂಟೆ ನೀಡಿರುವ ಉಲ್ಲೇಕವಿರುತ್ತದೆ, ಹೈಕೋರ್ಟ್ ಕಂದಾಯ ಎಕ್ಸಟ್ರಾಕ್ಟ್ ಗಳಿಂದ ಗ್ರಾಂಟ್ ಭೂಮಿ ಅಲ್ಲ ಎಂದು ತೀರ್ಮಾನಕ್ಕೆ ಬಂದಿರುತ್ತದೆ, ಇಲ್ಲಿ 1956 ಮತ್ತು 1959 ರಲ್ಲಿ ಪರಭಾರೆ ಆಗಿರುತ್ತದೆ, ಅಂದಿನ ಗ್ರಾಂಟ್ ಶರತ್ತು ಕಾನೂನು ರೀತ್ಯ ಎಂದೆಂದಿಗೂ ಪರಭಾರೆ ಮಾಡಬಾರದು ಎಂದಿದೆ ಎಂದು ವಾದಿಸಲಾಗುತ್ತದೆ. ಆದರೆ ಅಲ್ಲಿನ ಪ್ರತಿಪಾದನೆ ಬಗ್ಗೆ ಉಲ್ಲೇಕಿತ ಸುಪ್ರೀಮ್ ಕೋರ್ಟ್ ತೀರ್ಪಿನ ಅಂಶಗಳು ಸಹಾಯಕ್ಕೆ ಬರದು" ಎನ್ನುತ್ತ ಆ ತೀರ್ಪುಗಳನ್ನು ವ್ಯಾಖ್ಯಾನಿಸಲು ನಿರಾಕರಿಸಿದೆ, ಈ ಕೇಸಿನಲ್ಲಿ ಗಹನವಾದ ಘೋಷಿತ ಅಂಶವೆಂದರೆ, "ದಾಖಲೆಯ ನೈಜ ಸ್ವರೂಪವನ್ನು ತಿಳಿಯಲು, ಒಬ್ಬರು ದಾಖಲೆಯ ಪಠ್ಯವನ್ನು ನೋಡಬೇಕೇ ಹೊರತು ದಾಖಲೆಯ ಶೀರ್ಷಿಕೆಯಲ್ಲ. ದಾಖಲೆಯಲ್ಲಿನ ಪಠ್ಯ, ಪಾರ್ಟಿಗಳ ನಡವಳಿಕೆ ಮತ್ತು ದಾಖಲೆಯ ಸಾಕ್ಷ್ಯಗಳಿಂದ ಉದ್ದೇಶವನ್ನು ಸಂಗ್ರಹಿಸಬೇಕು. ಕಾರ್ಯಗತ ಮಾಡಿದವನ ಉದ್ದೇಶವನ್ನು ಕಂಡುಹಿಡಿಯುವ ಮೂಲಕ, ದಾಖಲೆಯ ನಿಯಮಗಳ ಸಮಗ್ರ ಓದುವಿಕೆಯಿಂದ, ಮತ್ತು ನಂತರ, ಅನುಮತಿಸುವ ಮಟ್ಟಿಗೆ ನೋಡುವ ಮೂಲಕ, ಚಾಲ್ತಿಯಲ್ಲಿರುವ ಯಾವ ಸಂದರ್ಭಗಳು ಅದನ್ನು ಕಾರ್ಯಗತಗೊಳಿಸಲು ದಾಖಲೆಯ ಲೇಖಕರನ್ನು ಮನವೊಲಿಸಿದವು ಎಂದು ಶೋಧಿಸುವ ಮೂಲಕ ದಾಖಲೆಯ ನಿರ್ಮಾಣದ ಪ್ರಶ್ನೆಯನ್ನು ನಿರ್ಧರಿಸಬೇಕು ಎಂದು ತೀರ್ಮಾನಿಸಲಾಗಿದೆ. ವಹಿವಾಟಿನ ಸ್ವರೂಪವನ್ನು ಕಂಡುಹಿಡಿಯುವ ದೃಷ್ಟಿಯಿಂದ, ದಾಖಲೆಯನ್ನು ಒಟ್ಟಾರೆಯಾಗಿ ಓದಬೇಕಾಗಿದೆ. ಬಳಸಿದ ಒಂದು ವಾಕ್ಯ ಅಥವಾ ಪದವು ವ್ಯವಹಾರದ ನೈಜ ಸ್ವರೂಪವನ್ನು ನಿರ್ಧರಿಸುವುದಿಲ್ಲ." ಎಂದಿದೆ ಸುಪ್ರೀಮ್ ಕೋರ್ಟ್.

---

[1] ಮುನಿರಾಜು ವಿ. ಕರ್ನಾಟಕ ರಾಜ್ಯ – ಎ.ಐ.ಆರ್ 2008 ಎಸ್.ಸಿ 1438

## ಗ್ರಾಂಟ್ ರೆಕಾರ್ಡ್ ಇಲ್ಲದೆ ತೀರ್ಮಾನ ಸರಿಯಲ್ಲ

ಪ್ರಕರಣವೊಂದರಲ್ಲಿ 1953-54 ರಲ್ಲಿ ಗ್ರಾಂಟ್ ಮಾಡಲಾಗಿದೆ ಎಂದು ಪ್ರತಿಪಾದಿಸಲಾಗಿತ್ತು, 1967 ರಲ್ಲಿ ಮೊದಲ ಕ್ರಯ ಆಗಿತ್ತು, 1996-97 ರಲ್ಲಿ ಗ್ರಾಂಟಿ ವಾರಸ್ಸುದಾರರು ಅರ್ಜಿ ಹಾಕಿ ಕೊಂಡಿದ್ದರು. ಕೆಳನ್ಯಾಯಾಲಯದಲ್ಲಿ ಹೊರಬಂದ ವಿಚಾರವೆಂದರೆ ಸದರಿ ಜಮೀನಿನ ಅಸಲು ಗ್ರಾಂಟ್ ರೆಕಾರ್ಡ್ ಲಭ್ಯವಿಲ್ಲ, ಜಿಲ್ಲಾಧಿಕಾರಿಗಳು ಕಂದಾಯ ದಾಖಲೆಯಲ್ಲಿನ ಒಂದು ನಮೂದಾದ "ಡಿ.ಸಿ.ಎಫ್" ಎಂಬ ಪದವನ್ನು ವ್ಯಾಖ್ಯಾನಿಸಿ ಊಹಿಸಿ ಅದನ್ನು ಡಿಪ್ರೆಸ್ಡ್ ಕ್ಲಾಸ್ ಫೈಲ್ ಎಂದು ಆದುದರಿಂದ ಸದರಿ ಭೂಮಿ ಡಿಪ್ರೆಸ್ಡ್ ಕ್ಲಾಸ್ ಕನ್ಸೆಷನ್ ರೂಲ್ಸ್ ನಲ್ಲಿ ಮಂಜೂರಾಗಿರುವುದೆಂದು ಅರ್ಥೈಸಿದರು. ಅದಕ್ಕಾಗಿ ಅದು 1953-54 ರ ಗ್ರಾಂಟ್ ಎಂದು ಪರಿಗಣಿಸಿ ಅಂದು ಇದ್ದ ನೋಟಿಫಿಕೇಷನ್ ನಂ. 7594-604-ಎಲ್.ಆರ್ 266-53-2 ದಿನಾಂಕ 05-08-1953 ರಂತೆ 20 ವರ್ಷ ಪರಭಾರೆ ಮಾಡಬಾರದೆಂಬ ನಿಯಮ ಉಲ್ಲಂಘಿಸಲಾಗಿದೆ ಎಂದು ಜಿಲ್ಲಾಧಿಕಾರಿಗಳು ಪರಿಗಣಿಸಿದ್ದರು. ಈ ಬಗ್ಗೆ ಹೈಕೋರ್ಟ್ ಹೀಗೆ ತೀರ್ಪು ನೀಡಿದೆ, "ಇದು ಮಂಜೂರಾದ ಭೂಮಿಯೇ ಎಂಬ ಪ್ರಶ್ನೆಯನ್ನು ಮಾರುಕಟ್ಟೆಯ ಬೆಲೆಗಿಂತ ಕಡಿಮೆ ದರದಲ್ಲಿ ಮಂಜೂರು ಮಾಡಲಾಗಿದೆಯೇ ಎಂಬ ಸಂದರ್ಭದಿಂದ ಪರಿಶೀಲಿಸಬೇಕಾಗಿದೆ, ಆದ್ದರಿಂದ ಅದನ್ನು ಕಾಯ್ದೆಯ ವ್ಯಾಪ್ತಿಗೆ ತರಲು. ಚಾಲ್ತಿಯಲ್ಲಿರುವ ನಿಯಮ ಅಂದರೆ, ಅಧಿಸೂಚನೆಯನ್ನು ಅನ್ವಯವಾಗುವ ನಿಯಮವೆಂದು ತೆಗೆದುಕೊಳ್ಳಬೇಕು, ಭೂಮಿಯನ್ನು ಅಸಮಾಧಾನಗೊಂಡ (ಅಪ್ಸೆಟ್) ಬೆಲೆಗೆ ನೀಡಿದರೆ ಅಥವಾ ಅಸಮಾಧಾನಗೊಂಡ ಬೆಲೆಯನ್ನು ಕಡಿಮೆಗೊಳಿಸಿದರೆ ಅದು ಮಂಜೂರು ಭೂಮಿಯಾಗಿರುತ್ತದೆ. ಮಾರುಕಟ್ಟೆ ಬೆಲೆಯನ್ನು ಸಂಗ್ರಹಿಸುವ ಮೂಲಕ ಭೂಮಿಯನ್ನು ಮಂಜೂರು ಮಾಡಿದ್ದರೆ, ಅನ್ವಯವಾಗುವ ನಿಯಮದ ವ್ಯಾಖ್ಯಾನದೊಳಗೆ ಭೂಮಿಯನ್ನು ಇನ್ನೂ ಮಂಜೂರು ಮಾಡಿದ ಭೂಮಿಯಾಗಿರುತ್ತದೆ ಎಂದು ಹೇಳಲಾಗುವುದಿಲ್ಲ. ಅನುದಾನ ನೀಡುವಾಗ ಅನುದಾನ ನೀಡುವವರಿಂದ ಅಂಗೀಕರಿಸಲ್ಪಟ್ಟ ಪರಿಗಣನೆಗೆ ಸಂಬಂಧಿಸಿದಂತೆ ಯಾವುದೇ ದಾಖಲೆಗಳ ಅನುಪಸ್ಥಿತಿಯಲ್ಲಿ, ಅದು ಮಂಜೂರು ಮಾಡಿದ

ಭೂಮಿ ಎಂಬ ತೀರ್ಮಾನಕ್ಕೆ ಬರಲು ಸಾಧ್ಯವಿಲ್ಲ... ವಿಳಂಬ ಕಾರಣಕ್ಕೂ ಅರ್ಜಿ ಪರಿಗಣಿಸಲಾಗದು" ಎಂದು ತೀರ್ಪಿತ್ತಿದೆ.[1] (ಬೆಂಗಳೂರು – ರಿಟ್.ಅರ್ಜಿ.ನಂ 54027/2016 – ದಿ 14-03-2019)

ಅನುದಾನದ ಸ್ವರೂಪವು ವಿವಾದಾಸ್ಪದವಾಗಿದ್ದರೆ, ಪಿಟಿಸಿಎಲ್ ಕಾಯ್ದೆಯಡಿ ವಿಷಯವನ್ನು ನಿರ್ಧರಿಸುವ ಅಧಿಕಾರವು ಮೊದಲು ಅನುದಾನದ ಸ್ವರೂಪ ಮತ್ತು ನಂತರ ಅನುದಾನದ ಷರತ್ತುಗಳ ಬಗ್ಗೆ ವ್ಯಕ್ತಿನಿಷ್ಠವಾಗಿ ತೃಪ್ತಿಪಡಿಸಬೇಕು; ಈ ಉದ್ದೇಶಕ್ಕಾಗಿ ಅವರು ಭೂಮಿಯನ್ನು ನೀಡುವ ಮೂಲ ಆದೇಶವನ್ನು ನೋಡಬೇಕು ಮತ್ತು ಅದು ಲಭ್ಯವಿಲ್ಲದಿದ್ದರೆ, ಅನುದಾನವನ್ನು ದಾಖಲಿಸಲು ನಿರ್ವಹಿಸಲಾದ ಲ್ಯಾಂಡ್ ಗ್ರಾಂಟ್ ರಿಜಿಸ್ಟರ್‌ನಂತಹ ಯಾವುದೇ ಸಮಕಾಲೀನ ದಾಖಲೆ. ಮಾರಾಟದ ಸಿಂಧುತ್ವವನ್ನು ನಿರ್ಧರಿಸುವ ಪ್ರಾಧಿಕಾರವು ಊಹೆಗಳು ಅಥವಾ ಅನುಮಾನಗಳು ಅಥವಾ ಮ್ಯುಟೇಷನ್ ನಮೂದುಗಳ ಮೇಲೆ ಕಾರ್ಯನಿರ್ವಹಿಸಲು ಸಾಧ್ಯವಿಲ್ಲ ಎಂದು ಸ್ಪಷ್ಟಪಡಿಸಲಾಗಿದೆ.[2]

**ಗ್ರಾಂಟ್ ಜಮೀನೆ ಅಥವ ಮೌಲ್ಯಕ್ಕೆ ಕೊಟ್ಟಿರುವುದೇ**

ಭಾರತೀಯ ಸರ್ವೋಚ್ಚ ನ್ಯಾಯಾಲಯದ ಮುಂದೆ ಬಂದಿದ್ದಂತಹ ಬಿ.ಕೆ ಮುನಿರಾಜು ಕೇಸಿನಲ್ಲಿ (2008) ಸಾರ್ವಜನಿಕ ಹರಾಜಿನಲ್ಲಿ ಕಿಮ್ಮತ್ತಿಗೆ ಕೊಂಡುಕೊಂಡಿರುವ ಜಮೀನು ಪಿ.ಟಿ.ಸಿ.ಎಲ್ ವ್ಯಾಪ್ತಿಗೆ ಬರುವುದಿಲ್ಲ ಎಂದು ಮಹತ್ತರ ವಿಚಾರವನ್ನು ಎತ್ತಿ ಹಿಡಿಯಲಾಗಿದೆ. ಗ್ರಾಂಟ್ ಆದ ಜಮೀನಿನ ವಿಚಾರದಲ್ಲಿ ಸಾಗುವಳಿ ಪತ್ರದಲ್ಲಿನ ನಿಬಂದನೆಗಳು ಕಾನೂನು ಬದ್ದವಾಗಿ ವಿದಿಸಿಲ್ಲ ಎಂದು ಗ್ರಾಂಟಿದಾರನು ಸೂಕ್ತ ಸಮಯದಲ್ಲಿ ಪ್ರಶ್ನಿಸಬೇಕಿರುತ್ತದೆ ಹೊರತು ಗ್ರಾಂಟಿಯಿಂದ ಖರೀದಿಸಿದವರು ಸದರಿ ಗ್ರಾಂಟ್ ಕಂಡೀಷನ್ ನಿಯಮ ಭಾಹಿರವಾಗಿದೆ ಎಂದು ಪ್ರಶ್ನಿಸುವ ಹಕ್ಕು ಇಲ್ಲ ಎಂದು ಬದ್ರಪ್ಪನವರ ಕೇಸಿನಲ್ಲಿ (2008) ಮಾನ್ಯ ಶ್ರೇಷ್ಠ ನ್ಯಾಯಾಲಯ ಆದೇಶಿಸಿರುತ್ತದೆ.

---

[1] ಚನ್ನಬಸಪ್ಪ ವಿ. ಜಿಲ್ಲಾಧಿಕಾರಿ – ಮನು/ ಕೆ.ಎ/ 1313/ 2019

[2] ನಾಗೇಂದ್ರಪ್ಪ ವಿ. ಜಿಲ್ಲಾಧಿಕಾರಿಗಳು – 2002 (3) ಕೆ.ಸಿ.ಸಿ.ಆರ್ 1633

ಈ ಬಗ್ಗೆ ಮಂಚೂಣಿಯಲ್ಲಿ ಉತ್ತರ ನೀಡಿರುವುದೇ ಬಿ.ಕೆ.ಮುನಿರಾಜು ಪ್ರಕರಣ, 1948 ರಲ್ಲಿ ನೀಡಿದ ಗ್ರಾಂಟ್ ಪ್ರಮಾಣಪತ್ರದಲ್ಲಿ ಸಾರ್ವಜನಿಕ ಹರಾಜಿನಲ್ಲಿ 2 ಎಕರೆ 29 ಗುಂಟೆ, ರೂ 408.12 ಕ್ಕೆ ಮೌಲ್ಯಕ್ಕೆ ಗ್ರಾಂಟ್ ಎಂದು ತೋರಿಸುತ್ತದೆ. ಇದನ್ನು 1956 ಮತ್ತು 1959 ರಲ್ಲಿ ಪರಭಾರೆ ಆಗಿರುತ್ತದೆ, 1981 ರಲ್ಲಿ ಗ್ರಾಂಟಿ ವಾರಸ್ಸುದಾರರು ಅರ್ಜಿ ಸಲ್ಲಿಸುತ್ತಾರೆ. ಮೊದಲಿಗೆ ಎ.ಸಿ ಕೋರ್ಟಿನಲ್ಲಿ ಮಾರಾಟವು 10 ವರ್ಷದ ನಂತರ ಆಗಿರುವುದರಿಂದ ಕಾಯ್ದೆ ಅನ್ವಯಿಸದು ಎಂದು ವಜಾ ಆಗಿರುತ್ತದೆ. ಡಿ.ಸಿ ಕೂಡ ಅಪೀಲು ವಜಾ ಮಾಡಿರುತ್ತಾರೆ. ಹೈಕೋರ್ಟ್ ಏಕಸದಸ್ಯ ಪೀಠ ವಾಪಸ್ ಎ.ಸಿ ಗೆ ರಿಮ್ಯಾಂಡ್ ಮಾಡಿ ಅಸಲು ಸಾಗುವಳಿ ಚೀಟಿ ಮತ್ತು ಗ್ರಾಂಟ್ ರೆಕಾರ್ಡ್ ಗಳನ್ನು ಪರಿವೀಕ್ಷಿಸಿ ಕಾಯ್ದೆ ಅನ್ವಯಿಸುತ್ತದೆಯೇ ಇಲ್ಲವೇ ನೋಡುವಂತೆ ತಿಳಿಸಿರುತ್ತದೆ. ನಂತರ ಸದರಿ ಜಮೀನು "ಗ್ರಾಂಟ್ ಜಮೀನು" ಅಲ್ಲ ಅದು ಸಾರ್ವಜನಿಕ ಹರಾಜಿನಲ್ಲಿ ಖರೀದಿಯಾಗಿರುವುದು ಆದುದರಿಂದ ಕಾಯ್ದೆ ಅನ್ವಯಿಸದು ಎಂದು ತೀರ್ಪು ನೀಡಿರುತ್ತಾರೆ. ಇದರ ವಿರುದ್ದ ಡಿ.ಸಿ ಮೇಲ್ಮನವಿ ವಜಾ ಆಗುತ್ತದೆ. ಹೈಕೋರ್ಟಿನ ಮುಂದೆ ಅದು ಹರಾಜು ಹಾಕಿದ ಜಮೀನು ಅಲ್ಲ ಗ್ರಾಂಟ್ ಜಮೀನು ಅಂದು ಪೂರ್ಣವಾಗಿ ಪರಭಾರೆ ಕಾನೂನು ಲಾಗೂ ಇತ್ತು ಎಂದು ವಾದ ಮಾಡಲಾಗಿರುತ್ತದೆ. ಹೈಕೋರ್ಟಿನ ಏಕಸದಸ್ಯ ಮತ್ತು ದ್ವಿಸದಸ್ಯ ಪೀಠದಲ್ಲಿ ವಜಾ ಆಗುತ್ತದೆ. ಸುಪ್ರೀಮ್ ಕೋರ್ಟ್ ಈ ಬಗ್ಗೆ ಹೀಗೆ ವ್ಯಾಖ್ಯಾನಿಸಿದೆ, "ನಿಯಮಗಳಲ್ಲಿ, ನಿಯಮ 43 ಸಂಬಂಧಿತವಾಗಿದೆ, ಇದು ಅನುಭೋಗದ ಅನುದಾನದ ಬಗ್ಗೆ ಹೇಳುತ್ತದೆ. ನಿಯಮ 43 ರ ಉಪ-ನಿಯಮ (1) ಎಲ್ಲಾ ಭೂಮಿಯನ್ನು ಸಾಮಾನ್ಯವಾಗಿ ಸಾರ್ವಜನಿಕ ಹರಾಜಿನಿಂದ ಮಾರಾಟ ಮಾಡಬೇಕೆಂದು ಆದೇಶಿಸುತ್ತದೆ. ಉಪ-ನಿಯಮ (5) ಆದೇಶಗಳು ಖಿನ್ನತೆಗೆ ಒಳಗಾದ ವರ್ಗಗಳ (ಡಿಪ್ರೆಸ್ಡ್ ಕ್ಲಾಸಸ್) ಸದಸ್ಯರಿಗೆ ಅನುಭೋಗವನ್ನು ನೀಡುವುದು. ಉಚಿತ ಅಥವಾ ಅಸಮಾಧಾನಗೊಂಡ (ಅಪ್ಸೆಟ್) ಬೆಲೆಗೆ ನೀಡಲಾದ ಭೂಮಿಯನ್ನು ಪರಭಾರೆಮಾಡಬಾರದು ಆದರೆ ಸಾಲಗಳಿಗೆ ಭದ್ರತೆಯಾಗಿ ಸ್ವೀಕರಿಸಬಹುದು ಎಂದು ಉಪ-ನಿಯಮ (8) ಸ್ಪಷ್ಟಪಡಿಸುತ್ತದೆ. ಈ ನಿಯಮಗಳಲ್ಲಿ

ಕಂಡುಬರುವ ಖಿನ್ನತೆಗೆ ಒಳಗಾದ ವರ್ಗಗಳನ್ನು ಭಾರತದ ಸಂವಿಧಾನದಲ್ಲಿ ಸಂಭವಿಸುವ "ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡ" ಎಂಬ ಪದಗಳಿಗೆ ಸಮನಾಗಿ ನಿರ್ಮಿಸಬೇಕಾಗುತ್ತದೆ ಎಂದು ಮೇಲಿನ ನಿಬಂಧನೆಗಳಿಗೆ ಸೇರಿಸಲಾದ ಟಿಪ್ಪಣಿ ಸ್ಪಷ್ಟಪಡಿಸುತ್ತದೆ. ..... ಪ್ರಶ್ನಾರ್ಹವಾದ ಭೂಮಿ "ಮಂಜೂರು ಮಾಡಿದ ಭೂಮಿಯೇ" ಅಥವಾ "ಸಾರ್ವಜನಿಕ ಹರಾಜಿನಲ್ಲಿ ಬೆಲೆಗೆ ಖರೀದಿಸಿದ ಭೂಮಿಯೇ" ಎಂದು ಅರ್ಥಮಾಡಿಕೊಳ್ಳಲು, ಸಂಬಂಧಿತ ದಾಖಲೆಗಳನ್ನು ಪರಿಶೀಲಿಸುವುದು ಮತ್ತು ಅದೇ ರೀತಿ ನಿರ್ಧರಿಸುವುದು ಅಧಿಕಾರಿಗಳ ಕಡೆಯಿಂದ ಆಗಿದೆ. .... ಈ ಭೂಮಿಯನ್ನು ಮೋಟಪ್ಪ ಅವರು ಸಾರ್ವಜನಿಕ ಹರಾಜಿನಲ್ಲಿ ಖರೀದಿಸಿದರು ಮತ್ತು ಇದು ನಿಯಮಗಳ ನಿಯಮ 43 (8) ರ ಅರ್ಥದಲ್ಲಿ "ಮಂಜೂರು ಮಾಡಿದ ಭೂಮಿ" ಅಲ್ಲ. ಎರಡೂ ಅಧಿಕಾರಿಗಳು ದಾಖಲಿಸಿದ ಶೋಧನೆಯು ಮೂಲಭೂತವಾಗಿ ಸಂಬಂಧಿತ ಸಾಮಗ್ರಿಗಳ ಆಧಾರದ ಮೇಲೆ ವಾಸ್ತವಿಕ ಶೋಧನೆಯಾಗಿದೆ ಮತ್ತು ಅದನ್ನು ರಿಟ್ ನ್ಯಾಯಾಲಯವು ಹಸ್ತಕ್ಷೇಪ ಮಾಡಲಾಗುವುದಿಲ್ಲ ಎಂದು ವಾದಿಸಲಾಯಿತು. ... ದಾಖಲೆಯ ನೈಜ ಸ್ವರೂಪವನ್ನು ತಿಳಿಯಲು, ಒಬ್ಬರು ದಾಖಲೆಯ ನಮೂದುಗಳನ್ನು ನೋಡಬೇಕೇ ಹೊರತು ದಾಖಲೆಯ ಶೀರ್ಷಿಕೆಯಲ್ಲ. ಪತ್ರದಲ್ಲಿನ ವಾಚನಗೋಷ್ಠಿಗಳು, ಪಾರ್ಟಿಗಳ ನಡವಳಿಕೆ ಮತ್ತು ದಾಖಲೆಯ ಸಾಕ್ಷ್ಯಗಳಿಂದ ಉದ್ದೇಶ ಸಂಗ್ರಹಿಸಬೇಕು. ಕಾರ್ಯನಿರ್ವಾಹಕನ ಉದ್ದೇಶವನ್ನು ಕಂಡುಹಿಡಿಯುವ ಮೂಲಕ, ಮೊದಲನೆಯದಾಗಿ, ದಾಖಲೆಯ ನಿಯಮಗಳ ಸಮಗ್ರ ಓದುವಿಕೆಯಿಂದ, ಮತ್ತು ನಂತರ, ಅನುಮತಿಸುವ ಮಟ್ಟಿಗೆ ನೋಡುವ ಮೂಲಕ, ಚಾಲ್ತಿಯಲ್ಲಿರುವ ಯಾವ ಸಂದರ್ಭಗಳು ದಾಖಲೆಯನ್ನು ಕಾರ್ಯಗತಗೊಳಿಸಲು ಲೇಖಕರನ್ನು ಮನವೊಲಿಸಿದವು, ಎಂದು ದಾಖಲೆಯ ನಿರ್ಮಾಣದ ಪ್ರಶ್ನೆಯನ್ನು ನಿರ್ಧರಿಸಬೇಕು ಎಂದು ತೀರ್ಮಾನಿಸಲಾಗಿದೆ. ವಹಿವಾಟಿನ ಸ್ವರೂಪವನ್ನು ಕಂಡುಹಿಡಿಯುವ ದೃಷ್ಟಿಯಿಂದ, ದಾಖಲೆಯನ್ನು ಒಟ್ಟಾರೆಯಾಗಿ ಓದಬೇಕಾಗಿದೆ. ಬಳಸಿದ ಒಂದು ವಾಕ್ಯ ಅಥವಾ ಒಂದು ಪದವು ವ್ಯವಹಾರದ ನೈಜ ಸ್ವರೂಪವನ್ನು ನಿರ್ಧರಿಸುವುದಿಲ್ಲ. ...

ದಾಖಲೆಯನ್ನು "ಸರ್ಟಿಫಿಕೇಟ್ ಆಫ್ ಗ್ರಾಂಟ್" ಎಂದು ವಿನ್ಯಾಸಗೊಳಿಸಲಾಗಿರುವುದರಿಂದ ಅಥವಾ, ಈ ಜಮೀನು ಕಾಯ್ದೆ ಮತ್ತು ನಿಯಮಗಳ ನಿಬಂಧನೆಗಳನ್ನು ಆಕರ್ಷಿಸುವ "ಮಂಜೂರು ಮಾಡಿದ ಭೂಮಿ" ಎಂದು ಭಾವಿಸಲಾಗುವುದಿಲ್ಲ. .. ಆದರೆ ಈ ಪ್ರಕರಣದಲ್ಲಿ, ಮಂಚೇಗೌಡ ಪ್ರಕರಣ – 1984(3) ಎಸ್.ಸಿ.ಆರ್ 502, ಸಿದ್ದೇಗೌಡ ವಿ. ಉಪವಿಭಗಾಧಿಕಾರಿ–2003(1) ಎಸ್.ಸಿ.ಅರ್ 1108, ಗುಂಟಯ್ಯ ವಿ. ಹಬಮ್ಮ – ಎ.ಐ.ಆರ್ 2005 ಎಸ್.ಸಿ 4013 ಮೊಹಮ್ಮದ್ ಹನೀಫ್ ವಿ. ಜಿಲ್ಲಾಧಿಕಾರಿ – 2004 (13) ಎಸ್.ಸಿ.ಸಿ, 90, ಇವುಗಳನ್ನು ಆಧಾರವಾಗಿ ವಾದ ಮಾಡಿದ್ದ ಗ್ರಾಂಟಿ ಕಡೆಯವರ ಪ್ರತಿಪಾದನೆಗೆ ಇದು ಅನ್ವಯಿಸದು ಎನ್ನುತ್ತ ಹೆಚ್ಚಾಗಿ ಈ ಕೇಸುಗಳ ಕಾನೂನು ಮಹತ್ವವನ್ನು ವ್ಯಾಖ್ಯಾನಿಸಿ ವಿವರಿಸಲು ನಿರಾಕರಿಸಿದೆ ಸುಪ್ರೀಮ್ ಕೋರ್ಟ್.[1]

ಮಂಚೇಗೌಡ ಪ್ರಕರಣದಲ್ಲಿ ಪಿ.ಟಿ.ಸಿ.ಎಲ್ ಕಾಯ್ದೆ ಸಂವಿಧಾನ ಬದ್ಧತೆಯನ್ನು ಪ್ರಶ್ನಿಸಲಾಗಿತ್ತು, ಕಾಯ್ದೆಗೆ ಮುಂಚೆ ಆದ ವ್ಯವಹಾರಗಳನ್ನು ಅನೂರ್ಜಿತಗೊಳಿಸುವ ಬಗ್ಗೆ ಪ್ರಶ್ನಿಸಲಾಗಿತ್ತು, ಪರಿಹಾರ ನೀಡದೆ ವಾಪಸ್ ಪಡೆಯುವ ಪ್ರಕ್ರಿಯೆ ಪ್ರಶ್ನಿಸಲಾಗಿತ್ತು, ಇಲ್ಲಿ ಕಾಯ್ದೆಯ ಸಂವಿಧಾನ ಬದ್ಧತೆಯನ್ನು ಎತ್ತಿ ಹಿಡಿಯಲಾಗಿತ್ತು.

ಸಿದ್ದೇಗೌಡ ಪ್ರಕರಣದಲ್ಲಿ, (2003 (10) ಎಸ್.ಸಿ,ಸಿ 675) ಇಲ್ಲಿ 1965 ರಲ್ಲಿ  ಒಂದುವರೆ ಎಕರೆ ರೂ 750 ಅಪ್ಸೆಟ್ ಮೊತ್ತಕ್ಕೆ ಗ್ರಾಂಟ್ ಆಗಿರುತ್ತದೆ, 1968 ರಲ್ಲಿ ರೂ 3000 ಕ್ಕೆ ಮೊದಲ ಕ್ರಯ ಆಗಿರುತ್ತದೆ. ಗ್ರಾಂಟ್ ಪ್ರಮಾಣಪತ್ರದಲ್ಲಿ ಪರಭಾರೆ ಶರತ್ತು ಇಲ್ಲ ಎಂದು ವಾದಿಸಲಾಗಿರುತ್ತದೆ, ಆದರೆ ಮುಂದಿನ ಅನುಭವ ಭೂಕಂದಾಯ ಕೋಡ್ ಮತ್ತು ನಿಯಮಗಳಿಗೆ ಬದ್ಧವಾಗಿರತಕ್ಕದ್ದು ಎಂಬ ನಮೂದು ಇರುತ್ತದೆ, ಮೂರು ವರ್ಷದಲ್ಲಿ ಕ್ರಯ ಮತ್ತು ಅಪ್ಸೆಟ್ ಮೌಲ್ಯದ ವ್ಯತ್ಯಾಸವನ್ನು ಗಮನಿಸಿ, ಈ ಕಾರಣಕ್ಕೆ ಅಪ್ಸೆಟ್

[1] ಟಿ.ಕೆ.ಮುನಿರಾಜು ವಿ. ಕರ್ನಾಟಕ ರಾಜ್ಯ – ಎ.ಐ.ಆರ್ 2008 ಎಸ್.ಸಿ 1438

ಮೌಲ್ಯ ಮಾರುಕಟ್ಟೆ ಮೌಲ್ಯ ಅಲ್ಲ ಎಂದು ನಿರ್ಧರಿಸಿ ಕಲಂ 4 ಪಿ.ಟಿ.ಸಿ.ಎಲ್ ಕಾಯ್ದೆ ಉಲ್ಲಂಘಿಸಲಾಗಿದೆ ಎಂಬ ತೀರ್ಪು ಹೊರಬಂದಿದೆ.

ಗುಂಟಯ್ಯ ಪ್ರಕರಣದಲ್ಲಿ ಹೇಳಿರುವಂತೆ,[1] 1960 ರ ಮೈಸೂರು ಭೂ ಕಂದಾಯ ತಿದ್ದುಪಡಿ ನಿಯಮದಂತೆ ಎಸ್.ಸಿ ಮತ್ತು ಎಸ್.ಟಿ ರವರಿಗೆ ಮೊದಲಿಗೆ ಲೀಸ್ ನಲ್ಲಿ ಜಮೀನನ್ನು ನೀಡಲಾಗುತ್ತಿತ್ತು ನಂತರ ನಿಯಮ 43–ಜೆ ಅಡಿಯಲ್ಲಿ ಖಾಯಂ ಆಗಿ ಗ್ರಾಂಟ್ ಮಾಡಿ 15 ವರ್ಷ ಪರಭಾರೆ ಶರತ್ತು ವಿಧಿಸಲಾಗುತ್ತಿತ್ತು. 1959 ರಿಂದ 1965 ರಲ್ಲಿ ಗ್ರಾಂಟ್ ಮಾಡಲಾಗಿತ್ತು. 1979 ರ ನಂತರ ಮೊದಲ ಪರಭಾರೆ ಸರ್ಕಾರದ ಅನುಮತಿ ಪಡೆಯದೆ ಮಾಡಲಾಗಿತ್ತು. ನಿಯಮ 43–ಜೆ ಅಡಿಯಲ್ಲಿ ಪರಭಾರೆ ನಿಷೇದ ಮಾಡಬೇಕು ಎಂದು ನಮೂದು ಇರದೆ ಗ್ರಾಂಟ್ ಪತ್ರದಲ್ಲಿ ಹಾಗೆ ನಿಷೇದ ಹೇರಿರುವುದನ್ನು ಖರೀದಿದಾರರು ಪ್ರಶ್ನಿಸಿದ್ದರು. ಹೈಕೋರ್ಟಿನ ಪೂರ್ಣ ಪೀಠ ಹಾಗೆ ಶರತ್ತು ವಿಧಿಸಲಾಗದು ಎಂದಿತ್ತು. ಆದರೆ ಸುಪ್ರೀಮ್ ಕೋರ್ಟ್ ಈ ಅಂಶವನ್ನು ಒಪ್ಪದೆ ನಿಯಮ 43–ಜೆ ಸಾಮಾನ್ಯ ನಿಯಮವಾಗಿದ್ದು, ಸರ್ಕಾರವು ಗೇಣಿದಾರರಿಗೆ ಗ್ರಾಂಟ್ ಮಾಡಿ ಮಾಲೀಕತ್ವ ನೀಡುವಾಗ ಶರತ್ತು ವಿಧಿಸಬಹುದು, ಅದನ್ನು ಗೇಣಿದಾರರು ಪ್ರಶ್ನಿಸಬೇಕೆ ಹೊರತು ಮೂರನೇ ಪಾರ್ಟಿಗಳಾದ ಖರಿದಿದಾರರು ಅಲ್ಲ ಎಂಬ ತೀರ್ಪನ್ನು ನೀಡಿತು.

ಮೊಹಮ್ಮದ್ ಹನೀಫಾ ಪ್ರಕರಣದಲ್ಲಿ[2] 1961 ರಲ್ಲಿ ಗ್ರಾಂಟ್ ಆದೇಶ ನೀಡಲಾಗಿತ್ತು, 1962 ರಲ್ಲಿ ಸಾಗುವಳಿ ಚೀಟಿ ನೀಡಲಾಗಿತ್ತು, 1966 ರಲ್ಲಿ ಮೊದಲ ಕ್ರಯ ಆಗಿತ್ತು, ಕೆಳ ನ್ಯಾಯಾಲಯದಲ್ಲಿ ಸೋಲನ್ನ ಕಂಡ ಖರೀದಿದಾರ ಸುಪ್ರೀಮ್ ಮೆಟ್ಟಿಲು ಹತ್ತಿದ, ಅಲ್ಲಿ ಮೊದಲಭಾರಿಗೆ ವ್ಯತಿರಿಕ್ತ ಸ್ವಾಧೀನದ ಬಗ್ಗೆ ಪ್ರತಿಪಾದಿಸಲಾಗಿತ್ತು, ಇದು ಮೊದಲ ಭಾರಿಗೆ ಕೆಳ ನ್ಯಾಯಾಲಯದಲ್ಲಿಯೇ ಪ್ರತಿಪಾದಿಸಬೇಕಿತ್ತು, ಹೈಕೋರ್ಟಿನ ಮುಂದೆ ಪ್ರತಿಪಾದಿಸಲಾಗಿತ್ತಾದರೂ ಅಲ್ಲಿ ಸೂಕ್ತ ವಿವರಗಳು ನೀಡಿರುವುದಿಲ್ಲ,

---

[1] ಗುಂಟಯ್ಯ ವಿ. ಹಂಬಮ್ಮ – 2005 (6) ಎಸ್.ಸ್.ಸಿ 228

[2] ಮೊಹಮ್ಮದ್ ಹನೀಫ್ ವಿ. ಜಿಲ್ಲಾಧಿಕಾರಿ – 2004 (13) ಎಸ್.ಸಿ.ಸಿ 90

ರಿಮ್ಯಾಂಡ್ ಮಾಡಲು ಕೋರಿಕೆ ಸಲ್ಲಿಸಲಾಯಿತು, ಇದನ್ನು ಪುರಸ್ಕರಿಸದ ಸುಪ್ರೀಮ್ ವಜಾಗೊಳಿಸಿತ್ತು.

ಗ್ರಾಂಟ್ ಜಮಿನು ಮಾರುಕಟ್ಟೆ ಬೆಲೆಗೆ ಕೊಟ್ಟಿರುವುದು, ವರ್ಗಾವಣೆಗೆ ಹಾಕಿರುವ ಗ್ರಾಂಟ್ ಶರತ್ತು ಅನೂರ್ಜಿತ ಎಂದು ಖರೀದಿದಾರ ವಾದಿಸಲಾಗದು ಅಂತಹ ವಾದ ಗ್ರಾಂಟಿ ಮಾತ್ರ ಮಾಡಬೇಕು.[1] ಇದೇ ರೀತಿಯಲ್ಲಿ ಕರ್ನಾಟಕ ಹೈಕೋರ್ಟಿನ ಇನ್ನೊಂದು ದ್ವಿಸದಸ್ಯ ಪೀಠ ಅಭಿಪ್ರಾಯಿಸಿ ತೀರ್ಪಿತ್ತಿದೆ.[2] ಇದೇ ರೀತಿಯಲ್ಲಿ ಸುಪ್ರೀಮ್ ಕೋರ್ಟ್ ಮುಂದೆಯೂ ಎತ್ತಿಹಿಡಿಯಲಾಗಿದೆ.[3]

ಈ ಬಗ್ಗೆ ಕರ್ನಾಟಕ ಹೈಕೋರ್ಟಿನ ದ್ವಿಸದಸ್ಯ ಪೀಠ[4] ವಿವರಣೆಯನ್ನು ನೀಡುತ್ತ ಹೀಗೆಂದಿದೆ, "ಅನುದಾನದ ನಿಯಮಗಳನ್ನು ಪ್ರಶ್ನಿಸುವುದು ಗ್ರಾಂಟಿಯವರು ಮಾತ್ರ ಎಂದು ಗುಂಟಯ್ಯ ಕೇಸಿನಲ್ಲಿ ನಿಸ್ಸಂದೇಹವಾಗಿ ಸ್ಥಾಪಿಸಿದರೂ, ಮಾರುಕಟ್ಟೆಯ ಬೆಲೆಯಲ್ಲಿ ಪರಿಶಿಷ್ಟ ಜಾತಿ / ಪರಿಶಿಷ್ಟ ಪಂಗಡ ಸಮುದಾಯದ ಸದಸ್ಯರಿಗೆ ಭೂಮಿಯನ್ನು ಹಂಚಿದ್ದರೆ; ಅದು ಅವರಿಗೆ ತೋರಿದ ದಯೆ ಅಥವ ಪ್ರಯೋಜನ ಆಗುವುದಿಲ್ಲ; ಗ್ರಾಂಟೀ ಮುಕ್ತ ಮಾರುಕಟ್ಟೆಯಿಂದ ಭೂಮಿಯನ್ನು ಖರೀದಿಸಬಹುದಿತ್ತು; ಎಂಬುದು ನಮಗೆ ಸ್ಪಷ್ಟವಾಗಿ ತೋರುತ್ತದೆ. ನಮ್ಮ ಸಮಾಜದ ಸಾಮಾಜಿಕವಾಗಿ ಬಹಿಷ್ಕೃತ ಅಥವಾ ಅಂಚಿನಲ್ಲಿರುವ ವರ್ಗಗಳ ನೋವುಗಳನ್ನು ನಿವಾರಿಸಲು ಈ ಯೋಜನೆಯು ಪ್ರಯತ್ನಿಸುತ್ತಿರುವುದರಿಂದ ಚಾಲ್ತಿಯಲ್ಲಿರುವ ಬೆಲೆಗಿಂತ ಕಡಿಮೆ ಇರುವ ಪರಿಗಣನೆಗೆ ಅಥವಾ ಅತಿ ಹೆಚ್ಚಾಗಿ ಮತ್ತೆ ಮತ್ತೆ ಉಚಿತವಾಗಿ ಸಹ ಅನುದಾನವನ್ನು ನೀಡಲಾಗುತ್ತದೆ. ಆದ್ದರಿಂದ, "ಅಸಮಾಧಾನ" (ಅಪ್ಸೆಟ್) ಬೆಲೆಯನ್ನು ಮಾರುಕಟ್ಟೆ ಬೆಲೆಯೊಂದಿಗೆ ಸಮೀಕರಿಸುವಲ್ಲಿ ಇದು ವಿರೋಧಾಭಾಸವಾಗಿದೆ. ಪುಟ್ಟವೀರಯ್ಯ ಪ್ರಕರಣದಲ್ಲಿನ ವಿಭಾಗೀಯ ಪೀಠದ

---

[1] ಶ್ರೀನಿವಾಸ್ ವಿ. ಹರೀಶ್ – 2012 (1) ಕರ್.ಎಲ್.ಜೆ 670 (ಡಿ.ಬಿ)

[2] ಚಂದ್ರನಾಯ್ಕ್ ವಿ. ಕರ್ನಾಟಕ ರಾಜ್ಯ – ಐ.ಎಲ್.ಆರ್ 2012 ಕರ್ 320 (ಡಿ.ಬಿ)

[3] ಚಿಂದೇಗೌಡ ವಿ. ಪುಟ್ಟಮ್ಮ – 2008 (2) ಕರ್.ಎಲ್.ಜೆ 460 (ಎಸ್.ಸಿ)

[4] ಸಲಮ್ಮ ವಿ. ವಿಶೇಷ ಜಿಲ್ಲಾಧಿಕಾರಿಗಳು – ಮನು/ ಕೆ.ಎ/ 1117/ 2012 (ಡಿ.ಬಿ)

ತೀರ್ಪಾದ[1] "ಇನ್ನು ಮುಂದೆ ಪರಭಾರೆಯ ಕುರಿತಾದ ಶರತ್ತುಗಳನ್ನು ವಿಧಿಸಲಾಗದು" ಎಂಬುದನ್ನು, ಸಿದ್ದೇಗೌಡ ಪ್ರಕರಣದಲ್ಲಿ ಸುಪ್ರೀಂ ಕೋರ್ಟ್‌ನ ತೀರ್ಪುಗಳಲ್ಲಿ ಲಭ್ಯವಿರುವ ಕಾನೂನಿನ ನಿರೂಪಣೆಯನ್ನು ಆಧಾರವಾಗಿಸಿಕೊಂಡರೆ ಸಮರ್ಥಿಸಿಕೊಳ್ಳುವುದು ಸರಿಯಲ್ಲ, ..... ಹಾಲಿ ಪ್ರಕರಣದಲ್ಲಿ ಕೆಳನ್ಯಾಯಾಲಯ, ಭದ್ರಪ್ಪ ಪ್ರಕರಣಕ್ಕೆ[2] ವ್ಯತಿರಿಕ್ತವಾಗಿ, ರುಜುವಾತುಪಡಿಸುವ ಹೊಣೆಯು ಅನುದಾನ ಪಡೆದವರ ಮೇಲೆ ವರ್ಗಾಯಿಸಲಾಗಿದೆ ಎಂಬುದು ಸ್ಪಷ್ಟವಾಗಿದೆ. ಆ ಪ್ರಕರಣದಲ್ಲಿ ನ್ಯಾಯಮೂರ್ತಿಗಳು ಗುಂಟಯ್ಯ ಪ್ರಕರಣದಲ್ಲಿನ ಆಧಾರವಾಗಿ ಹೀಗೆಂದಿದ್ದಾರೆ ಪಿಟಿಸಿಎಲ್ ಕಾಯ್ದೆಯ ಸೆಕ್ಷನ್ 5 (೩) ರ ಪ್ರಕಾರ, ಮಂಜೂರು ಮಾಡಿದ ಭೂಮಿಯನ್ನು ಹೊಂದಿರುವ ವ್ಯಕ್ತಿಯ ಮೇಲೆ ಹೊರೆ ಇರುತ್ತದೆ. ಕಾನೂನಿನಲ್ಲಿ. ನಮ್ಮ ಮುಂದೆ ಇರುವ ಪ್ರಕರಣದಲ್ಲಿ ಈ ಹೊಣೆಯನ್ನು ಖರೀದಿದಾರರು ಬಿಡುಗಡೆ ಮಾಡಿಲ್ಲ. ಈ ಸಂದರ್ಭದಲ್ಲಿ ನಮ್ಮ ವಿಶ್ಲೇಷಣೆಯು ಈ ಕೆಳಗಿನ ಕಾನೂನಿನ ಪ್ರಸ್ತಾಪವನ್ನು ಬಹಿರಂಗಪಡಿಸುತ್ತದೆ: (ಎ) 'ಅಸಮಾಧಾನದ (ಅಪ್ಸೆಟ್) ಬೆಲೆಗೆ ಪರಿಶಿಷ್ಟ ಜಾತಿ / ಪರಿಶಿಷ್ಟ ಪಂಗಡಕ್ಕೆ ನೀಡಲಾದ ಜಮೀನುಗಳು ವಿರಳವಾಗಿ ಮತ್ತು ಅಸಾಧಾರಣವಾಗಿ ಪ್ರಕರಣಗಳು ಮಾರುಕಟ್ಟೆ ಬೆಲೆಗೆ ಅನುಗುಣವಾಗಿರುತ್ತವೆ. (ಬಿ) ಗ್ರಾಂಟಿ ಮಾತ್ರ ಯಾವುದೇ ಗ್ರಾಂಟ್ ಉಲ್ಲೇಕಗಳ ಕಾನೂನುಬದ್ಧತೆಯನ್ನು ಪ್ರಶ್ನಿಸಬಹುದು; ಖರೀದಿದಾರರಿಗೆ ಹಾಗೆ ಮಾಡಲು ಯಾವುದೇ ಸ್ಥಳವಿಲ್ಲ. (ಸಿ) ಸ್ವಾಧೀನಪಡಿಸಿಕೊಂಡಿರುವುದು ನ್ಯಾಯಸಮ್ಮತವೆಂದು ಸಾಬೀತುಪಡಿಸಲು ಮಂಜೂರು ಮಾಡಿದ ಭೂಮಿಯನ್ನು ಹೊಂದಿರುವ ವ್ಯಕ್ತಿಯ ಭುಜದ ಮೇಲೆ ಯಾವಾಗಲೂ ಪುರಾವೆಯ ಹೊರೆ ಇರುತ್ತದೆ.

**ಗ್ರಾಂಟ್ ಪತ್ರದ ಶರತ್ತಿಗಿಂತ ಅಂದಿನ ಕಾನೂನು ನಿಯಮ ಮುಖ್ಯ**

ಗ್ರಾಂಟ್ ಆಗಿರುವ ತಾರೀಖು ಮುಖ್ಯವಲ್ಲ ಸಾಗುವಳಿ ಪತ್ರ ನೀಡಿದ ತಾರೀಖು ಮುಖ್ಯವಾಗಿರುತ್ತದೆ ಎಂದು ಸದರಿ ಗ್ರಾಂಟ್ ನಿಬಂದನೆ ಉಲ್ಲಂಘನೆ

---

[1] ಪುಟ್ಟವೀರಯ್ಯ ವಿ. ಕರ್ನಾಟಕ ರಾಜ್ಯ – 1996 (೩) ಕರ್.ಎಲ್.ಜೆ ೩4 (ಡಿ.ಬಿ)

[2] ಭದ್ರಪ್ಪ ವಿ. ತೊಳಚನಾಯಕ – 2008 (2) ಎಸ್.ಸಿ.ಸಿ 104

ಆಗಿದೆಯೇ ಇಲ್ಲವೆ ಎಂದು ಪರಿಶೀಲಿಸಲು ಮುಖ್ಯವಾಗಿರುತ್ತದೆ ಎಂದು 1990 ರಲ್ಲಿ ಯೇ ಜಸ್ಟೀಸ್ ರಾಮಾಜೋಯಿಸ್ ಮತ್ತು ಜಸ್ಟೀಸ್ ಮಿರ್ದಾ ರವರ ದ್ವಿಸದಸ್ಯತ್ವ ಪೀಠ ತೀರ್ಪು ನೀಡಿದೆ. ಕಾಯ್ದೆಯ ಕಲಂ 11 ಲ್ಲಿ ಹೇಳಿರುವಂತೆ ಬೇರೆ ಜಾರಿಯಲ್ಲಿರುವ ಕಾನೂನು, ಸಿವಿಲ್ ಕೋರ್ಟ್ ತೀರ್ಪು, ಕರಾರು, ನಡವಳಿಕೆ, ಸಂಸ್ಕಾರ ಮತ್ತು ಇತರೆ ಟ್ರೈಭ್ಯೂನಲ್ ಮತ್ತು ಪ್ರಾಧಿಕಾರದ ತೀರ್ಪುಗಳು ಏನೇ ಇದ್ದರೂ ಪಿ.ಟಿ.ಸಿ.ಎಲ್ ಕಾಯ್ದೆಯು ಅವುಗಳೆಲ್ಲವನ್ನೂ ಮೀರಿ ಅನ್ವಯವಾಗುತ್ತದೆ. ಇದನ್ನು ಮಾನ್ಯ ಕರ್ನಾಟಕ ಉಚ್ಚ ನ್ಯಾಯಾಲಯ ಸದರಿ ಕಾಯ್ದೆಯ ಸಾರ್ವಭೌಮತೆಯನ್ನು ಒಪ್ಪಿದೆ. ಸದರಿ ಕಾಯ್ದೆಯ ಸಂವಿದಾನ ಬದ್ದತೆಯನ್ನೂ ಎತ್ತಿ ಹಿಡಿಯಲಾಗಿದೆ. ಹೀಗೆ ಕಾರ್ಯಾಂಗ ನಿದ್ದೆ ಹೋದರೂ ನ್ಯಾಯಾಂಗ ಈ ಕಾನೂನು ಜಾರಿಯಲ್ಲಿ ಮುಂಚೂಣಿಯಲ್ಲಿದೆ.

ಗ್ರಾಂಟ್ ಪ್ರಮಾಣಪತ್ರಗಳಲ್ಲಿ ಉಲ್ಲೇಕಿತ ಶರತ್ತು ಅನ್ವಯಿಸುತ್ತದೋ ಅಥವ ಅಂದಿನ ಗ್ರಾಂಟ್ ನಿಯಮ ಅನ್ವಯಿಸುತ್ತದೋ, ಪಿ.ಟಿ.ಸಿ.ಎಲ್ ಕಾಯ್ದೆ ಜಾರಿ ಮಾಡಲು, ಎಂಬ ಪ್ರಶ್ನೆಗೆ ಹಲವಾರು ವ್ಯಾಖ್ಯಾನ ಮತ್ತು ಪ್ರತಿಪಾದನೆ ಇದೆ, ಈ ಬಗ್ಗೆ ಗೌರ್ಮೆಂಟ್ ಗ್ರಾಂಟ್ ಆಕ್ಟ್ 1895, ಕಲಂ 3 ರಲ್ಲಿ ಹೇಳಿರುವಂತೆ ಸರ್ಕಾರಿ ಗ್ರಾಂಟ್ ಗಳಿಗೆ ಸ್ವತ್ತು ವರ್ಗಾವಣೆ ಕಾಯ್ದೆ ಅನ್ವಯಿಸುವುದಿಲ್ಲ, ಸ್ವತ್ತು ವರ್ಗಾವಣೆ ಕಾಯ್ದೆ ಅಡಿಯಲ್ಲಿ ಶಾಶ್ವತ ನಿರ್ಬಂದವನ್ನು ವರ್ಗಾವಣೆಯಲ್ಲಿ ಮಾಡುವ ಹಾಗಿಲ್ಲ ಎಂಬ ತತ್ವ ಸರ್ಕಾರಿ ಗ್ರಾಂಟ್ ಗಳಿಗೆ ಅನ್ವಯಿಸದು. ಅದರಂತೆ ಸದರಿ ಕಾಯ್ದೆ ಅನ್ವಯ ಯಾವುದೇ ಕಾನೂನು ಮೀರಿ ಗ್ರಾಂಟ್ ಪತ್ರದಲ್ಲಿ ವಿಧಿಸಿರುವ ಶರತ್ತು ಅನ್ವಯವಾಗುತ್ತದೆ ಎಂದು ಕಾನೂನು ಹೇಳುತ್ತದೆ, ಆದರೆ ಈ ಬಗ್ಗೆ ಪಿ.ಟಿ.ಸಿಎಲ್ ಕಾನೂನು ಬಗ್ಗೆ ವ್ಯಾಖ್ಯಾನಿಸಿರುವ ಕರ್ನಾಟಕ ಹೈಕೋರ್ಟ್[1] ಗ್ರಾಂಟ್ ಪತ್ರದ ಶರತ್ತಿಗಿಂತ ಅಂದಿನ ಕಾನೂನು ನಿಯಮ ಮುಖ್ಯ ಅನ್ನುತ್ತದೆ. "1958-59 ರಂತೆ ಅಸ್ತಿತ್ವದಲ್ಲಿದ್ದ ಅಂತಹ ಜಮೀನುಗಳ ಅನುದಾನವನ್ನು ನಿಯಂತ್ರಿಸುವ ನಿಯಮಗಳು ಉಚಿತ ಗ್ರಾಂಟ್ ಆಗಿದ್ದಲ್ಲಿ 15 ವರ್ಷಗಳ ಅವಧಿಗೆ ಪರಭಾರೆ

---

[1] ಜಯರಾಮ್ ವಿ. ಕರ್ನಾಟಕ ರಾಜ್ಯ – ಐ.ಎಲ್.ಆರ್ 1989 ಕರ್ 2277

ಮೇಲೆ ನಿರ್ಬಂಧವನ್ನು ಒದಗಿಸಿವೆ ಎಂದು ವಿವಾದಾಸ್ಪದವಾಗಿಲ್ಲ. ಅಪ್ಸೆಟ್ (ನಿರಾಸೆಯ) ಬೆಲೆಯಲ್ಲಿ ಗ್ರಾಂಟ್ ಆಗಿದ್ದರೆ. 10 ವರ್ಷ ಪರಭಾರೆ ಮಾಡಬಾರದು ಎಂದಿದೆ. ಅರ್ಜಿದಾರರ ಕಡೆಯಿಂದ ಕಾನೂನಿನ ಅಜ್ಞಾನವಿದ್ದರೆ, ಪರಭಾರೆಯ ನಿರ್ಬಂಧಕ್ಕೆ ಒಳಪಟ್ಟಿರುವ ಜಮೀನುಗಳ ಖರೀದಿಗೆ ಅಪಾಯವಿದೆ, ಹಾಗೆಯೇ ನಿರ್ಬಂಧಿತ ಶರತ್ತನ್ನು ಸೇರಿಸದೆ ಅನುದಾನ ಪ್ರಮಾಣಪತ್ರಗಳನ್ನು ನೀಡಿದ ತಹಶೀಲ್ದಾರ್ ಅವರ ಕಡೆಯಿಂದ ಕಾನೂನಿನ ಅಜ್ಞಾನವಿತ್ತು. ಪರಭಾರೆ ಮೇಲೆ ನಿರ್ಬಂಧ ಹೇರಲು ಉದ್ದೇಶಿಸಲಾದ ಮುದ್ರಿತ ಅಂಕಣವನ್ನು ತಹಶೀಲ್ದಾರ್ ಹೊಡೆದಿದ್ದಾರೆ ಮತ್ತು ಇದರ ಪರಿಣಾಮಗಳ ಅರಿವಿಲ್ಲದೆ ಅದನ್ನು ತಿಳಿಯದೆ ಅಥವಾ ಅರಿವಿಲ್ಲದೆ ಮಾಡಲಾಯಿತು ಎಂದು ಹೇಳಲಾಗುವುದಿಲ್ಲ. ಈ ನ್ಯಾಯಾಲಯವು ಕಂಡುಕೊಂಡಿದ್ದೇನೆಂದರೆ, ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡದ ಸದಸ್ಯರಿಗೆ ಹಲವಾರು ಅನುದಾನದ ಭೂಮಿಯನ್ನು ನೀಡಲಾಗಿದೆ, ಇದರಲ್ಲಿ ಅನುದಾನಿತ ಪ್ರಮಾಣಪತ್ರಗಳನ್ನು ನಿರ್ದಿಷ್ಟ ಅವಧಿಗೆ ಭೂಮಿಯನ್ನು ಪರಭಾರೆ ಮೇಲೆ ನಿರ್ಬಂಧವನ್ನು ಒಳಗೊಂಡಂತೆ ಅನುದಾನಿತ ಪ್ರಮಾಣಪತ್ರಗಳನ್ನು ನೀಡಲಾಗುತ್ತದೆ, ಇದರಲ್ಲಿ ಜಾರಿಯಲ್ಲಿದ್ದ ನಿಯಮಗಳಲ್ಲಿ ನಿರ್ದಿಷ್ಟಪಡಿಸಿದ ಅವಧಿಯೊಂದಿಗೆ ಒಟ್ಟು ವ್ಯತ್ಯಾಸದಲ್ಲಿದೆ. ಆದರೆ ಹಾಲಿ ಕೇಸುಗಳಲ್ಲಿ, ಇತರರ ಬಗ್ಗೆ ಪ್ರತಿಕ್ರಿಯೆ ತೋರದ ಕಠೋರತೆ ಮತ್ತು ನಿರ್ಲಕ್ಷ್ಯವು ವಿಪರೀತ ರೀತಿಯದ್ದಾಗಿದೆ. ತಹಶೀಲ್ದಾರ್ ಅವರು ನಿಯಮಗಳ ಬಗ್ಗೆ ಕಣ್ಣು ಮುಚ್ಚಿದಂತೆ ತೋರುತ್ತಿದೆ ಮತ್ತು ಅನುದಾನ ಪಡೆದವರಿಗೆ ತನಗೆ ತಿಳಿದಿರುವ ಕಾರಣಗಳಿಗಾಗಿ ಮಂಜೂರು ಮಾಡಿದ ಭೂಮಿಯನ್ನು ಪರಭಾರೆಯ ನಿಷೇಧದಿಂದ ವಿನಾಯಿತಿ ನೀಡಿದ್ದಾರೆ. ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡದ ಸದಸ್ಯರಿಗೆ ನೀಡಲಾದ ಅನುದಾನವು ಖರೀದಿದಾರನನ್ನು ಮೊಕದ್ದಮೆಯ ಕ್ಷೇತ್ರದ ಗಣಿಗೆ ಇಳಿಸಿದೆ ಮತ್ತು ಅಳಿಸಲಾಗದ ಗಾಯ, ನಷ್ಟ, ಹಾನಿ ಮತ್ತು ವಿನಾಶದ ಸಾಮರ್ಥ್ಯದೊಂದಿಗೆ ಗುಪ್ತ ಅಪಾಯದೊಂದಿಗೆ ಸುಪ್ತವಾಗಿದೆ. ಪರೋಪಕಾರಿ ಕಾಯ್ದೆಯ ನಿರ್ವಹಣೆಯ ಜವಾಬ್ದಾರಿಯನ್ನು ಹೊರಿಸಿರುವ ಅಧಿಕಾರಿಗಳ ನಡವಳಿಕೆಯನ್ನು ಕಾಯ್ದೆಯ ಹಿಂದಿರುವ ಸಿದ್ಧಾಂತ ಮತ್ತು ತತ್ತ್ವಶಾಸ್ತ್ರದ

ಹಿನ್ನಲೆಯಲ್ಲಿ ಪರೀಕ್ಷಿಸುವುದನ್ನು ಸಮರ್ಥಿಸುತ್ತದೆ. ಈ ಕಾಯ್ದೆ ಇತಿಹಾಸವನ್ನು ಪ್ರಾಚೀನತೆಯ ಮಂಜಿನಲ್ಲಿ ಮರೆಮಾಡಲಾಗಿಲ್ಲ. ಭಾರತದ ಸಂವಿಧಾನಕ್ಕೆ ಸಮಾನವಾದ ಪರೋಪಕಾರಿ ಶಾಸನಗಳಂತೆ ಮೂಲವನ್ನು ಕಂಡುಹಿಡಿಯಬಹುದು, ಇದು ದೃಢೀಕರಣ ಕ್ರಮ ಎಂದು ಪರಿಚಿತವಾಗಿರುವ ರಾಷ್ಟ್ರೀಯ ಬದ್ಧತೆಯ ನೀತಿಯನ್ನು ಪ್ರತಿಪಾದಿಸುತ್ತದೆ, ಇದು ದೇಶದ ದುರ್ಬಲ ವರ್ಗಗಳ ಜನರ ಪರಿಸ್ಥಿತಿಗಳ ಸುಧಾರಣೆಯನ್ನು ಗುರಿಯಾಗಿರಿಸಿಕೊಳ್ಳುತ್ತದೆ. ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡವನ್ನು ಸಂವಿಧಾನಾತ್ಮಕವಾಗಿ ದುರ್ಬಲ ವರ್ಗವೆಂದು ಗುರುತಿಸಲಾಗಿದೆ ಮತ್ತು ಈ ಕಾಯ್ದೆಗಳ ಪ್ರಯೋಜನಗಳು ಅವರಿಗೆ ಉದ್ದೇಶಿಸಲಾಗಿದೆ." ಇನ್ನೊಂದು ವ್ಯಾಖ್ಯಾನದ ಪ್ರಕಾರ, ಸದರಿ ಸರ್ಕಾರಿ ಗ್ರಾಂಟ್ ಕಾಯ್ದೆ 1895, ಅದರ ಹಿಂದಿನ ಕಾಯ್ದೆಯಾದ ಸ್ವತ್ತು ವರ್ಗಾವಣೆ ಕಾಯ್ದೆ 1888 ಅನ್ವಯಿಸದು ಎಂದು ಹೇಳಿದ್ದಾಗಿದೆ, ಕಲಂ 11 ಪಿ.ಟಿ.ಸಿ.ಎಲ್ ಕಾಯ್ದೆ ಅನ್ವಯಿಸುವುದಕ್ಕೆ ಯಾವುದೇ ಕಾನೂನು ಅಡ್ಡಿ ಬರುದು ಎಂದಿದೆ.[1] ಆದುದರಿಂದ ಪಿ.ಟಿ.ಸಿ.ಎಲ್ ಪ್ರಕರಣಗಳಲ್ಲಿ, ಗ್ರಾಂಟ್ ಪತ್ರದಲ್ಲಿ ಏನೇ ಇದ್ದರೂ, ಗ್ರಾಂಟ್ ಆದ ತಾರೀಖಿನ ನಿಯಮಗಳು ಅನ್ವಯಿಸುತ್ತವೆ. 01-01-1979 ರ ನಂತರ ಆಗಿರುವ ಕ್ರಯಗಳಿಗೆ ಸರ್ಕಾರಿ ಅನುಮತಿ ಪಡೆದು ಕ್ರಯ ಮಾಡಲಾಗಿದೆಯೇ ಅನ್ನುವುದೇ ಮುಖ್ಯವಾಗುತ್ತದೆ. 01-01-1979 ಕ್ಕೆ ಮುಂಚೆ ಆದ ಕ್ರಯಗಳು ಗ್ರಾಂಟ್ ಶರತ್ತು ಉಲ್ಲಂಘಿಸಲಾಗಿದೆಯೇ ಅನ್ನುವುದು ಮುಖ್ಯವಾಗುತ್ತದೆ. ಗ್ರಾಂಟ್ ಶರತ್ತು ನಿರ್ದರಿಸಲು ಈ ಹಿಂದೆ ಮೈಸೂರು ಭೂ ಕಂದಾಯ ಕೋಡ್ 1888 ರಲ್ಲಿ ಹೇಗೆ ನಿಯಮಗಳು ಜಾರಿಗೊಳಿಸಲಾಗಿತ್ತು ಎಂಬುವ ಚರಿತ್ರೆ ಮುಖ್ಯವಾಗುತ್ತದೆ.

---

[1] ಪಿ.ಟಿ.ಸಿ.ಎಲ್ ಕಾಯ್ದೆಯ ಕಲಂ 11 ಹೀಗಿದೆ, "ಆ ಕ್ಷಣದಲ್ಲಿ ಜಾರಿಯಲ್ಲಿರುವ ಯಾವುದೇ ಕಾನೂನಿಗೆ ಅಥವ ಪದ್ಧತಿಗೆ, ಬಳಕೆಗೆ ಅಥವ ಕರಾರಿಗೆ ಅಥವ ಯಾವುದೇ ನ್ಯಾಯಾಲಯದ, ನ್ಯಾಯಮಂಡಳಿ ಅಥವ ಇನ್ನಿತರೆ ಪ್ರಾಧಿಕಾರದ ಡಿಕ್ರಿ ಅಥವ ಆದೇಶಕ್ಕೆ ವ್ಯತಿರಿಕ್ತವಾಗಿದ್ದರೂ ಕೂಡ, ಈ ಕಾಯ್ದೆಯ ನಿಬಂಧನೆಗಳು ಪರಿಣಾಮ ಬೀರುತ್ತದೆ."

**ಕಲಂ 5 ರಲ್ಲಿ ಕಾಯ್ದೆ ಉಲ್ಲಂಘನೆಯ ಊಹೆಯ ಬಗ್ಗೆ**

ಅನುದಾನವು ಸಂಪೂರ್ಣ ಮಾರುಕಟ್ಟೆ ಮೌಲ್ಯಕ್ಕಾಗಿ ಎಂದು ಹೇಳಲು ಅನುದಾನವು ಉಚಿತ ಅನುದಾನವಲ್ಲ ಎಂದು ಖರೀದಿದಾರ ಆರೋಪಿಸದಿದ್ದರೆ, ಅನುದಾನ ಪಡೆದವರು ಪರಿಶಿಷ್ಟ ಜಾತಿ ಸಮುದಾಯಕ್ಕೆ ಸೇರಿದವರಲ್ಲ ಎಂದು ಅವರು ಆರೋಪಿಸದಿದ್ದರೆ ಅಥವಾ ಗ್ರಾಂಟಿ ಅವರು ಪರಿಶಿಷ್ಟ ಜಾತಿ ಸಮುದಾಯಕ್ಕೆ ಸೇರಿದವರು ಎಂಬ ಆರೋಪವನ್ನು ನಿರಾಕರಿಸದಿದ್ದರೆ. ಅಥವಾ ಪರಭಾರೆ ವಿರುದ್ಧ ವಿರುವ ಅವಧಿ ಮುಗಿದ ನಂತರ ತನ್ನ ಪರವಾಗಿ ವರ್ಗಾವಣೆ ಮಾಡಲಾಗಿದೆ ಎಂದು ಖರೀದಿದಾರ ಪ್ರತಿಪಾದಿಸದಿದ್ದರೆ ಅಥವಾ ವರ್ಗಾವಣೆಯ ವಿಷಯಗಳಲ್ಲಿ ಸೆಕ್ಷನ್ 4 (2) ರ ಅಡಿಯಲ್ಲಿ ಅಗತ್ಯವಿರುವ ಸರ್ಕಾರದ ಅಗತ್ಯ ಅನುಮತಿಯನ್ನು ತಾನು ಪಡೆದುಕೊಂಡಿದ್ದೇನೆ ಎಂದು ಖರೀದಿದಾರ ಪ್ರತಿಪಾದಿಸದಿದ್ದರೆ. ನಂತರ ಕಾಯ್ದೆಯ ಜಾರಿಗೆ, ಕಾಯ್ದೆಯ ಸೆಕ್ಷನ್ 5(3) ರ ಅಡಿಯಲ್ಲಿ ಊಹೆಯು ಕಾರ್ಯನಿರ್ವಹಿಸುವುದು .... ಮನವಿ ಮಾಡಲ್ಪಟ್ಟ ವಿಭಿನ್ನ ಪ್ರಕರಣವಾಗಿದ್ದಲ್ಲಿ ಅಧಿಕಾರಿಗಳು ಅಂತಹ ತಕರಾರಿನ ಮೇಲೆ ಕಂಡುಹಿಡಿಯುವಿಕೆಯನ್ನು ದಾಖಲಿಸುವ ಅಗತ್ಯವಿರುತ್ತದೆ.[1]

ಮಂಜೂರು ಮಾಡಿದ ಭೂಮಿಯನ್ನು ವರ್ಗಾವಣೆ ಮಾಡುವ ಸಲಕರಣೆಯ ಅನುಪಸ್ಥಿತಿಯಲ್ಲಿಯೂ ಸಹ, ಮಂಜೂರು ಮಾಡಿದ ಭೂಮಿಯನ್ನು ಹೊಂದಿರುವ ವ್ಯಕ್ತಿಯು ಪತ್ತೆಯಾದಲ್ಲಿ, ಅಂತಹ ವ್ಯಕ್ತಿಯು ಅನುದಾನ ಷರತ್ತುಗೆ ವಿರುದ್ಧವಾಗಿ ಭೂಮಿಯನ್ನು ಸ್ವಾಧೀನಪಡಿಸಿಕೊಂಡಿದ್ದಾನೆ ಎಂದು ಭಾವಿಸಬೇಕು. ಆದ್ದರಿಂದ, ಅಂತಹ ಸ್ವಾಧೀನವನ್ನು ರಕ್ಷಿಸಲು ಸಾಧ್ಯವಿಲ್ಲ.[2]

ಮಂಜೂರು ಭೂಮಿಗೆ ಸಂಬಂಧಿಸಿದಂತೆ ಮಾರುಕಟ್ಟೆ ಬೆಲೆಯನ್ನು ಪಾವತಿಸಲಾಗಿದೆ ಎಂದು ಊಹೆಗಳು / ಪರಿಭಾವನೆಗಳು ಮತ್ತು ಅಂದಾಜುಗಳ ಮೂಲಕ ತೀರ್ಮಾನಿಸಲು ನ್ಯಾಯಾಲಯಕ್ಕೆ ಮುಕ್ತವಾಗಿಲ್ಲ.

---

[1] ಮೂಡ್ಲಪ್ಪ ವಿ. ಕರ್ನಾಟಕ ರಾಜ್ಯ – ಐ.ಎಲ್.ಆರ್ 1998 ಕರ್ 1145

[2] ವೀರಸ್ವಾಮಿ ವಿ. ವಿಶೇಷಜಿಲ್ಲಾಧಿಕಾರಿಗಳು – ಐ.ಎಲ್.ಆರ್ 1990 ಕರ್ 1739

ಕರ್ನಾಟಕ ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡದ ಸೆಕ್ಷನ್ 5 (3) (ಕೆಲವು ಜಮೀನುಗಳ ವರ್ಗಾವಣೆ ನಿಷೇಧ) ಕಾಯ್ದೆ, 1978 ಯಾವುದೇ ಅನುದಾನಿತ ಜಮೀನು ಸ್ವಾಧೀನವು ಮೂಲ ಅನುದಾನದಾರ ಅಥವಾ ಅವನ ಕಾನೂನು ಉತ್ತರಾಧಿಕಾರಿಯನ್ನು ಹೊರತುಪಡಿಸಿ, ಬೇರೆ ವ್ಯಕ್ತಿಯ ಬಳಿ ಇದ್ದಲ್ಲಿ, ಇದಕ್ಕೆ ವಿರುದ್ಧವಾಗಿ ಸಾಬೀತಾಗುವವರೆಗೂ, ಅಂತಹ ವ್ಯಕ್ತಿಯು ವರ್ಗಾವಣೆಯ ಮೂಲಕ ಕಾಯಿದೆಯ ಸೆಕ್ಷನ್ 4(1) ರ ನಿಬಂಧನೆಗಳ ಅಡಿಯಲ್ಲಿ ಶೂನ್ಯ ಮತ್ತು ಅನೂರ್ಜಿತತೆಯಲ್ಲಿ ಭೂಮಿಯನ್ನು ಸ್ವಾಧೀನಪಡಿಸಿಕೊಂಡಿದ್ದಾನೆಂದು ಭಾವಿಸಬೇಕು."[1]

**ಖರೀದಿದಾರ ಪರಿಶಿಷ್ಟನಾಗಿದ್ದರೂ ಕಾಯ್ದೆ ಅನ್ವಯ**

ಖರೀದಿದಾರ ಪರಿಶಿಷ್ಟ ಜಾತಿಗೆ ಸೇರಿದ್ದಾರೆ, ಗ್ರಾಂಟಿ ಕೂಡ ಅದೇ ಜಾತಿಗೆ ಸೇರಿದ್ದಾರೆ ಎಂಬ ಪ್ರಕರಣದಲ್ಲೂ ಈ ಕಾಯ್ದೆ ಅನ್ವಯಿಸಿ ಜಾರಿ ಮಾಡಲಾಗಿದೆ.[2]

ಈ ರೀತ್ಯ ಕಾನೂನು ಹಳೇ ಮದ್ರಾಸ್ ಪ್ರಾಂತ್ಯದಲ್ಲಿ ಇತ್ತು, ಈ ಬಗ್ಗೆ ಹೈಕೋರ್ಟ್ ತೀರ್ಪಿನಲ್ಲಿ ಚರ್ಚೆಯಾಗಿದೆ.[3] "ಆದರೆ, ಹಿಂದಿನ ಮದ್ರಾಸ್ ರಾಜ್ಯದ ಆ ಭಾಗದಲ್ಲಿ ಮಂಜೂರಾದ ಜಮೀನುಗಳಲ್ಲಿ ಅಂತಹ ನಿಯಮವು ಅಸ್ತಿತ್ವದಲ್ಲಿತ್ತು, ಇದು ರಾಜ್ಯಗಳ ಮರುಸಂಘಟನೆಯ ಮೇಲೆ ಕರ್ನಾಟಕ ರಾಜ್ಯದ ಭೂಪ್ರದೇಶದಲ್ಲಿ ಸಂಯೋಜನೆಗೊಂಡಿತು. ಮದ್ರಾಸ್ ಬೋರ್ಡ್ ಆಫ್ ರೆವಿನ್ಯೂ ಆಕ್ಟ್, 1894 ರ ಅಡಿಯಲ್ಲಿ ಸ್ಥಾಪಿಸಲಾದ "ಮದ್ರಾಸ್ ಬೋರ್ಡ್ ಆಫ್ ರೆವಿನ್ಯೂನ ಸ್ಟ್ಯಾಂಡಿಂಗ್ ಆರ್ಡರ್ಸ್" (ಸಂಕ್ಷಿಪ್ತವಾಗಿ 'ಎಂಬಿಎಸ್‌ಒ') ನ ಆದೇಶ 41 (4) ರ ಉಪ-ಷರತ್ತು (ಐ) ಯಲ್ಲಿದೆ ಎಂದು ನಾವು ಕಂಡುಕೊಂಡಿದ್ದೇವೆ. ......... ನಿಬಂಧನೆಗಳ ಸಂಯೋಜಿತ ಓದುವಿಕೆ ಈ ಕಾನೂನು ಸ್ಥಾನವನ್ನು ಮುಂಚೂಣಿಗೆ ತರುತ್ತದೆ, ಇದು ನಿಯಮ 29-ಎ (ಕರ್ನಾಟಕ ಲ್ಯಾಂಡ್ ಗ್ರಾಂಟ್ ನಿಯಮ 1969) ಹಿಂದಿನ ಮದ್ರಾಸ್

---

[1] ಸತ್ಯನಾರಾಯಣ ವಿ. ಕರ್ನಾಟಕ ರಾಜ್ಯ - ಮನು/ ಕೆ.ಎ/ 0224/ 2012 (ಡಿ.ಬಿ)

[2] ನಾಗರಾಜ್ ವಿ. ಕರ್ನಾಟಕ ರಾಜ್ಯ - 2014 (3) ಕರ್.ಎಲ್.ಜೆ 587

[3] ಕೇಶವಪ್ಪ ವಿ. ಉಪವಿಭಾಗಾಧಿಕಾರಿ ಚಿತ್ರದುರ್ಗ - 1998 (6) ಕರ್.ಎಲ್.ಜೆ 526

ರಾಜ್ಯದ ಭಾಗವಾಗಿದ್ದ[1] ಕರ್ನಾಟಕ ರಾಜ್ಯದ ಪ್ರದೇಶದ ನಿರ್ದಿಷ್ಟ ಭಾಗದೊಳಗೆ ಇರುವ ಮಂಜೂರು ಭೂಮಿಗೆ ಮಾತ್ರ ಸಂಬಂಧಿಸಿದೆ. ರಾಜ್ಯಗಳ ಮರುಸಂಘಟನೆ ಕಾಯ್ದೆ, 1956 ರ ಅಡಿಯಲ್ಲಿ ರಾಜ್ಯಗಳ ಮರುಸಂಘಟನೆಯ ಮೇಲೆ ಕರ್ನಾಟಕದ ಭೂಪ್ರದೇಶದಲ್ಲಿ ಸೇರ್ಪಡೆಗೊಂಡಿತ್ತು. ನಿಯಮ 29–ಎ ಮತ್ತಷ್ಟು ಸ್ಪಷ್ಟಪಡಿಸುವುದೇನೆಂದರೆ, ಎಂಆಎಸ್ಓ ಆದೇಶ 41 (4) (ಐ), ಇದರ ಮೂಲಕ ಮಂಜೂರು ಮಾಡಿದ ಭೂಮಿಯನ್ನು ನೀಡುವವರು ಪರಭಾರೆ ಅವಧಿ ಮುಗಿದ ನಂತರ ಪರಿಶಿಷ್ಟ ಜಾತಿ ಅಥವಾ ಪರಿಶಿಷ್ಟ ಪಂಗಡಕ್ಕೆ ಸೇರಿದ ವ್ಯಕ್ತಿಯ ಪರವಾಗಿ ಭೂಮಿಯನ್ನು ವರ್ಗಾವಣೆ ಮಾಡಲು ಕರ್ನಾಟಕ ರಾಜ್ಯದ ನಿರ್ದಿಷ್ಟ ಭಾಗದಲ್ಲಿ ಮಾತ್ರ ಅನುಮತಿಸಲಾಗಿತ್ತು, ಇದನ್ನು 17–10–1974 ರಿಂದ ಜಾರಿಗೆ ಬರುವಂತೆ ರದ್ದುಪಡಿಸಲಾಗುತ್ತದೆ.

**ಹಿಂದೆ ಗ್ರಾಂಟಿ ಅರ್ಜಿ ವಜಾ ಆಗಿದ್ದರೆ ವಾರಸ್ಸು ಮತ್ತೆ ?**

ಪ್ರಕರಣವೊಂದರಲ್ಲಿ ಗ್ರಾಂಟಿ ಅರ್ಜಿ ಹಾಕಿ 1985 ರಲ್ಲೇ ಕಾಯ್ದೆ ಅನ್ವಯಿಸದು ಎಂದು ವಜಾ ಆಗಿರುತ್ತದೆ. ಅದನ್ನು ಮರೆಮಾಚಿ ಗ್ರಾಂಟಿ ವಾರಸ್ಸುದಾರ ಮತ್ತೆ ಅರ್ಜಿ ಸಲ್ಲಿಸಿ ಎ.ಸಿ ಕೋರ್ಟ್ ಗೆ ಹೋಗುತ್ತಾರೆ, ಹಿಂದೆ ಆದ ಪ್ರಕರಣದ ಬಗ್ಗೆ ಪ್ರತಿವಾದಿ ಕೋರ್ಟ್ ಗಮನ ಸೆಳೆಯುತ್ತಾರೆ, ಇಂತಹ ಅರ್ಜಿದಾರರ ನಡವಳಿಕೆಯನ್ನು ಗಮನಿಸಿದ ಹೈಕೋರ್ಟ್ ಈ ಹಿಂದೆ ಹಲವು ಪ್ರಕರಣಗಳಲ್ಲಿ ಇಂತಹ ಸ್ಥಿತಿಯಲ್ಲಿ ಅರ್ಜಿ ಹಾಕಲು ಹಕ್ಕು ಇಲ್ಲದಿರುವ ಬಗ್ಗೆ ತೀರ್ಪು ನೀಡಿದೆ.[2] ಇದೇ ರೀತಿಯಲ್ಲಿ ಇನ್ನೊಂದು ಪ್ರಕರಣದಲ್ಲಿ "ಹಿಂದೆ ಆದ ಪ್ರಕರಣಗಳಲ್ಲಿ ಸರಿಯಾಗಿ ಕಂಡುಕೊಳ್ಳಲಾಗಿರುವುದಿಲ್ಲ ಎಂದು ಮತ್ತೆ ಮತ್ತೆ ಅದನ್ನು ತೆರೆಯಲು ಅವಕಾಶ ಕೊಟ್ಟರೆ ವಿವಾದಗಳಿಗೆ ಕೊನೆಯೇ ಇಲ್ಲವಾಗುತ್ತದೆ, ಹಾಗಾಗಿ ಹಿಂದೆ ಆದ ತೀರ್ಪುಗಳನ್ನು ಹೊಸ ಅರ್ಜಿ ಸಲ್ಲಿಸುವ ಮುಖೇನ ಮರು ಸ್ಥಾಪಿಸಲಾಗದು" ಎಂದಿದೆ.[3]

---

[1] ಈ ಹಿಂದಿನ ದಕ್ಷಿಣ ಕನ್ನಡ, ಬೆಳ್ಳಾರಿ, ಉಡುಪಿ ಜಿಲ್ಲೆಗಳು

[2] ಶ್ರೀನಿವಾಸ್ ವಿ. ಕರ್ನಾಟಕ ರಾಜ್ಯ – ಮನು/ ಕೆ.ಎ/ 0693/ 2014

[3] ಮರಿಯಪ್ಪ ವಿ. ಕರ್ನಾಟಕ ರಾಜ್ಯ – 2014 (4) ಕೆ.ಸಿ.ಸಿ.ಆರ್ 3914

**ಕಾಲಮಿತಿ ಕಾಯ್ದೆ 1963 ಇಲ್ಲಿ ಅನ್ವಯಿಸದು**

ಮಿತಿ ಕಾಯ್ದೆ 1963 ಸಿವಿಲ್ ಕೋರ್ಟ್ ದಾವೆಗಳಿಗೆ ಮಾತ್ರ ಅನ್ವಯಿಸುತ್ತದೆ. ಪಿ.ಟಿ.ಸಿ.ಎಲ್ ಕಾಯ್ದೆ ಗೆ ಅನ್ವಯಿಸದು ಎನ್ನುತ್ತದೆ ಕರ್ನಾಟಕ ಹೈಕೋರ್ಟ್.[1]

**ಪರಭಾರೆಗೆ ಸರ್ಕಾರಿ ಅನುಮತಿ ವಿಚಾರದ ಬಗ್ಗೆ**

ಪರಿಶಿಷ್ಟ ಜಾತಿ ಅಥವ ಪರಿಶಿಷ್ಟ ವರ್ಗಕ್ಕೆ ಸೇರಿದ ಗ್ರಾಂಟ್ ಜಮೀನು, 01–01–1979 ರ ನಂತರ ಮೊದಲ ಭಾರಿ ಪರಭಾರೆಗೆ ಸರ್ಕಾರಿ ಅನುಮತಿ ಪಡೆಯಬೇಕು ಎಂಬುದು ಪಿ.ಟಿ.ಸಿ.ಎಲ್ ಕಾಯ್ದೆ ಕಲಂ 4(2) ರಲ್ಲಿನ ಕಾನೂನು, ಇದಕ್ಕೆ ಸರ್ಕಾರ 2012 ರಲ್ಲಿ ಆದೇಶವನ್ನು ನೀಡಿ ಬೇರೆ ಜಮೀನು ಖರೀದಿಸಿರುವ ಬಗ್ಗೆ ಕ್ರಯ ಪತ್ರ ಹಾಜರು ಮಾಡಿದ ನಂತರ ಅನುಮತಿ ನೀಡಬೇಕು ಎಂಬ ಬಗ್ಗೆ ಹೈಕೋರ್ಟ್ ಪರಿಶೀಲಿಸಿ, ಆತನಿಗೆ ಕೊಂಡುಕೊಳ್ಳುವ ಸಾಮರ್ಥ್ಯ ವಿದ್ದರೆ ಯಾಕೆ ಮಾರಾಟಮಾಡಲು ಮುಂದಾಗುತ್ತಿದ್ದನು, ಇಂತಹ ಷರತ್ತು ಅರ್ಜಿದಾರರು ನೀಡಿರುವ ದಾಖಲೆಯ ಬಗ್ಗೆ ಗಮನಹರಿಸಿ ಬುದ್ದಿಯನ್ನು ಹರಿಸಿ ಮಾಡಿದಂತಾ ನಿರ್ದಾರವಲ್ಲ ಎಂದು ನ್ಯಾಯಮೂರ್ತಿ ಜಸ್ಟೀಸ್ ಎ.ಎನ್. ವೇಣುಗೋಪಾಲ್ ಗೌಡ ಪ್ರಕರಣವೊಂದರಲ್ಲಿ ಅಭಿಪ್ರಾಯಿಸಿ ಆದೇಶಿಸಿದ್ದಾರೆ.[2]

ಕೆಲವು ಬುದ್ದಿವಂತರು ಈ ಕಾಯ್ದೆಯ ವ್ಯಾಪ್ತಿಯಿಂದ ಹೊರಬರಲು ಮೂಲ ಗ್ರಾಂಟಿಗಳಿಗೆ ವಾಪಸ್ ಜಮೀನು ಕೊಡುವುದು, ನಂತರ ಸರ್ಕಾರದ ಮಟ್ಟದಲ್ಲಿ ಪರಭಾರೆ ಅನುಮತಿ ಪಡೆದು ಮತ್ತೆ ಖರೀದಿಸುವುದು ಮಾಡುವ ಅನ್ಯ ಮಾರ್ಗವನ್ನು ಹುಡುಕಿ ಕೊಳ್ಳುತ್ತಾರೆ. ಅಂತದ್ದೇ ಮಾರ್ಗವನ್ನು ಒಂದು ಪ್ರಕರಣದಲ್ಲಿ ಪಾರ್ಟಿಗಳು ಮಾಡಿರುತ್ತಾರೆ. ಹೈಕೋರ್ಟಿನಲ್ಲಿ ಪ್ರಕರಣ (ರಿಟ್ ಅಪೀಲು 151/2006 ಮತ್ತು 3901/2005) ಇರುವಾಗ ರಿಲಿಂಕ್ವಿಷ್ಮೆಂಟ್ ಡೀಡ್ (ಪರಿತ್ಯಜನೆ ಪತ್ರ) ಬರೆದುಕೊಟ್ಟು ನಂತರ ಗ್ರಾಂಟಿ ಮಾರಾಟಕ್ಕೆ ಅನುಮತಿಯನ್ನು ಸರ್ಕಾರ ನೀಡಿರುತ್ತದೆ. ಈ ಬಗ್ಗೆ ನ್ಯಾಯಾಲಯದಲ್ಲಿದ್ದ

---

[1] ರುದ್ರಪ್ಪ ವಿ. ಜಿಲ್ಲಾಧಿಕಾರಿಗಳು – ಐ.ಎಲ್.ಆರ್ 1999 ಕರ್ 2683

[2] ಶಿವರಾಜ್ ವಿ. ಕರ್ನಾಟಕ ರಾಜ್ಯ – ಮನು/ ಕೆ.ಎ/ 0929/ 2013

ನ್ಯಾಯಮೂರ್ತಿ ಗೋಪಾಲಗೌಡ ಮತ್ತು ನ್ಯಾಯಮೂರ್ತಿ ಬಿಳ್ಳಪ್ಪ ದ್ವಿಸದಸ್ಯ ಪೀಠ[1] ಕಾನೂನು ವ್ಯಾಖ್ಯಾನವನ್ನು ಗಹನಾವಾಗಿ ಉಲ್ಲೇಕಿಸಿ (ತೀರ್ಪು ದಿನಾಂಕ 08-06-2007) ಅಂತಹ ಪ್ರಕ್ರಿಯೆ ಅನೂರ್ಜಿತಗೊಳಿಸಿರುತ್ತಾರೆ, "ರಾಜ್ಯ ಸರ್ಕಾರದ ಅಂಡರ್ ಸೆಕ್ರೆಟರಿ ಅಂಗೀಕರಿಸಿದ ಅನುಮತಿಯ ಆದೇಶವು ಕಾಯ್ದೆಯ ಸೆಕ್ಷನ್ 4 (2) ಮತ್ತು ಕರ್ನಾಟಕ ವ್ಯವಹಾರ ವಹಿವಾಟು 1977 ರ ನಿಯಮಗಳ ಪ್ರಕಾರವಾಗಿಲ್ಲ. ಈ ಆದೇಶವನ್ನು ರಾಜ್ಯಪಾಲರ ಹೆಸರಿನಲ್ಲಿ ನೀಡಬೇಕಾಗಿತ್ತು. ಕಾಯ್ದೆಯ ಸೆಕ್ಷನ್ 4 (2) ರ ನಿಬಂಧನೆಯು ರಾಜ್ಯ ಸರ್ಕಾರವು ಮಂಜೂರು ಮಾಡಿದ ಭೂಮಿಯನ್ನು ಪರಭಾರೆ ಮಾಡಲು ಮೂಲ ಅನುದಾನ ಪಡೆದವರಿಗೆ ಅನುಮತಿ ನೀಡುವಂತೆ ಹೇಳುತ್ತದೆ." ಅಲ್ಲಿಗೆ ಸದರಿ ತೀರ್ಪಿನ ಅನ್ವಯ ಸರ್ಕಾರದ ಪ್ರತಿ ಅನುಮತಿಯು ರಾಜ್ಯಪಾಲರ ಹೆಸರಿನಲ್ಲಿ ಇಲ್ಲವಾದರೆ ಮುಂದೆ ಇದೇ ಆಧಾರದಲ್ಲಿ ಅನೇಕ ವ್ಯಾಜ್ಯ ಕಟ್ಟಿಟ್ಟ ಬುತ್ತಿ. ಹಾಗೆಯೇ ಸರ್ಕಾರದಿಂದ ಗ್ರಾಂಟ್ ಆದ ಜಮೀನು ಎಂದು ಪರಿಭಾವಿಸಲು ರಾಜ್ಯಪಾಲರ ಹೆಸರಿನಲ್ಲಿ ಗ್ರಾಂಟ್ ನೀಡಲಾಗಿಲ್ಲ ಎಂಬ ವಾದವೂ ಬರಬಹುದು. ನ್ಯಾಯ ವ್ಯಾಖ್ಯಾನಗಳು ರೋಚಕ ತಿರುವುಗಳನ್ನು ನೀಡುತ್ತವೆ ಎನ್ನಲು ಇದಕ್ಕಿಂತ ನಿರ್ದಶ್ರನ ಬೇಕಿಲ್ಲ ಅಲ್ಲವೆ.

ಪ್ರಕರಣವೊಂದರಲ್ಲಿ ತಹಶೀಲ್ದಾರ್ ಪರಭಾರೆಗೆ ಅನುಮತಿ ನೀಡಿರುತ್ತಾರೆ. ಅದು ಸರಿಯಲ್ಲ ಎನ್ನುತ್ತದೆ ಕರ್ನಾಟಕ ಹೈಕೋರ್ಟ್.[2] ಇಲ್ಲಿ ತಹಶೀಲ್ದಾರ್ ಭೂ ಮಂಜೂರಾತಿ ಮಾಡಿರುತ್ತಾರೆ, ಅದಕ್ಕೆ ವಿನಾಯ್ತಿ ಅನುಮತಿ ನೀಡುವುದಕ್ಕೂ ಕರ್ನಾಟಕ ಲ್ಯಾಂಡ್ ಗ್ರಾಂಟ್ ನಿಯಮದಲ್ಲಿ ಬರುತ್ತದೆ ಎಂಬ ವಾದವೂ ಮಾಡಲಾಗಿರುತ್ತದೆ. ಅಂತಹ ಅನುಮತಿ ಪಡೆದ ಎರಡು ವರ್ಷದ ನಂತರ ಕ್ರಯ ಆಗಿದೆ ಮೋಸ ಇರಲಾರದು ಎಂಬ ವಾದವೂ ನಡೆದಿರುತ್ತದೆ. ಅಂತಹ ಆದೇಶವನ್ನು ಸದರಿ ಅಂತಹ ನ್ಯಾಯಾಲಯದಲ್ಲಿ ವಿಳಂಬವಾಗಿ ಪ್ರಶ್ನಿಸಲು ಬರುವುದಿಲ್ಲ ಎಂಬ ವಾದವೂ ನಡೆದಿರುತ್ತದೆ. ಇದಕ್ಕೆ ವಿರುದ್ಧವಾಗಿ ಕಾಯ್ದೆಯಲ್ಲಿ ಎ.ಸಿ ಮತ್ತು ಡಿ.ಸಿ ಬಿಟ್ಟರೆ ಬೇರೆ ಅಧಿಕಾರಿಗಳ ಉಲ್ಲೇಕ ಇಲ್ಲ,

---

[1] ಸಂಪಂಗಮ್ಮ ವಿ. ವಿಶೇಷಜಿಲ್ಲಾಧಿಕಾರಿಗಳು – ಮನು/ ಕೆ.ಎ/ 7676/ 2007 (ಡಿ.ಬಿ)

[2] ಮುನಿಯಪ್ಪ ವಿ. ಕರ್ನಾಟಕ ರಾಜ್ಯ – 2006 (1) ಕೆ.ಸಿ.ಸಿ.ಆರ್ 9

ತಹಶೀಲ್ದಾರ್ ಸ್ವತಂತ್ರ ಪ್ರಾಧಿಕಾರವಾಗಲು ಸಾಧ್ಯವಿಲ್ಲ, ಕಾಯ್ದೆಯ ಕಲಂ 4(2) ರಲ್ಲಿ ಮತ್ತು ಕಲಂ 3(ಸಿ) ರಂತೆ ಸರ್ಕಾರದ ಅನುಮತಿ ಅಂದರೆ ಕರ್ನಾಟಕ ಸರ್ಕಾರದ ಅನುಮತಿ ಎಂದಿದೆ ಎಂದು ವಾದಿಸಲಾಗುತ್ತದೆ. ತಹಶೀಲ್ದಾರ್ ಸರ್ಕಾರದ ಅಧಿಕಾರಿಯಾಗುತ್ತಾರೇ ಹೊರತು ಅವರೇ ಸರ್ಕಾರ ಆಗುವುದಿಲ್ಲ ಎಂಬ ವಾದವೂ ಮಾಡಲಾಗಿರುತ್ತದೆ. ಇವಕ್ಕೆಲ್ಲಾ ಉತ್ತರಿಸಿದ ನ್ಯಾಯಾಲಯ ಸರ್ಕಾರದ ಅನುಮತಿಯಷ್ಟೇ ಊರ್ಜಿತವಾಗುತ್ತದೆ ಹೊರತು ಬೇರೆ ಯಾವುದೇ ಅಧಿಕಾರಿಯ ಜ್ಞಾಪನೆ ಅಥವ ಹಿಂಬರಹ ಸಿಂದುವಲ್ಲ ಎಂದಿದೆ. "ಸರ್ಕಾರವು ತನ್ನ ಕಾರ್ಯದರ್ಶಿಗಳ ಮೂಲಕ, ಮಾನವ ಏಜೆನ್ಸಿಗಳು ಅಥವಾ ಮಂತ್ರಿಗಳು, ಸರ್ಕಾರದ ಅಧಿಕಾರವನ್ನು ಚಲಾಯಿಸುತ್ತಾರೆ ಎಂಬುದು ನಿಸ್ಸಂದೇಹವಾಗಿದೆ, ಆದರೆ, ಅಂತಹ ಉದ್ದೇಶಕ್ಕಾಗಿ ಸಹ, ಸ್ಪಷ್ಟವಾಗಿ ಹಾಕಲಾದ ಕಾರ್ಯವಿಧಾನಗಳು ಮತ್ತು ನಿಯಮಗಳು ಇವೆ, ಅಂದರೆ, ಸರ್ಕಾರದ ವ್ಯವಹಾರ ನಿಯಮಗಳು ಮತ್ತು ಹೇಳಿದ ನಿಯಮಗಳ ಪ್ರಕಾರ ಅಂತಹ ಅಧಿಕಾರ ನೀಡಲಾಗುತ್ತದೆ, ಒಬ್ಬ ವ್ಯಕ್ತಿಗೆ ಅಧಿಕಾರವಿದ್ದರೆ, ಅವನು ಖಂಡಿತವಾಗಿಯೂ ಅನುಮತಿಯನ್ನು ನೀಡಬಹುದು ಆದರೆ ಪ್ರತಿಯೊಂದು ಪ್ರಾಧಿಕಾರದಿಂದಲ್ಲ."

**ಇಂತಹ ಪ್ರಕರಣದಲ್ಲಿ ಉಬಯರೂ ರಾಜಿ ಮಾಡಿಕೊಳ್ಳಬಹುದೆ**

ಕರ್ನಾಟಕ ಹೈಕೋರ್ಟಿನ ದ್ವಿಸದಸ್ಯ ಪೀಠದ ಮುಂದೆ ಇಂತಹ ಪ್ರಶ್ನೆಯೊಂದು ಬರುತ್ತದೆ. ಅಂತಹ ಸಮಯದಲ್ಲಿ ಸರ್ಕಾರಕ್ಕೆ ಜಮೀನು ಮುಟ್ಟುಗೋಲಾಗುತ್ತದೆ. "ಪಿ.ಟಿ.ಸಿ.ಎಲ್ ಕಾಯ್ದೆಯ ಸೆಕ್ಷನ್ 5 (1) (ಬಿ) ಯ ಪರಿಶೀಲನೆಯು ಭೂಮಿಯನ್ನು ಮೂಲ ಅನುದಾನ ಪಡೆದವರಿಗೆ ಪುನಃ ಕೊಡಿಸುವುದು ಕಡ್ಡಾಯವಲ್ಲ ಎಂದು ಬಹಿರಂಗಪಡಿಸುತ್ತದೆ. ಇದು ವಿಶೇಷವಾಗಿ ಆಗುತ್ತದೆ, ಎಲ್ಲಿ ಅನುದಾನ ಪಡೆದವರು ಮತ್ತು ಖರೀದಿದಾರರು ಪರಸ್ಪರ ಹೊಂದಾಣಿಕೆ ಮಾಡಿಕೊಂಡಿದ್ದಾರೆ ಅಲ್ಲಿ ಆಗುತ್ತದೆ. ............ ಹಾಲಿ ಕೇಸಿನ ಸಂದರ್ಭದಲ್ಲಿ, ಆಸ್ತಿ 1987 ರ ಹಿಂದೆಯೇ ಕೈ ಬದಲಾಗಿದೆ. ಆದ್ದರಿಂದ, ಭೂಮಿಯನ್ನು ಸ್ವಾಧೀನಪಡಿಸಿಕೊಳ್ಳುವುದನ್ನು ಮೂಲ ಅನುದಾನ ಪಡೆದವರಿಗೆ ಪುನಃಸ್ಥಾಪಿಸುವುದು ಅಪ್ರಾಯೋಗಿಕವಾಗಿದೆ. ಮೇಲ್ಮನವಿಯನ್ನು

ಪುರಸ್ಕರಿಸುವಂತೆ ಕೋರಿ ಪ್ರತಿವಾದಿ – ಅನುದಾನ ಪಡೆದವರು ಜ್ಞಾಪಕ (ಮೆಮೋ) ಪತ್ರವನ್ನು ಸಲ್ಲಿಸಿದ್ದರಿಂದ ಇದು ಮತ್ತಷ್ಟು ಬಲಗೊಂಡಿದೆ. ಪಿ.ಟಿ.ಸಿ.ಎಲ್ ಕಾಯ್ದೆಯ ಸೆಕ್ಷನ್ 5 (ಬಿ), ಭೂಮಿಯನ್ನು ಸ್ವಾಧೀನಪಡಿಸಿಕೊಳ್ಳುವುದನ್ನು ಪುನರಾರಂಭಿಸುತ್ತದೆ ಮತ್ತು ಅದನ್ನು ಭೂ ಮಂಜೂರಾತಿಗೆ ಸಂಬಂಧಿಸಿದ ನಿಯಮಗಳಿಗೆ ಅನುಸಾರವಾಗಿ ಪರಿಶಿಷ್ಟ ಜಾತಿ ಅಥವಾ ಪರಿಶಿಷ್ಟ ಪಂಗಡಕ್ಕೆ ಸೇರಿದ ಯಾವುದೇ ವ್ಯಕ್ತಿಗೆ ನೀಡಲಾಗುತ್ತದೆ."[1]

**ಕಾಯ್ದೆ ವ್ಯಾಪ್ತಿಯಲ್ಲಿ ಇಲ್ಲದಾಗ ವಿವಾದ ಸಿವಿಲ್ ಕೋರ್ಟ್‌ಗೆ**

ಗ್ರಾಂಟ್ ಜಮೀನು 1979 ಕ್ಕೆ ಮುಂಚೆ 1975 ರಲ್ಲಿ ಗ್ರಾಂಟ್ ಪರಭಾರೆ ನಿಬಂದನೆ ಅವದಿಯ ನಂತರ ಮೊದಲ ಕ್ರಯ ಆಗಿರುತ್ತದೆ. ಒಂದು ತಿಂಗಳ ನಂತರ ಮತ್ತೆ ಕ್ರಯ ಆಗಿ ಗ್ರಾಂಟಿಗೆ ವಾಪಸ್ ಬಂದಿರುತ್ತದೆ. ಮೂರು ತಿಂಗಳ ನಂತರ ಮತ್ತೆ ಇನ್ನೊಬ್ಬರಿಗೆ ಕ್ರಯ ಆಗಿರುತ್ತದೆ. ಇಂತಹ ಹಿನ್ನೆಲೆಯಲ್ಲಿ ಕ್ರಯ ಆಗಿಲ್ಲ, ಅದು ಸಾಲಕ್ಕೆ ಬರೆದುಕೊಟ್ಟ ಭದ್ರತೆ ಪತ್ರಗಳು ಎಂಬ ವಾದದೊಂದಿಗೆ ಪಿ.ಟಿ.ಸಿ.ಎಲ್ ಕಾಯ್ದೆಯ ಕೆಳಗೆ ಅರ್ಜಿ ಹಾಕಲಾಗುತ್ತದೆ. ಇಂತಹ ವಿಚಾರ ಕಾಯ್ದೆಯ ವ್ಯಾಪ್ತಿಗೆ ಬರದು ಅದನ್ನು ಸಿವಿಲ್ ಕೋರ್ಟ್ ನಿರ್ಧರಿಸುತ್ತದೆ ಎಂದು ಕರ್ನಾಟಕ ಹೈಕೋರ್ಟಿನ ದ್ವಿಸದಸ್ಯ ಪೀಠ ತೀರ್ಪಿತ್ತಿದೆ.[2] (ರಿಟ್ ಅಪೀಲು.ನಂ. 15430/2011 – ಬೆಂಗಳೂರು – ದಿ. 19-11-2011).

---

[1] ಬಸವರಾಜಪ್ಪ ವಿ. ಜಿಲ್ಲಾಧಿಕಾರಿಗಳು – ಐ.ಎಲ್.ಆರ್ 2012 ಕರ್ 2057 (ಡಿ.ಬಿ)

[2] ಅಶ್ವಥನಾರಾಯಣ ವಿ. ನರಸಿಂಹಯ್ಯ – ಮನು/ ಕೆ.ಎ/ 1535/ 2011 (ಡಿ.ಬಿ)

# ಅಧ್ಯಾಯ-6

# ಸಕಾರಣಬದ್ದ ಅವಧಿ

## ಸಕಾರಣಬದ್ದ ಅವದಿಯಲ್ಲಿ ಅರ್ಜಿ ಹಾಕದಿದ್ದಲ್ಲಿ ವಜಾ ಮಾಡಿ

ಸಕಾರಣಬದ್ದ ಕಾಲಮಿತಿಯಲ್ಲಿ ಗ್ರಾಂಟಿದಾರರ ಪರವಾಗಿ ಅರ್ಜಿ ಹಾಕಿಲ್ಲ ಎಂಬ ಪ್ರಶ್ನೆಯ ಬಗ್ಗೆ ಸುಪ್ರೀಮ್ ಕೋರ್ಟ್ ಪ್ರಕರಣವೊಂದರಲ್ಲಿನ ವಿವರ ಹೀಗಿದೆ,[1] "1965 ರಲ್ಲಿ ಗ್ರಾಂಟ್ ಆಗಿರುತ್ತೆ, ಮೊದಲ ಕ್ರಯ 1977 ರಲ್ಲಿ ಆಗಿರುತ್ತೆ, ನಂತರವೂ ಕೈಬದಲಾಗಿರುತ್ತದೆ, 2004 ರಲ್ಲಿ ಗ್ರಾಂಟಿ ವಾರಸ್ಸುದಾರರು ಅರ್ಜಿ ಸಲ್ಲಿಸುತ್ತಾರೆ, ಎ.ಸಿ ಅರ್ಜಿ ವಜಾ ಮಾಡುತ್ತಾರೆ, ಡಿ.ಸಿ ಮತ್ತು ಹೈಕೋರ್ಟ್ ಅರ್ಜಿ ಪುರಸ್ಕರಿಸಿ ಆದೇಶ ಮಾಡುತ್ತಾರೆ. ಸುಪ್ರೀಮ್ ಕೋರ್ಟ್ ಮುಂದೆ ಗ್ರಾಂಟ್ ನಿರ್ಬಂದ ಶರತ್ತು 10 ವರ್ಷ ಅಲ್ಲ 15 ವರ್ಷ ಶರತ್ತು ಉಲ್ಲಂಘಿಸಲಾಗಿದೆ ಎಂಬ ವಾದ ಮಂಡಿಸಲಾಗುತ್ತದೆ, ಅರ್ಜಿದಾರರು ಅಸಲು ಗ್ರಾಂಟ್ ಪತ್ರವನ್ನು ಹಾಜರುಪಡಿಸಿಲ್ಲ ಹಾಗಾಗಿ ವರ್ಗಾವಣೆ ಶರತ್ತು ಉಲ್ಲಂಘಿಸಿದೆ ಎಂಬ ತೀರ್ಮಾನಕ್ಕೆ ಬರುವುದಕ್ಕೆ ಸಾದ್ಯವಿಲ್ಲ ಎನ್ನುತ್ತದೆ. ಕಾಯ್ದೆ ಪ್ರಾರಂಬದ ನಂತರ, 25 ವರ್ಷ ವಿಳಂಬದ ನಂತರ ಅರ್ಜಿ ಸಲ್ಲಿಸಿರುವ ಬಗ್ಗೆ ಅದು ಸಕಾರಣಬದ್ದ ಅವಧಿಯಲ್ಲಿ ಸಲ್ಲಿಸಲಾಗಿಲ್ಲ ಎಂದು ಅರ್ಜಿ ವಜಾ ಮಾಡಿದೆ. ಕಾಯ್ದೆ ಜಾರಿಗೆ ಮುನ್ನ ಆಗಿರುವ ವರ್ಗಾವಣೆಗಳಿಗೂ ಕಾಯ್ದೆ ಅನ್ವಯಿಸುವ ಬಗ್ಗೆ, ಅದು ಯಾವ ಹಿಂದಿನ ತಾರೀಖಿನಿಂದ ಅನ್ವಯ ಎಂದು ಕೂಡ ಕಾಯ್ದೆಯಲ್ಲಿ ಹೇಳಲಾಗಿಲ್ಲ, ಅದರ ಸಮಂಜಸತೆ ಬಗ್ಗೆ ಕೋರಿಕೆ ಇಲ್ಲದ ಕಾರಣ ಅದರ ಬಗ್ಗೆ ವ್ಯಾಖ್ಯಾನಿಸಲು ಕೋರ್ಟ್ ತಟಸ್ಥ ನಿಲುವು ತಾಳಿದೆ. ಈ ಕೇಸಿನಲ್ಲಿ ಅಂತದ್ದೇ ಎರಡು ಪ್ರಕರಣಗಳಾದ (ಚೆಡ್ಡಿಲಾಲ್ ಯಾದವ್ ವಿ. ಹರಿಕಿಶೋರ್ - 2018 (12) ಎಸ್.ಸಿ.ಸಿ 527 ಮತ್ತು ನಿಂಗಪ್ಪ ವಿ. ಜಿಲ್ಲಾಧಿಕಾರಿಗಳು - ಸಿ.ಎ.ನಂ.3131 ಆಫ್ 2007 ದಿನಾಂಕ 14-07-2011) ಉಲ್ಲೇಕಿಸಿ ಅನುಮೋದಿಸಿದೆ ಹಾಗೆಯೇ ಕರ್ನಾಟಕ ಹೈಕೋರ್ಟ್ ತೀರ್ಪುಗಳಾದ (ರುದ್ರಪ್ಪ ವಿ. ಜಿಲ್ಲಾಧಿಕಾರಿಗಳು-2000 (1) ಕೆ.ಎಲ್.ಜೆ

---

[1] ನೆಕ್ಕಂಟಿರಾಮು ವಿ. ಕರ್ನಾಟಕರಾಜ್ಯ - 2018 (6) ಕರ್.ಎಲ್.ಜೆ 792

523, ಮದ್ದುರಪ್ಪ ವಿ. ಕರ್ನಾಟಕ ರಾಜ್ಯ – 2006 (4) ಕೆ.ಎಲ್.ಜೆ 303, ಮರೆಗೌಡ ವಿ. ಜಿಲ್ಲಾಧಿಕಾರಿಗಳು–2000(2) ಕರ್.ಎಲ್.ಜೆ (ಶಾ.ನೋ4ಬಿ)) ಈ ಕೇಸುಗಳಲ್ಲಿ ಹೇಳಲಾದ, ಅರ್ಜಿ ಸಲ್ಲಿಸುವಿಕೆಗೆ ಕಲಂ 5 ರಲ್ಲಿ ಕಾಲಮಿತಿ ಇಲ್ಲ ಎಂಬ ಅಂಶವನ್ನು ತಳ್ಳಿಹಾಕಲಾಗಿದೆ.

ಈ ಮೇಲಿನ ಕೇಸನ್ನು ಅನುಸರಿಸಿ ಕರ್ನಾಟಕ ಹೈಕೋರ್ಟ್ ಒಂದು ಪ್ರಕರಣದಲ್ಲಿ,[1] (ಬೆಂಗಳೂರು – ರಿಟ್.ಅರ್ಜಿ.ನಂ. 50366/2018– ದಿ. 01-08–2019) – 1969 ರಲ್ಲಿ ಗ್ರಾಂಟ್ ಆಗಿರುವ ಜಮೀನು 1970 ರಲ್ಲೇ ಕ್ರಯವಾಗಿರುತ್ತದೆ, 2010 ರಲ್ಲಿ ಗ್ರಾಂಟಿ ವಾರಸ್ಸುದಾರರು ಅರ್ಜಿ ಸಲ್ಲಿಸಿರುತ್ತಾರೆ, ಕಾಯ್ದೆ ಪ್ರಾರಂಬವಾಗಿ 30 ವರ್ಷ ತಡವಾಗಿ ಅರ್ಜಿ ಸಲ್ಲಿಸಲಾಗಿದೆ ಎಂಬ ಕಾರಣದಿ ಅರ್ಜಿ ವಜಾ ಆಗುತ್ತದೆ.

ಸುಪ್ರೀಮ್ ಕೋರ್ಟಿನ ಮುಂದೆ ಬಂದಂತಹ ಪ್ರಕರಣದಲ್ಲಿ, 1946-47 ರಲ್ಲಿ ಎಸ್.ಸಿ ವರ್ಗದ ಜನರಿಗೆ ಗ್ರಾಂಟ್ ಆಗಿರುತ್ತದೆ, ಗ್ರಾಂಟಿಗಳಿಗೆ ತಲಾ 2 ಎಕರೆ ನೀಡಲಾಗಿರುತ್ತದೆ, 1967 ರಲ್ಲಿ ಮೊದಲನೇ ಮಾರಾಟವಾಗಿರುತ್ತದೆ. 1998 ರವರೆಗೆ ಯಾವುದೇ ಕ್ರಮ ಜರುಗಿರುವುದಿಲ್ಲ, ಕಾಯ್ದೆ ಜಾರಿಯಾದ 20 ವರ್ಷದ ನಂತರ ಅಧಿಕಾರಿಗಳು ಸ್ವಯಂ ತಾವಾಗೇ ಪ್ರಕರಣವನ್ನು ದಾಖಲಿಸುತ್ತಾರೆ. ಇದರಲ್ಲಿ ಸಕ್ಷಮ ಪ್ರಾಧಿಕಾರದಲ್ಲಿ (ಎ.ಸಿ ಮತ್ತು ಡಿ.ಸಿ ನ್ಯಾಯಾಲಯದಲ್ಲಿ) ಕ್ರಯ ರದ್ದಾಗಿರುವುದಿಲ್ಲ. ಹೈಕೋರ್ಟಿನ ಏಕಸದಸ್ಯ ಮತ್ತು ದ್ವಿಸದಸ್ಯ ಪೀಠದಲ್ಲಿ ಸಮಾಜ ಕಲ್ಯಾಣ ಕಾನೂನು ಆದುದರಿಂದ ಖರೀದಿದಾರರು ಗ್ರಾಂಟ್ ಜಮೀನು ಹೊಂದಲು ಸಾಧ್ಯವಿಲ್ಲ ಎಂದು ವರ್ಗಾವಣೆ ರದ್ದಾಗಿರುತ್ತದೆ. ಸುಪ್ರೀಮ್ ಕೋರ್ಟ್ ಸದರಿ ತೀರ್ಪುಗಳನ್ನು ರದ್ದು ಮಾಡಿ ಹೀಗೆಂದಿದೆ, "ಎಲ್ಲಿ ಕಾಲ ಮಿತಿಯನ್ನು ಸೂಚಿಸದಿದ್ದಲ್ಲಿ, ಪಾರ್ಟಿಯು ಸಮರ್ಥ ನ್ಯಾಯಾಲಯ ಅಥವಾ ಪ್ರಾಧಿಕಾರವನ್ನು ಸಮಂಜಸವಾದ ಸಮಯದೊಳಗೆ ಸಂಪರ್ಕಿಸಬೇಕು, ಅದನ್ನು ಮೀರಿ ಯಾವುದೇ ಪರಿಹಾರವನ್ನು ನೀಡಲಾಗುವುದಿಲ್ಲ. ಮೊದಲೇ ನಿರ್ಧರಿಸಿದಂತೆ, ಈ

---

[1] ಕೃಷ್ಣಾರೆಡ್ಡಿ ವಿ. ಕರ್ನಾಟಕ ರಾಜ್ಯ – ಮನು/ ಕೆ.ಎ/ 5972/ 2019

ತತ್ವವು ಸುಯೋ ಮೋಟೋ (ತಾವಾಗೇ ತೆಗೆದುಕೊಳ್ಳುವ) ಕ್ರಿಯೆಗಳಿಗೂ ಸಹ ಅನ್ವಯಿಸುತ್ತದೆ."[1]

ಗ್ರಾಂಟ್ ಅಗಿದ್ದು 1963 ರಲ್ಲಿ ಮೊದಲ ಕ್ರಯ ಆಗಿದ್ದು 1970 ರಲ್ಲಿ, ಅರ್ಜಿ ಹಾಕಿದ್ದು 2007-08 ರಲ್ಲಿ, ಕಾಯ್ದೆ ಜಾರಿಯಾಗಿ 28 ವರ್ಷದ ನಂತರ ಹಾಕಲಾದ ಅರ್ಜಿ ಸಕಾರಣಬದ್ದ ಕಾಲಾವಧಿಯಲ್ಲಿ ಹಾಕಲಾಗಿಲ್ಲ.[2] (ಬೆಂಗಳೂರು - ರಿಟ್.ಅರ್ಜಿ.ನಂ. 40164/2012- ದಿ. 29-08-2019)

ಗ್ರಾಂಟ್ ಅಗಿದ್ದು 1962 ರಲ್ಲಿ ಮೊದಲ ಕ್ರಯ ಆಗಿದ್ದು 1978 ರಲ್ಲಿ, ಅರ್ಜಿ ಹಾಕಿದ್ದು 1999 ರಲ್ಲಿ, ಕಾಯ್ದೆ ಜಾರಿಯಾಗಿ 20 ವರ್ಷದ ನಂತರ ಹಾಕಲಾದ ಅರ್ಜಿ ಸಕಾರಣಬದ್ದ ಕಾಲಾವಧಿಯಲ್ಲಿ ಹಾಕಲಾಗಿಲ್ಲ.[3] (ಬೆಂಗಳೂರು - ರಿಟ್.ಅರ್ಜಿ.ನಂ. 40126/2014- ದಿ. 20-08-2019)

ಗ್ರಾಂಟ್ ಅಗಿದ್ದು 1941 ರಲ್ಲಿ ಮೊದಲ ಕ್ರಯ ಆಗಿದ್ದು 1966 ರಲ್ಲಿ, ಅರ್ಜಿ ಹಾಕಿದ್ದು 2007 ರಲ್ಲಿ, ಕಾಯ್ದೆ ಜಾರಿಯಾಗಿ 28 ವರ್ಷದ ನಂತರ ಹಾಕಲಾದ ಅರ್ಜಿ ಸಕಾರಣಬದ್ದ ಕಾಲಾವಧಿಯಲ್ಲಿ ಹಾಕಲಾಗಿಲ್ಲ. 1941 ರಲ್ಲಿ ಯಾವಾಗಲೂ ಪರಭಾರೆ ನಿಯಮ ಇತ್ತು ಎಂಬ ವಾದ ತಳ್ಳಿಹಾಕಿದೆ.[4] (ಬೆಂಗಳೂರು - ರಿಟ್.ಅರ್ಜಿ.ನಂ. 31117/2019- ದಿ. 14-08-2019)

ಹೈಕೋರ್ಟಿನ ದ್ವಿಸದಸ್ಯ ಪೀಠದ ಮುಂದಿನ ತೀರ್ಪು ನೋಡಿ, ಗ್ರಾಂಟ್ ಅಗಿದ್ದು 1941 ರಲ್ಲಿ ಮೊದಲ ಕ್ರಯ ಆಗಿದ್ದು 1985 ರಲ್ಲಿ, ಅರ್ಜಿ ಹಾಕಿದ್ದು 2006 ರಲ್ಲಿ, ಕಾಯ್ದೆ ಜಾರಿಯಾಗಿ 20 ವರ್ಷದ ನಂತರ ಹಾಕಲಾದ ಅರ್ಜಿ ಸಕಾರಣಬದ್ದ ಕಾಲಾವಧಿಯಲ್ಲಿ ಹಾಕಲಾಗಿಲ್ಲ.[5] (ಬೆಂಗಳೂರು - ರಿಟ್.ಅಪೀಲು.ನಂ. 1028/2019- ದಿ. 08-07-2019) - ಇಲ್ಲಿ 01-01-

---

[1] ವಿವೇಕ್ ಹಿಂದುಜಾ ವಿ. ಅಶ್ವಥ - 2019 (1) ಕರ್.ಎಲ್.ಜೆ 819 (ಎಸ್.ಸಿ)

[2] ಗೋಪಾಲ ಗೌಂಡರ್ ವಿ. ಜಿಲ್ಲಾಧಿಕಾರಿಗಳು - ಮನು/ಕೆ.ಎ/6378/2019

[3] ರಾಜಗೋಪಾಲ್ ವಿ. ಜಿಲ್ಲಾಧಿಕಾರಿಗಳು - ಮನು/ಕೆ.ಎ/6126/2019

[4] ನಾರಾಯಣಸ್ವಾಮಿ ವಿ. ಜಿಲ್ಲಾಧಿಕಾರಿಗಳು - ಮನು/ಕೆ.ಎ/6147/2019

[5] ಮುನಿರಾಜು ವಿ. ಶೇಖ್ ಹೈದರ್ - ಮನು/ ಕೆ.ಎ/ 4690/ 2019 (ಡಿ.ಬಿ)

1979 ರ ನಂತರ ಕ್ರಯ ಆಗಿರುವ ವಿಚಾರದಲ್ಲೂ ಸಕಾರಣಬದ್ದ ಕಾಲಾವದಿಯಲ್ಲಿ ಹಾಕಲಾಗಿಲ್ಲ ಎಂಬ ಸಿದ್ದಾಂತವನ್ನು ಅನ್ವಯಿಸಲಾಗಿದೆ.

ಮಾರಾಟ ವಹಿವಾಟನ್ನು ಕಾನೂನುಬಾಹಿರವೆಂದು ಘೋಷಿಸಲು ಮತ್ತು ಭೂಮಿಯನ್ನು ವಾಪಸ್ ಪಡೆದು ಪುನರ್ ಮರಳಿಸಲು ಶಾಸನಬದ್ಧ ಪರಿಹಾರವನ್ನು ತಡವಾಗಿ ಆಹ್ವಾನಿಸಲು ಕೊಟ್ಟ ಕಾರಣವೆಂದರೆ, ಅರ್ಜಿದಾರನು ಕಾಯ್ದೆಯಡಿ ಹಕ್ಕುಗಳ ಬಗ್ಗೆ ತಿಳಿದಿಲ್ಲ ಮತ್ತು ಅವನು ಕೂಲಿ ಕೆಲಸ ಮಾಡುವ ಮೂಲಕ ತನ್ನ ಜೀವನೋಪಾಯವನ್ನು ದೈನಂದಿನ ವೇತನದಿಂದ ನಡೆಸುತ್ತಿದ್ದಾನೆ ಎಂಬ ವಿಳಂಬದ ಸಮಂಜಸತೆಗೆ ಸಂಬಂಧಿಸಿದ ವಿವರಣೆಯನ್ನು ನ್ಯಾಯಾಲಯವು ಪರಿಶೀಲಿಸಬೇಕೆಂದು ಪರಿಗಣಿಸಲಾಗಿದ್ದರೂ ಸಹ ಅದು ಸಾಕಷ್ಟು ಕಾರಣವೆಂದು ಸ್ವೀಕರಿಸಲಾಗುವುದಿಲ್ಲ, ಎನ್ನುತ್ತದೆ ಕರ್ನಾಟಕ ಹೈಕೋರ್ಟ್.[1] ಈ ಪ್ರಕರಣದಲ್ಲಿ ಗ್ರಾಂಟ್ ಅಗಿದ್ದು 1935 ರಲ್ಲಿ ಮೊದಲ ಕ್ರಯ ಆಗಿದ್ದು 1954 ರಲ್ಲಿ, ಅರ್ಜಿ ಹಾಕಿದ್ದು 2005 ರಲ್ಲಿ, ಕಾಯ್ದೆ ಜಾರಿಯಾಗಿ 25 ವರ್ಷದ ನಂತರ ಹಾಕಲಾದ ಅರ್ಜಿ ಸಕಾರಣಬದ್ದ ಕಾಲಾವಧಿಯಲ್ಲಿ ಹಾಕಲಾಗಿಲ್ಲ, 20 ವರ್ಷ ಪರಭಾರೆ ಅವಧಿ ಉಲ್ಲಂಗಿಸಿದ್ದರೂ ಅದನ್ನು ಪರಿಗಣಿಸಲು ಕಾಲಾವಧಿಯಲ್ಲಿ ಅರ್ಜಿ ಹಾಕಿಲ್ಲ ಎಂಬ ತೀರ್ಮಾನಕ್ಕೆ ಬರಲಾಗಿದೆ. (ಬೆಂಗಳೂರು – ರಿಟ್.ಅರ್ಜಿ.ನಂ. 35155/2018– ದಿ. 07-06-2019)

ಹೈಕೋರ್ಟಿನ ದ್ವಿಸದಸ್ಯ ಪೀಠದ ಮುಂದಿನ ತೀರ್ಪು ನೋಡಿ, ಗ್ರಾಂಟಿಗೆ ವಿಳಂಬಕ್ಕೆ ಕಾರಣವನ್ನು ವಿವರಿಸುವಂತೆ ಅವಕಾಶ ಕೊಡಬೇಕು, ಅಂತಹ ಪ್ರಮಾಣಪತ್ರ ಮತ್ತು ಸಾಕ್ಷ್ಯವನ್ನು ಕೆಳ ನ್ಯಾಯಾಲಯ ಪರಿಶೀಲಿಸಬೇಕಿರುತ್ತದೆ, ಎಂದಿದೆ.[2] (ಬೆಂಗಳೂರು – ರಿಟ್.ಅಪೀಲು.ನಂ. 503/2016 ಮತ್ತು ಇತರೆ – ದಿ. 08-07-2019)

---

[1] ಮುನಿಯಪ್ಪ ವಿ. ವಿಶೇಷಜಿಲ್ಲಾಧಿಕಾರಿ – ಮನು/ ಕೆ.ಎ/ 3568/ 2019

[2] ಕಮಲ ವಿ. ಕರ್ನಾಟಕ ರಾಜ್ಯ – ಮನು/ ಕೆ.ಎ/ 4691/ 2019

ಹೈಕೋರ್ಟಿನ ದ್ವಿಸದಸ್ಯ ಪೀಠದ ಮುಂದಿನ ತೀರ್ಪು ನೋಡಿ, (ಬೆಂಗಳೂರು –ರಿಟ್ ಅಪೀಲು 5868–5869/2017 – ದಿ. 24–04–2019) 1965 ರಲ್ಲಿ ಗ್ರಾಂಟ್ ಆಗಿರುತ್ತದೆ, 1979 ರಲ್ಲಿ ಭೂನ್ಯಾಯಮಂಡಳಿಯಲ್ಲಿ ಗೇಣಿದಾರನೆಂದು ಇತರೆಯವರಿಗೆ ಹಕ್ಕು ನೀಡಲಾಗುತ್ತೆ, 1995 ರಲ್ಲಿ ಪಿ.ಟಿ.ಸಿ.ಎಲ್ ಪ್ರಕರಣ ದಾಖಲು ಮಾಡುತ್ತಾರೆ, ವಜಾ ಆಗುತ್ತದೆ, ಜಿಲ್ಲಾಧಿಕಾರಿಗಳಿಗೆ ಅಪೀಲು ಸಲ್ಲಿಸಲಾಗುತ್ತದೆ. ಅಲ್ಲಿ 1999 ರಲ್ಲಿ ಗ್ರಾಂಟಿ ಮತ್ತು ಗೇಣಿದರ ವಜಾ ಗೊಳಿಸಲು ಮೆಮೋ ಸಲ್ಲಿಸುತ್ತಾರೆ, 2000 ದಲ್ಲಿ ಗ್ರಾಂಟಿ ಮೃತರಾಗುತ್ತಾರೆ, ಆ ನಂತರ ಮೆಮೋ ಮೇಲೆ ಅಪೀಲು ವಜಾ ಆಗುತ್ತದೆ. ಗ್ರಾಂಟಿ ವಾರಸ್ಸುದಾರರು 15 ವರ್ಷದ ನಂತರ ಡಿ.ಸಿ ಮುಂದೆ ಅರ್ಜಿ ಸಲ್ಲಿಸುತ್ತಾರೆ, ವಜಾ ಆಗುತ್ತದೆ, ಸಿವಿಲ್ ದಾವೆ ಸಲ್ಲಿಸುತ್ತಾರೆ, ರಿಟ್ ಸಲ್ಲಿಸುತ್ತಾರೆ, ಏಕಸದಸ್ಯ ಪೀಠ ವಜಾ ಗೊಳಿಸುತ್ತೆ, ದ್ವಿಸದಸ್ಯ ಪೀಠದಲ್ಲಿ ಸುಪ್ರೀಮ್ ಕೋರ್ಟಿನ ತೀರ್ಪುಗಳ ಉಲ್ಲೇಕಿಸಿ ವಿಳಂಬವಾಗಿ ಅರ್ಜಿ ಸಲ್ಲಿಸಿರುವುದಕ್ಕೆ ವಜಾ ಆಗುತ್ತದೆ. ಇಲ್ಲಿ ಉಲ್ಲೇಕಿತ ತೀರ್ಪಿನ ಪೈಕಿ ಪ್ರಭಾಕರ್ ವಿ. ಜೆ.ಡಿ – 2015 (15) ಎಸ್.ಸಿ.ಸಿ 1 ಪ್ಯಾರಾ 38, " ದೀರ್ಘಕಾಲದವರೆಗೆ ಚಲಾಯಿಸದ ಹಕ್ಕು ಅಸ್ತಿತ್ವದಲ್ಲಿಲ್ಲ ಎಂಬುದು ಈಗ ನ್ಯಾಯಶಾಸ್ತ್ರದ ಚೆನ್ನಾಗಿ ಗುರುತಿಸಲ್ಪಟ್ಟ ತತ್ವವಾಗಿದೆ. ಕೆಲವು ನಡಾವಳಿಗಳಿಗೆ ಸಂಬಂಧಿಸಿದ ಯಾವುದೇ ಶಾಸನದಿಂದ ಯಾವುದೇ ಮಿತಿಯ ಅವಧಿ ಇಲ್ಲದಿದ್ದರೂ ಸಹ, ಅಂತಹ ಸಂದರ್ಭಗಳಲ್ಲಿ ನ್ಯಾಯಾಲಯಗಳು ಯಾವುದೇ ಸಮರ್ಥನೀಯ ವಿವರಣೆಯಿಲ್ಲದೆ ತಡವಾಗಿ ನ್ಯಾಯಾಲಯವನ್ನು ಸಂಪರ್ಕಿಸಿದ ದಾವೆ ಹೂಡುವವರ ಬಗ್ಗೆ ಮತ್ತು ಕರ್ತವ್ಯ ಲೋಪ ಮತ್ತು ವಿಳಂಬ ಸಿದ್ಧಾಂತ ಮತ್ತು ಮೌನಸಮ್ಮತಿ ಸಿದ್ಧಾಂತವನ್ನು ರಚಿಸಿ ಅವಿವೇಕದ ವಿಳಂಬದ ನಂತರ ಕ್ರಮವನ್ನು ತರುವ ದಾವ ವಜಾಗೊಳಿಸಿವೆ. ಕರ್ತವ್ಯ ಲೋಪ ಸಿದ್ಧಾಂತವು ವಾಸ್ತವವಾಗಿ ಈಕ್ವಿಟಿಯ ಸೂತ್ರ ಅಳವಡಿಸುತ್ತದೆ, "ವಿಳಂಬವು ಈಕ್ವಿಟಿಗಳನ್ನು ಸೋಲಿಸುತ್ತದೆ.[1] ಎಂದಿದೆ.

[1] ವೀರಪ್ಪ ವಿ. ಕರ್ನಾಟಕ ರಾಜ್ಯ – ಮನು/ ಕೆ.ಎ/ 2900/ 2019

ಹೈಕೋರ್ಟಿನ ಮುಂದೆ ಬಂದ ಪ್ರಕರಣದಲ್ಲಿನ ವಾಸ್ತವಿಕತೆ ಗಮನಿಸಿ, 1956-57 ರಲ್ಲಿ ಡಿ.ಡಿ ನಿಯಮದಲ್ಲಿ ಗ್ರಾಂಟ್ ಆಗಿರುತ್ತದೆ, ಮೊದಲ ಕ್ರಯ 1972 ರಲ್ಲಿ ಆಗಿರುತ್ತದೆ, ಅಂದಿನ ಜಾರಿಯಲ್ಲಿದ್ದ ಉಲ್ಲೇಕಿತ ನೋಟಿಫಿಕೇಶನ್ ನಂತೆ 15 ವರ್ಷ ಪರಭಾರೆ ನಿಷಿದ್ದ ಶರತ್ತು ಇರುತ್ತೆ, 15 ವರ್ಷದ ನಂತರ ಕ್ರಯ ಆಗಿರುತ್ತದೆ. ಗ್ರಾಂಟಿ ವಾರಸ್ಸುದಾರರು 1991 ರಲ್ಲಿ ಮತ್ತು 2002 ರಲ್ಲಿ ಅರ್ಜಿ ಸಲ್ಲಿಸಿ ಅದು ವಜಾ ಆಗಿರುತ್ತದೆ, 2006 ರಲ್ಲಿ ಮತ್ತೆ ಅರ್ಜಿ ಸಲ್ಲಿಸುತ್ತಾರೆ ಎ.ಸಿ ಕೋರ್ಟ್ ಅರ್ಜಿ ಪುರಸ್ಕರಿಸುತ್ತೆ, ಡಿ.ಸಿ ಕೋರ್ಟ್ ಪರಭಾರೆ ನಿಷಿದ್ದ ಶರತ್ತು ಅವಧಿಯ ನಂತರ ಕ್ರಯ ಆಗಿರುವುದರಿಂದ, 1979 ರ ಹಿಂದೆ ಕ್ರಯ ಆಗಿರುವುದರಿಂದ ಅಪೀಲು ಪುರಸ್ಕರಿಸುತ್ತೆ, ಹೈಕೋರ್ಟ್ ಸದರಿ ತೀರ್ಪನ್ನು ಎತ್ತಿ ಹಿಡಿಯುತ್ತೆ. ವಿಳಂಬದ ವಿಚಾರದಲ್ಲೂ ಹೈಕೋರ್ಟ್ ಸದರಿ ಅರ್ಜಿ ಪುರಸ್ಕಾರಕ್ಕೆ ಯೋಗ್ಯವಲ್ಲ ಎನ್ನುತ್ತದೆ.[1] (ಬೆಂಗಳೂರು - ರಿಟ್.ಅರ್ಜಿ.ನಂ. 58219/2016- ದಿ. 10-10-2018)

ಮಾನ್ಯ ಜಸ್ಟೀಸ್ ಅಜಿತ್ ಗುಂಜಾಲ್ ರವರು ಪ್ರಕರಣವೊಂದರಲ್ಲಿ ಪಿ.ಟಿ.ಸಿ.ಎಲ್ ಕಾನೂನಿನಲ್ಲಿ ಗ್ರಾಂಟಿ ಅರ್ಜಿ ಹಾಕಬೇಕು ಎಂಬ ಕಡ್ಡಾಯತೆ ಇಲ್ಲ ಎಂದು ಉಲ್ಲೇಕಿಸುತ್ತ, ಕಾಯ್ದೆಯಲ್ಲಿ ಅರ್ಜಿ ಹಾಕುವುದಕ್ಕೆ ಯಾವುದೇ ಮಿತಿ ಕೊಡಲಾಗಿಲ್ಲ ಆದರೂ ಸಕಾರಣಬದ್ದ ಅವದಿಯಲ್ಲಿ ಹಾಕಬೇಕು ಎಂಬ ವಾದವನ್ನು ಒಪ್ಪಿದರೂ, ಇದು ವಿಶೇಷ ಕಾಯ್ದೆ, ತುಳಿತಕ್ಕೆ ಒಳಗಾದ ವರ್ಗಗಳು ಕಳೆದುಕೊಳ್ಳುತ್ತಿರುವ ಜಮೀನನ್ನು ಮರಳಿಸಲು ರಚಿತವಾದ ಕಾಯ್ದೆ ಆಗಿದ್ದು, ಸಕಾರಣಬದ್ದ ಅವದಿಯಲ್ಲಿ ಅರ್ಜಿ ಹಾಕಲಾಗಿಲ್ಲ ಎಂಬ ಒಂದೇ ಕಾರಣದಿ ವಜಾ ಮಾಡಲಾಗದು ಎಂದು ಕಾರಣ ನೀಡಿದ್ದಾರೆ.[2] (ಬೆಂಗಳೂರು - ರಿಟ್.ಅರ್ಜಿ.ನಂ. 41841/2002- ದಿ. 30-09-2008)

ಕರ್ನಾಟಕ ಹೈಕೋರ್ಟ್ ಬೆಂಗಳೂರು, ಪ್ರಕರಣವೊಂದರಲ್ಲಿ 1979 ರಲ್ಲಿ ಗ್ರಾಂಟ್ ಆಗಿರುತ್ತದೆ. ಮೊದಲ ಕ್ರಯ 1994 ರಲ್ಲಿ ಆಗಿರುತ್ತದೆ. 2001

---

[1] ಮಂಜುನಾಥ್ ವಿ. ಮಾಡೆಲ್ ಫಾರ್ಮ್ - 2019 (1) ಕರ್.ಎಲ್.ಜೆ 525

[2] ಪಾರ್ವತಮ್ಮ ವಿ. ವಿಶೇಷ ಜಿಲ್ಲಾಧಿಕಾರಿಗಳು - 2009(2) ಕರ್.ಎಲ್.ಜೆ 729

ರಲ್ಲಿ ಗ್ರಾಂಟಿ ಅರ್ಜಿ ಹಾಕುತ್ತಾರೆ. ಇದರಲ್ಲಿ ಏಳು ವರ್ಷ ವಿಳಂಬವಾಗಿ ಅರ್ಜಿ ಹಾಕಲಾಗಿರುತ್ತದೆ. ಇದರಲ್ಲಿ ಸುಪ್ರೀಮ್ ಕೋರ್ಟಿನ ಸತ್ಯನ್ ಪ್ರಕರಣ (ಎ.ಐ.ಆರ್ 2019 ಎಸ್.ಸಿ 2797) ಉಲ್ಲೇಕಿಸಿ ಅಲ್ಲಿ 8 ವರ್ಷಗಳ ವಿಳಂಬವನ್ನು ಸಕಾರಣವಿಳಂಬ ಎಂದು ಪರಿಗಣಿಸಲಾಗಿದೆ ಎಂಬ ತತ್ವದಲ್ಲಿ ಕಾಯ್ದೆ ಜಾರಿಯಾದ ನಂತರ ಕ್ರಯಕ್ಕೆ ಅನುಮತಿ ಪಡೆದಿಲ್ಲಾ ಎಂದು ಗ್ರಾಂಟಿ ಪರವಾಗಿ ಆದೇಶವಾಗಿರುತ್ತದೆ.[1] (ಬೆಂಗಳೂರು – ರಿಟ್.ಅರ್ಜಿ.ನಂ. 65139/2016– ದಿ. 23–08–2019)

**ಸಕಾರಣವನ್ನು ತೋರಿ ವಿಳಂಬವನ್ನು ವಿವರಿಸಬೇಕು**

ಕರ್ನಾಟಕ ಹೈಕೋರ್ಟ್ ದ್ವಿಸದಸ್ಯ ಪೀಠದ ಮುಂದೆ ಬಂದ ಪ್ರಕರಣದಲ್ಲಿ ಕಾಲಮಿತಿಯಲ್ಲಿ ಅರ್ಜಿ ಸಲ್ಲಿಸಿಲ್ಲ ಎಂಬ ವಿಷಯಕ್ಕೆ ಸಂಬಂದಿಸಿದಂತೆ, ಪ್ರತಿಯೊಂದು ಪ್ರಕರಣದಲ್ಲೂ ವಿಳಂಬಕ್ಕೆ ಅದರದ್ದೇ ಆದ ಕಾರಣ ಇರುತ್ತದೆ, ಅದಕ್ಕೆ ಸಕಾರಣವನ್ನು ತೋರಿ ವಿಳಂಬವನ್ನು ವಿವರಿಸಬಹುದಾಗಿರುತ್ತದೆ, ಉದಾಹರಣೆಗೆ 1975 ರಲ್ಲಿ ಗ್ರಾಂಟ್ ಆಗಿರುತ್ತೆ, 1980 ರಲ್ಲಿ ಗ್ರಾಂಟಿ ಮಾರಿ ಸತ್ತು ಹೋಗುತ್ತಾನೆ, ಆತನಿಗೆ ಮೈನರ್ ಮಗ ಇರುತ್ತಾನೆ, 20 ವರ್ಷದ ನಂತರ ಆತ ಅರ್ಜಿ ಸಲ್ಲಿಸಿದ್ದರೆ ಅದಕ್ಕೆ ಸಕಾರಣ ಇರುತ್ತದೆ, ಹಲವು ಪ್ರಕರಣಗಳಲ್ಲಿ 20 ವರ್ಷ ವಿಳಂಬ ಮನ್ನಿಸಲಾಗಿದೆ, ಗ್ರಾಂಟಿಗೆ ವಿಳಂಬಕ್ಕೆ ಕಾರಣವನ್ನು ವಿವರಿಸುವಂತೆ ಆವಕಾಶ ಕೊಡಬೇಕು, ಅಂತಹ ಪ್ರಮಾಣಪತ್ರ ಮತ್ತು ಸಾಕ್ಷ್ಯವನ್ನು ಕೆಳ ನ್ಯಾಯಾಲಯ ಪರಿಶೀಲಿಸಬೇಕಿರುತ್ತದೆ.[2] (ಬೆಂಗಳೂರು – ರಿಟ್.ಅಪೀಲು.ನಂ. 503/2016 ಮತ್ತು ಇತರೆ – ದಿ. 08–07–2019)

ಇತ್ತೀಚೆಗೆ ಸಕಾರಣಬದ್ಧ ಕಾಲಾವದಿಯಲ್ಲಿ ಹಾಕಲಾಗಿಲ್ಲ ಎಂದು ಅತೀ ಹೆಚ್ಚು ಪ್ರಕರಣಗಳು ವಜಾ ಆಗುತ್ತಿರುವುದಕ್ಕೆ ತೀರ್ಪಿನ ಉಲ್ಲೇಕಿತ ಮೂಲ ಚೆಡ್ಡಿ ಲಾಲ್ ಯಾದವ್ ವಿ. ಹರಿಕಿಶೋರ್ ಯಾದವ್ ಪ್ರಕರಣ,[3]

---

[1] ಭಾಗ್ಯಮ್ಮ ವಿ. ಜಿಲ್ಲಾಧಿಕಾರಿಗಳು – ಮನು/ಕೆ.ಎ/6459/2019 (w.p. 65139/2016)

[2] ಕಮಲ ವಿ. ಕರ್ನಾಟಕ ರಾಜ್ಯ – ಮನು/ ಕೆ.ಎ/ 4691/ 2019

[3] 2018 (12) ಎಸ್.ಸ್.ಸಿ 527

ಇದರಲ್ಲಿಯೂ ಪ್ಯಾರಾ 7 ರಲ್ಲಿ ಹೀಗೆ ಹೇಳಿದ್ದಾರೆ, "ಮೇಲ್ಮನವಿದಾರರ ಕಡೆಯಿಂದ ಅತಿಯಾದ, ವಿವರಿಸಲಾಗದಿರುವ ಮತ್ತು ನ್ಯಾಯಸಮ್ಮತವಲ್ಲದ ವಿಳಂಬವಿದೆ ಎಂದು ನಾವು ಕಂಡುಕೊಂಡಿದ್ದೇವೆ, ಅಂತಹ ಹಕ್ಕು ತಮಗೆ ದೊರೆತಿದೆ ಎಂದು ಹೇಳಲಾದ 24 ವರ್ಷಗಳ ನಂತರ ಭೂಮಿಯನ್ನು ಪುನಃಸ್ಥಾಪಿಸಲು ಅರ್ಜಿ ಸಲ್ಲಿಸುವುದು ಮತ್ತು ಆ ನಂತರ ಒಂದು ಡೀಫಾಲ್ಟ್ ವಿಷಯವನ್ನು ವಜಾಗೊಳಿಸಿದಾಗ 16 ವರ್ಷಗಳ ನಂತರ ಪುನಃಸ್ಥಾಪನೆಗಾಗಿ ಅರ್ಜಿ ಸಲ್ಲಿಸಿದ್ದಾರೆ." ಅಂದರೆ ವಿವರಿಸಿರುವ ನ್ಯಾಯಸಮ್ಮತವಾದ ಸಕಾರಣಬದ್ದ ವಿಳಂಬವನ್ನು ನೀಡಿದ್ದರೆ ಅದನ್ನು ಪರಿಗಣಿಸಬಹುದು. ಈ ಪ್ರಕರಣವು ಬಿಹಾರ ರಾಜ್ಯದಲ್ಲಿ 1939 ರಿಂದ 1950 ರವರೆಗೆ ಬಾಡಿಗೆ ಬಾಕಿಗಾಗಿ ಹೊರಹಾಕಲ್ಪಟ್ಟ ವ್ಯವಸಾಯಗಾರ ರೈತರಿಗೆ ಜಮೀನನ್ನು ವಾಪಸ್ ಕೊಡಿಸುವ ಕಾಯ್ದೆ 1951 ರಲ್ಲಿ ಜಾರಿ ಮಾಡಲಾಗಿತ್ತು, ಅಲ್ಲಿ ಇಂತಹ ವಿಳಂಬವಾದ ಬಗ್ಗೆ ಅರ್ಜಿಯನ್ನು ಪುರಸ್ಕರಿಸಲು ಸುಪ್ರೀಮ್ ಕೋರ್ಟ್ ತಿರಸ್ಕರಿಸಿ ತೀರ್ಪಿತ್ತಿದೆ. ಸದರಿ ಕೇಸ್ನಲ್ಲಿ 1975 ರಲ್ಲಿ ಮೊದಲ ಬಾರಿಗೆ ಅರ್ಜಿ ಹಾಕಲಾಗುತ್ತೆ, ಮೊದಲ ಕೋರ್ಟ್ ಅರ್ಜಿ ಪುರಸ್ಕರಿಸಿರುತ್ತೆ, ನಂತರ ರಿಮ್ಯಾಂಡ್ ಆಗಿರುತ್ತೆ, ನಂತರ 1980 ರಲ್ಲಿ ಡೀಫಾಲ್ಟ್ ಗೆ ವಜಾ ಆಗಿರುತ್ತದೆ ಮತ್ತೆ ರಿಸ್ಟೋರ್ ಆಗಿರುತ್ತದೆ, ಮತ್ತೆ 1983 ರಲ್ಲಿ ಡೀಫಾಲ್ಟ್ ಗೆ ವಜಾ ಅಗುತ್ತದೆ. 16 ವರ್ಷದ ನಂತರ ರಿಸ್ಟೋರ್ ಗೆ ಅರ್ಜಿ ಸಲ್ಲಿಸಲಾಗುತ್ತೆ, ಇಂತಹ ಹಿನ್ನೆಲೆಯಲ್ಲಿ ಪ್ರಕರಣದಲ್ಲಿ ತೀರ್ಪು ಹೊರಬಂದಿದೆ.

ಈ ಮೇಲಿನ ಚೆಡ್ಡಿಲಾಲ್ ಪ್ರಕರಣದಲ್ಲಿ ಆಂಧ್ರದ ಜಾಯಿಂಟ್ ಕಲೆಕ್ಟರ್ ರಂಗಾರೆಡ್ಡಿ ವಿ. ನರಸಿಂಗರಾವ್ ಸುಪ್ರೀಮ್ ಕೋರ್ಟ್ ಪ್ರಕರಣವನ್ನು[1] ಉಲ್ಲೇಕಿಸಿ ಸಮರ್ಥಿಸಲಾಗುತ್ತದೆ, ಈ ಪ್ರಕರಣದಲ್ಲಿ ಕಂದಾಯ ದಾಖಲೆಯ ನಮೂದುಗಳನ್ನು ಕಂದಾಯ ಮಂಡಳಿ ತಾನಾಗಿಯೇ (ಸ್ಯೂ ಮೋಟೋ) ಪುನರ್ ವಿಮರ್ಶಾ ಅಧಿಕಾರವನ್ನು ಉಪಯೋಗಿಸಿ ಐದು ದಶಕಗಳ ನಂತರ ತಿದ್ದುಪಡಿ ಮಾಡಬಹುದೇ ಎಂಬ ಪ್ರಶ್ನೆ ಉದ್ಭವಿಸುತ್ತದೆ, ಕಾಯ್ದೆಯಲ್ಲಿ ಅಂತಹ

[1] ಎ.ಐ.ಆರ್ 2015 ಎಸ್.ಸಿ 1021

ಅಧಿಕಾರ ಉಪಯೋಗಕ್ಕೆ ಯಾವುದೇ ಕಾಲಮಿತಿಯನ್ನು ಸೂಚಿಸಿರುವುದಿಲ್ಲ. ಅದನ್ನು ಐದು ದಶಕಗಳ ನಂತರ ತಾನಾಗಿಯೇ ಪುನರ್ ವಿಮರ್ಶಾ ಅಧಿಕಾರವನ್ನು ಉಪಯೋಗಿಸಿ ಸರಿಪಡಿಸಲು ಮುಂದಾದರೆ, "ಸ್ಥಿರ ಸ್ವತ್ತುಗಳ ಮೇಲೆ ಪಾರ್ಟಿಗಳ ಹಕ್ಕುಗಳನ್ನು ಗಂಭೀರವಾಗಿ ಪರಿಣಾಮ ಬೀರುವ ಅನಿಶ್ಚಿತತೆ ಮತ್ತು ತೊಡಕುಗಳಿಗೆ ಕಾರಣವಾಗುವ ಅಸಂಬದ್ದ ಸ್ಥಿತಿಗೆ ಕಾರಣವಾಗುತ್ತದೆ" ಎಂದಿದೆ. ನಮೂದುಗಳು ಮೋಸದಿಂದ ಮಾಡಲಾಗಿದೆ ಎಂಬ ವಾದಕ್ಕೆ ಉತ್ತರಿಸಿರುವ ಕೋರ್ಟ್, ಪ್ರಶ್ನಿತ ನೋಟೀಸಿನಲ್ಲಿ ರಾಜ್ಯವು ಯಾವಾಗ ಮೋಸ ನಡೆದಿರುವುದು ಪತ್ತೆಹಚ್ಚಿದೆ ಎಂಬ ಉಲ್ಲೇಕವಿಲ್ಲ, ವಿಳಂಬಕ್ಕೆ ಕಾರಣವನ್ನು ವಿವರಿಸಿಲ್ಲ ಎಂದು ಸಕಾರಣಬದ್ದವಲ್ಲದ ವಿಳಂಬವನ್ನು ತಿರಸ್ಕರಿಸಿದೆ.

ಈ ಮೇಲ್ಕಂಡ ಪ್ರಕರಣದಲ್ಲಿ ಉಭಯ ಪಾರ್ಟಿಗಳು ಉಲ್ಲೇಕಿಸಿರುವ ಹಲವಾರು ಸುಪ್ರೀಮ್ ಪ್ರಕರಣಗಳನ್ನು ಮಾನ್ಯ ನ್ಯಾಯಾಲಯ ಉಲ್ಲೇಕಿಸಿದೆ,

1. ಮಹಾರಾಷ್ಟ್ರ ಲ್ಯಾಂಡ್ ಸೀಲಿಂಗ್ ವಿವಾದಕ್ಕೆ ಸಂಬಂಧಿಸಿದ್ದಾಗಿದ್ದು, ತಾನಾಗಿಯೇ ಪುನರ್ ವಿಮರ್ಶಾ ಅಧಿಕಾರವನ್ನು ಮೂರು ವರ್ಷದ ಮೇಲೆ ಮಾಡಲಾಗದು ಆದರೆ ಎಲ್ಲಿ ಮೂಲಭೂತ ವಾಸ್ತವಿಕತೆಯನ್ನು ಮುಚ್ಚಿಹಾಕಲಾಗಿರುತ್ತದೋ, ಅಘೋಷಿತ ವ್ಯವಸಾಯ ಜಮೀನು ಇರುವ ಬಗ್ಗೆ ಉನ್ನತ ಅಧಿಕಾರಿಗಳಿಗೆ ಬಹಳ ಸಮಯದ ನಂತರ ಗೊತ್ತಾಗಿರುತ್ತದೆ, ಅಂತಹ ಕಾಲಮಿತಿ ಅವಧಿ ಮೋಸ ಅಥವ ಮುಚ್ಚಿಹಾಕಿರುವಿಕೆಯು ಗೊತ್ತಾದ ತಾರೀಖಿನಿಂದ ಪ್ರಾರಂಬವಾಗುತ್ತದೆ ಎಂದಿದೆ.[1]

2. ಆಂಧ್ರ ರಾಜ್ಯದ ಭೂ ಹಂಚಿಕೆಯಾದ ಜಮೀನುಗಳಲ್ಲಿನ ಅಕ್ರಮಗಳ ಬಗ್ಗೆ ತಾನಾಗಿಯೇ ಕ್ರಮ ಜರುಗಿಸುವ ವಿಚಾರಕ್ಕೆ ಯಾವುದು ಸಕಾರಣಬದ್ದ ಅವಧಿ ಎಂಬುದು ಪ್ರತಿಯೊಂದು ಕೇಸಿನ ವಾಸ್ತವಿಕ ವೃತ್ತಾಂತದಲ್ಲಿ ನೋಡಬೇಕಿರುತ್ತದೆ, 30 ವರ್ಷದ ನಂತರ ತೆಗೆದುಕೊಂಡ ಕ್ರಮದ ಬಗ್ಗೆ ಪರಿಶೀಲಿಸಲು ಹೈಕೋರ್ಟ್ ಗೆ ರಿಮ್ಯಾಂಡ್ ಆಗಿರುತ್ತದೆ.[2]

---

[1] ಮಹಾರಾಷ್ಟ್ರ ರಾಜ್ಯ ವಿ. ರತನ್ಲಾಲ್ – 1993 (3) ಎಸ್.ಸಿ.ಸಿ 326

[2] ಕಲೆಕ್ಟರ್ ವಿ. ಮಂಗಮ್ಮ – 2003 (4) ಎಸ್.ಸಿ.ಸಿ 488

3. ಒರಿಸ್ಸಾ ಎಸ್ಟೇಟ್ ಅಬಾಲಿಷನ್ ಕಾಯ್ದೆ ಅಡಿಯಲ್ಲಿ ಪುನರ್ ವಿಮರ್ಶೆ ಅಧಿಕಾರದ ಬಗ್ಗೆ ಸುಪ್ರೀಮ್ ಕೋರ್ಟ್ ತೀರ್ಪು ನೀಡುವಾಗ್ಗೆ 27 ವರ್ಷಗಳ ನಂತರ ಬೋರ್ಡ್ ಆಫ್ ರೆವಿನ್ಯೂ ರವರು ಪಟ್ಟಾ ಗ್ರಾಂಟ್ ಆದ ಬಗ್ಗೆ ಅದರ ಸತ್ಯಾಸತ್ಯತೆ ಮತ್ತು ಸರಿಯಾಗಿರುವುದು ಅನುಮಾನಾಸ್ಪದ ವೈಶಿಷ್ಟ್ಯಗಳಿಂದ ಮುಚ್ಚಲ್ಪಟ್ಟಿದೆ ಎಂದು ಪುನರ್ ವಿಮರ್ಶೆ ಅಧಿಕಾರ ಚಲಾಯಿಸಿರುವುದು ಸಿಂಧುವಾಗಿದೆ ಮತ್ತು ಕಾನೂನುಬದ್ಧವಾಗಿದೆ ಎಂದು ತೀರ್ಪು ನೀಡಿದೆ.[1]

4. ಆಂಧ್ರ ಪ್ರದೇಶ ಟೆನೆನ್ಸಿ ಮತ್ತು ವ್ಯವಸಾಯ ಜಮೀನು ಕಾಯ್ದೆ ಕಲಂ 50ಬಿ ಅಡಿಯಲ್ಲಿ ಪುನರ್ ಪರಿಶೀಲನೆ ಅಧಿಕಾರನ್ನು ನೀಡಲಾಗಿದೆ, ಕಾಯ್ದೆಯು ಅಂತಹ ಅಧಿಕಾರವನ್ನು ಇಂತಿಷ್ಟೇ ಅವಧಿಯಲ್ಲಿ ಚಲಾಯಿಸಬೇಕು ಎಂದು ಹೇಳಿಲ್ಲ, ಆದರೆ ಸೆಕ್ಷನ್ ನಲ್ಲಿ "ಅಟ್ ಎನಿ ಟೈಮ್" (ಯಾವ ವೇಳೆಯಲ್ಲಾದರೂ) ಎಂದು ಪ್ರಾರಂಬವಾಗುತ್ತದೆ ಈ ಬಗ್ಗೆ ವ್ಯಾಖ್ಯಾನಿಸಿರುವ ಸುಪ್ರೀಮ್ ಕೋರ್ಟ್ ಯಾವಾಗ ಕಾಲಮಿತಿ ಪ್ರಾರಂಬವಾಗಬೇಕು ಮತ್ತು ಎಸ್ಟು ಅವಧಿಯಲ್ಲಿ ಚಲಾಯಿಸಬೇಕು ಎಂದು ನೀಡದೆ ಆಗಿರುವ ಕಾನೂನು ಮೋಸ ನಡೆದಿರುವಾಗ ಪ್ರತಿಯೊಂದು ಪ್ರಕರಣದ ವಾಸ್ತವಿಕತೆಯಂತೆ ಯಾವಗ ಮೋಸ ಕಂಡುಹಿಡಿಯಲಾಯಿತು ಅಲ್ಲಿಂದ ಸಕಾರಣಬದ್ಧ ಅವಧಿಯಲ್ಲಿ ಪ್ರಾರಂಬಿಸಲಾಯಿತು ಎನ್ನುವುದು ಮುಖ್ಯವಾಗುತ್ತದೆ. ಮೋಸದ ಬಗ್ಗೆ ಅವಶ್ಯ ಮತ್ತು ಸಾಕಷ್ಟು ವಿವರಗಳು ಪ್ಲೀಡ್ ಮಾಡಿಲ್ಲವಾದರೆ, ಯಾವ ತಾರೀಖಿನಲ್ಲಿ ಮೋಸ ಪತ್ತೆಯಾಯಿತು ಎಂಬುದು ಇಲ್ಲವಾದರೆ, ಅಂತಹ ಮೋಸದ ಬಗ್ಗೆ ನೋಡಲಾಗದು/ಪರಿಶೀಲಿಸಲಾಗದು ಎಂದು ಹೇಳಿದೆ.[2]

5. ಬಾಂಬೆ ಕಂದಾಯ ಕಾಯ್ದೆಯಲ್ಲಿ (1879) ಕೆಳ ಅಧಿಕಾರಿಗಳ ಆದೇಶ ಸಕ್ರಮವಾಗಿದೆಯೆ ಎಂದು ಪುನರ್ ವಿಮರ್ಶಿಸುವ ಹಕ್ಕನ್ನು ಮೇಲಧಿಕಾರಿಗಳಿಗೆ ನೀಡಲಾಗಿದೆ, ಅಂತಹ ಅಧಿಕಾರ ಇಷ್ಟೇ ಅವದಿಯಲ್ಲಿ

---

[1] ಒರಿಸ್ಸಾ ರಾಜ್ಯ ವಿ. ಬೃಂದಬಾನ್ – 1995 (3) ಎಸ್.ಸಿ.ಸಿ 249

[2] ಇಬ್ರಾಹಿಮುಪಟ್ಟನಮ್ ವಿ. ಸುರೇಶ್ ರೆಡ್ಡಿ – 2007 (7) ಎಸ್.ಸಿ.ಸಿ 667

ಚಲಾಯಿಸಬೇಕು ಎಂದು ಇಲ್ಲ, ಅದೇ ಕಾಯ್ದೆಯಲ್ಲಿ ಭೂ ಪರಿವರ್ತನೆಯನ್ನು ನೀಡಲು ಮೂರು ತಿಂಗಳು ಕಾಲಾವದಿಯನ್ನು ನೀಡಲಾಗಿದೆ, ಅಂತಹ ಆದೇಶ ಪುನರ್ ವಿಮರ್ಶಿಸಲು ಮೇಲಧಿಕಾರಿ 9 ತಿಂಗಳು ನಂತರ ತಾನಾಗಿಯೇ ಪ್ರಕರಣವನ್ನು ದಾಖಲಿಸಿರುವುದು ಸಕಾರಣಬದ್ದ ಅವದಿಯಲ್ಲಿ ಇಲ್ಲ ಎಂದು ತೀರ್ಪಿತ್ತಿದೆ ಸುಪ್ರೀಮ್ ಕೋರ್ಟ್.[1]

6. ವ್ಯವಸಾಯಗಾರನಲ್ಲದವನು ವ್ಯವಸಾಯ ಜಮೀನು ಖರೀದಿಸಿದ್ದಾನೆ ಕಾನೂನು ಉಲ್ಲಂಘನೆ ಆಗಿದೆ ಎಂದು ಖಾತೆ ಆದ ಮೇಲೆ 3 ವರ್ಷದ ನಂತರ ಪ್ರಕರಣವನ್ನು ಬಾಂಬೆ ಟೆನೆನ್ಸಿ ಮತ್ತು ವ್ಯವಸಾಯ ಜಮೀನು ಕಾಯ್ದೆ ಅಡಿಯಲ್ಲಿ ಹೂಡಲಾಗುತ್ತದೆ. ಅದು ಸಕಾರಣಬದ್ದ ಅವದಿಯಲ್ಲಿ ಹೂಡಲಾಗಿಲ್ಲ ಎಂದು ತೀರ್ಪು ಸುಪ್ರೀಮ್ ಕೋರ್ಟ್ ನಿಂದ ಹೊರಬರುತ್ತದೆ.[2]

7. ಮಹಾರಾಷ್ಟ್ರ ಕಂದಾಯ ಕಾಯ್ದೆ ಕಲಂ 257 ರಲ್ಲಿ (1966) ಪುನರ್ ಪರಿಶೀಲನೆ ಅಧಿಕಾರನ್ನು ನೀಡಲಾಗಿದೆ, ಕಾಯ್ದೆಯು ಅಂತಹ ಅಧಿಕಾರವನ್ನು ಇಂತಿಷ್ಟೇ ಅವಧಿಯಲ್ಲಿ ಚಲಾಯಿಸಬೇಕು ಎಂದು ಹೇಳಿಲ್ಲ, ಆದರೂ ಸಕಾರಣಬದ್ದ ಅವಧಿಯಲ್ಲಿ ಚಲಾಯಿಸಬೇಕು, ಸಾಮಾನ್ಯವಾಗಿ 3 ವರ್ಷದಲ್ಲಿ ಅಂತಹ ಅಧಿಕಾರ ಚಲಾಯಿಸಬೇಕು 17 ವರ್ಷದ ನಂತರ ಚಲಾಯಿಸಿರುವುದು ಕಾನೂನು ರೀತ್ಯ ಸರಿಯಲ್ಲ ಎನ್ನುತ್ತದೆ ಸುಪ್ರೀಮ್ ಕೋರ್ಟ್.[3]

8. ಪಂಜಾಬ್ ಸೇಲ್ಸ್ ಟ್ಯಾಕ್ಸ್ ಕಾಯ್ದೆ ವಿಚಾರವಾಗ್ಯೂ ಪುನರ್ ಪರಿಶೀಲನೆ ಅಧಿಕಾರನ್ನು ನೀಡಲಾಗಿದೆ, ಕಾಯ್ದೆಯು ಅಂತಹ ಅಧಿಕಾರವನ್ನು ಇಂತಿಷ್ಟೇ ಅವಧಿಯಲ್ಲಿ ಚಲಾಯಿಸಬೇಕು ಎಂದು ಹೇಳಿಲ್ಲ, 3 ವರ್ಷದಲ್ಲಿ ಚಲಾಯಿಸಬೇಕು ಗರಿಷ್ಟ 5 ವರ್ಷ ದಾಟಬರದು ಎಂದು ಸುಪ್ರೀಮ್ ಕೋರ್ಟ್ ಹೇಳಿದೆ.[4]

---

[1] ಗುಜರಾತ್ ರಾಜ್ಯ ವಿ. ಪಾಟೀಲ್ – 1969 (2) ಎಸ್.ಸಿ.ಸಿ 187

[2] ಮೊಹಮ್ಮದ್ ವಿ. ಫಾತ್ಮಾಬಾಯ್ – 1997 (6) ಎಸ್.ಸಿ.ಸಿ 71

[3] ಸಂತೋಷ್ ಕುಮಾರ್ ವಿ. ಬಾಳಸಾಹೇಬ್ – 2009 (9) ಎಸ್.ಸಿ.ಸಿ 352

[4] ಪಂಜಾಬ್ ರಾಜ್ಯ ವಿ. ಭಟಿಂಡ – 2007 (11) ಎಸ್.ಸಿ.ಸಿ 363

9. ಅರ್ಬನ್ ಲ್ಯಾಂಡ್ ಸೀಲಿಂಗ್ ಕಾಯ್ದೆ 1976 ಅನ್ವಯ ಸಕ್ಷಮ್ ಪ್ರಾಧಿಕಾರದ ಆದೇಶವನ್ನು ಪುನರ್ ಪರಿಶೀಲನೆ ಅಧಿಕಾರನ್ನು ರಾಜ್ಯ ಸರ್ಕಾರಕ್ಕೆ ನೀಡಲಾಗಿದೆ, ಕಾಯ್ದೆಯು ಅಂತಹ ಅಧಿಕಾರವನ್ನು ಇಂತಿಷ್ಟೇ ಅವಧಿಯಲ್ಲಿ ಚಲಾಯಿಸಬೇಕು ಎಂದು ಹೇಳಿಲ್ಲ, ಈ ಪ್ರಕರಣದಲ್ಲಿ 1979 ರಲ್ಲಿ ಅರ್ಬನ್ ಲ್ಯಾಂಡ್ ಸೀಲಿಂಗ್ ಕಾಯ್ದೆ ಭೂಸ್ವಾಧೀನವನ್ನು ಮಾಡಿಕೊಳ್ಳಲಾಗುತ್ತದೆ, ಈ ಕಾಯ್ದೆ ಅನ್ವಯ ಆಗುವಾಗ ಸದರಿ ಜಮೀನು ಅರ್ಬನ್ ವ್ಯಾಪ್ತಿಯಲ್ಲಿ ಇರುವುದಿಲ್ಲ, ಆದರೆ 1979 ರಲ್ಲಿ ಮುನಿಸಿಪಲ್ ಅರ್ಬನ್ ವ್ಯಾಪ್ತಿಯನ್ನು ವಿಸ್ತರಿಸಿ ಭೂಸ್ವಾಧೀನ ಮಾಡಿಕೊಳ್ಳಲಾಗಿರುತ್ತದೆ. ಸ್ವಾಧೀನವೂ ಪಡೆಯಲಾಗಿರುತ್ತದೆ. ಭೂಸ್ವಾಧೀನವನ್ನು ಮಾಲೀಕರು ಪ್ರಶ್ನಿಸಿರುವುದಿಲ್ಲ. ಆದರೆ 1998 ರಲ್ಲಿ ಸುಪ್ರೀಮ್ ತೀರ್ಪೊಂದರಲ್ಲಿ ಈ ಬಗ್ಗೆ ವ್ಯಾಪ್ತಿಯಲ್ಲಿ ಇಲ್ಲದ ಆಸ್ತಿ ಸ್ವಾಧೀನ ತಪ್ಪು ಎಂದು ತೀರ್ಪು ಆದ ಬಳಿಕ, ಮಾಲೀಕರು ಪುನರ್ ಪರಿಶೀಲನಾ ಅರ್ಜಿಯನ್ನು ಸರ್ಕಾರಕ್ಕೆ ಸಲ್ಲಿಸುತ್ತಾರೆ. ಹಾಗೆ ಸಲ್ಲಿಸಿದ ಅರ್ಜಿಯನ್ನು ಪುರಸ್ಕರಿಸುವುದು ತಪ್ಪು ಎನ್ನುತ್ತ ಸುಪ್ರೀಮ್ ಕೋರ್ಟ್ "ಇದರ ಅರ್ಥವೇನೆಂದರೆ, ಕಾಯ್ದೆಯಡಿ ಜಾರಿಗೆ ಬಂದ ಆದೇಶಗಳನ್ನು ಅನಿರ್ದಿಷ್ಟ ಅವಧಿಯವರೆಗೆ ಬದಲಾವಣೆಗೆ ಮುಕ್ತವಾಗಿ ಬಿಡಲು ಶಾಸಕಾಂಗವು ಉದ್ದೇಶಿಸಿದೆ ಎಂದಲ್ಲ, ಏಕೆಂದರೆ ಸ್ವಾಧೀನ ಹೊಂದಿರುವವರು / ಹಂಚಿಕೆದಾರರು ಮಾಲೀಕತ್ವವನ್ನು ಶಾಶ್ವತವಾಗಿ ಅನಿಶ್ಚಿತ ಮತ್ತು ಶಾಶ್ವತ ಅನಿಶ್ಚಿತತೆಯ ಸ್ಥಿತಿಯಲ್ಲಿ ಹೊಂದುವ ಪರಿಣಾಮವನ್ನು ಹೊಂದಿರುತ್ತದೆ. ಕಾಯ್ದೆಯಲ್ಲಿ "ಅಟ್ ಎನಿ ಟೈಮ್" ಎಂದು ಕೂಡ ಇಲ್ಲ, ಸಕಾರಣಬದ್ದ ಅವದಿಯಲ್ಲಿ ಮಾತ್ರ ಅಂತಹ ಅಧಿಕಾರ ಚಲಾಯಿಸಬೇಕು ಎಂದಿದೆ.[1]

10. ವಿಶೇಷ ಸಂಧರ್ಬಗಳ ಅನುಪಸ್ಥಿತಿಯಲ್ಲಿ 15 ವರ್ಷ ವಿಳಂಬವಾಗಿ ತಾನಾಗಿಯೇ (ಸ್ಯೂಮೋಟೋ) ಪುನರ್ ಪರಿಶೀಲನೆ ಅಧಿಕಾರನ್ನು ಚಲಾಯಿಸಲು ಬರುವುದಿಲ್ಲ ಎಂದಿದೆ ಸುಪ್ರೀಮ್ ಕೋರ್ಟ್.[2]

---

[1] ಸುಲೋಚನ ವಿ. ಪೂನ ಮುನಿಸಿಪಲ್ – ಎ.ಐ.ಆರ್ 2010 ಎಸ್.ಸಿ 2962

[2] ಹಿ.ಪ್ರ. ರಾಜ್ಯ – ರಾಜ್ ಕುಮಾರ್ – 2004 (10) ಎಸ್.ಸಿ.ಸಿ 585

11. ತಡವಾದ ಮತ್ತು ಹಳೆಯ ಹಕ್ಕಿನ ಬಗ್ಗೆ ನ್ಯಾಯಾಲಯವು ವಿಚಾರಿಸಬಾರದು ಎಂದು ಹೇಳುವ ನಿಯಮವು ಕಾನೂನಿನ ನಿಯಮವಲ್ಲ ಆದರೆ ಉತ್ತಮ ಮತ್ತು ಸರಿಯಾದ ವಿವೇಚನೆಯ ಆಧಾರದ ಮೇಲೆ ಅಭ್ಯಾಸದ ನಿಯಮವಾಗಿದೆ. ಪ್ರತಿಯೊಂದು ಪ್ರಕರಣವೂ ತನ್ನದೇ ಆದ ವಾಸ್ತವಿಕತೆಯನ್ನು ಅವಲಂಬಿಸಿರಬೇಕು. ಇದು ಮೂಲಭೂತ ಹಕ್ಕಿನ ಉಲ್ಲಂಘನೆ ಮತ್ತು ಕೇಳಲಾದ ಪರಿಹಾರ ಯಾವುದು ಮತ್ತು ಎಷ್ಟು ವಿಳಂಬ ಉಂಟಾಯಿತು ಎಂಬುದರ ಮೇಲೆ ಅವಲಂಬಿತವಾಗಿರುತ್ತದೆ. ಅರ್ಜಿಯನ್ನು ಸಲ್ಲಿಸುವಲ್ಲಿ ವಿಳಂಬದ ಕಾರಣ ಇತರರಿಗೆ ದೊರೆತ ಹಕ್ಕುಗಳನ್ನು ಸಮಂಜಸವಾದ ವಿವರಣೆಯಿಲ್ಲದಿದ್ದರೆ ತೊಂದರೆಗೊಳಗಾಗಲು ಅನುಮತಿಸಬಾರದು ಎಂಬುದು ಪಾರ್ಟಿಗಳಿಗೆ ಪರಿಹಾರವನ್ನು ನಿರಾಕರಿಸಲಾಗಿದೆ. ತಡವಾಗಿ. ಅಂತಹ ಪ್ರಕರಣಗಳಲ್ಲಿ ವಿಳಂಬವನ್ನು ನಿರ್ಧರಿಸುವ ನಿಜವಾದ ಪರೀಕ್ಷೆಯೆಂದರೆ, ಸಮಾನಾಂತರ ಹಕ್ಕನ್ನು ರಚಿಸುವ ಮೊದಲು ಅರ್ಜಿದಾರರು ರಿಟ್ ನ್ಯಾಯಾಲಯಕ್ಕೆ ಬರಬೇಕು ಮತ್ತು ಸಮಯದ ವಿಳಂಬವು ಯಾವುದೇ ಕರ್ತವ್ಯಲೋಪಕ್ಕೆ ಅಥವಾ ನಿರ್ಲಕ್ಷ್ಯಕ್ಕೆ ಕಾರಣವಾಗಿರಬಾರದು. ಪರೀಕ್ಷೆಯು ಸಮಯದ ಭೌತಿಕ ಓಡುವಿಕೆಯಲ್ಲಿಲ್ಲ. ನಡವಳಿಕೆಯನ್ನು ಸಮರ್ಥಿಸುವ ಸನ್ನಿವೇಶಗಳು ಅಸ್ತಿತ್ವದಲ್ಲಿದ್ದರೆ, ಸ್ಪಷ್ಟವಾಗಿ ಕಂಡುಬರುವ ಕಾನೂನುಬಾಹಿರತೆಯನ್ನು ಏಕೈಕ ಕರ್ತವ್ಯಲೋಪ ನೆಲೆಯಲ್ಲಿ ಉಳಿಸಿಕೊಳ್ಳಲಾಗುವುದಿಲ್ಲ.[1]

ಈ ಮೇಲಿನ ಚೆಡ್ಡಿಲಾಲ್ ಪ್ರಕರಣದಲ್ಲಿ ಇನ್ನೊಂದು ಸುಪ್ರೀಮ್ ಪ್ರಕರಣವನ್ನು[2] ಉಲ್ಲೇಕಿಸಿ ಸಾಮಾಜಿಕ ಮತ್ತು ಆರ್ಥಿಕ ನ್ಯಾಯವನ್ನು ಮಾಡುವ ಕಾಯ್ದೆಯಲ್ಲಿ ಇಂತಹ ಸಕಾರಣಬದ್ದ ವೇಳೆಯಲ್ಲಿ ಸಲ್ಲಿಸಲಾಗದ ಅರ್ಜಿಯನ್ನು ಪುರಸ್ಕರಿಸಬಾರದೂ ಎಂಬುದಕ್ಕೂ ಸುಪ್ರೀಮ್ ಹೀಗೆ ಕಾರಣ ನೀಡಿದೆ, ಇಲ್ಲಿ ಚೋಟಾ ನಾಗ್ಪುರ್ ಟೆನೆನ್ಸಿ ಕಾಯ್ದೆ ಅಡಿಯಲ್ಲಿ ಪರಿಶಿಷ್ಟ ವರ್ಗ

---

[1] ಡೆಹ್ರೀ ವಿ. ಜಿಲ್ಲಾ ಬೋರ್ಡ್ – ಎ.ಐ.ಆರ್ 1993 ಎಸ್.ಸಿ 802

[2] ಸಿತುಸಹ್ ವಿ. ಜಾರ್ಖಂಡ್ ರಾಜ್ಯ – ಎ.ಐ.ಆರ್ 2004 ಎಸ್.ಸಿ 4918

(ಬುಡಕಟ್ಟು ಜನಾಂಗ) ಕ್ಕೆ ಕಾನೂನು ಭಾಹಿರ ವರ್ಗಾವಣೆಯನ್ನು ಅನೂರ್ಜಿತಗೊಳಿಸಿ ವಾಪಸ್ ನೀಡುವ ವಿಚಾರವಾಗಿರುತ್ತದೆ. ಅಲ್ಲಿಯೂ ಅನುಮತಿ ಇಲ್ಲದೆ ವರ್ಗಾವಣೆ ನಿಷೇದವಿರುತ್ತದೆ. ಕಾಯ್ದೆಯಲ್ಲಿನ ಸೆಕ್ಷನ್ ನಲ್ಲಿ ಪ್ರಾರಂಬದಲ್ಲಿ "ಅಟ್ ಎನಿ ಟಿಮ್) (ಯಾವ ಸಮದಲ್ಲಾದರೂ) ಎಂದು ಪ್ರಾರಂಬವಾಗುತ್ತದೆ, ಕಾಲಮಿತಿ ನಿಗದಿಯಾಗಿಲ್ಲ, ಅಲ್ಲಿನ ರಾಜ್ಯಕ್ಕೆ ಸಂಬಂಧಿಸಿದಂತೆ ಲಿಮಿಟೇಷನ್ ಕಾಯ್ದೆ 1963 ಪರಿಶಿಷ್ಟ ವರ್ಗದವರ ಜಮೀನು ವಾಪಸ್ ಪಡೆಯಲು ದಾವ ಹೂಡಲು 30 ವರ್ಷ ಕಾಲಮಿತಿ ತರಲಾಗಿರುತ್ತದೆ. ಇಲ್ಲಿ 1938 ರಲ್ಲಿ ವರ್ಗಾವಣೆ ಆಗಿರುತ್ತದೆ. 1978 ರಲ್ಲಿ ಅರ್ಜಿ ಹಾಕಲಾಗಿರುತ್ತದೆ. ಕೋರ್ಟ್ ಹೀಗೆ ಹೇಳಿದೆ, "ಆದ್ದರಿಂದ, ಸೆಕ್ಷನ್ 71 ಎ ಯಲ್ಲಿ "ಯಾವುದೇ ಸಮಯದಲ್ಲಿ" ಎಂಬ ಪದಗಳ ಬಳಕೆಯು ಕಾಯ್ದೆಯ ಸಾಮಾಜಿಕ-ಆರ್ಥಿಕ ನೀತಿಯನ್ನು ಜಾರಿಗೆ ತರಲು, ಅಜ್ಞಾನ, ಅನಕ್ಷರಸ್ಥ ಮತ್ತು ಹಿಂದುಳಿದ ನಾಗರಿಕರ ಹಕ್ಕುಗಳ ಮೇಲೆ ಅತಿಕ್ರಮಣವನ್ನು ತಡೆಯಲು ಜಿಲ್ಲಾಧಿಕಾರಿಗೆ ಸಾಕಷ್ಟು ಉದಾರತೆಯನ್ನು ನೀಡುವ ಶಾಸಕಾಂಗದ ಆಶಯಕ್ಕೆ ಸಾಕ್ಷಿಯಾಗಿದೆ ಎಂಬ ಅಭಿಪ್ರಾಯ ನಮ್ಮದು. ಹೀಗಾಗಿ, ಸೆಕ್ಷನ್ 71 ಎ ಅಡಿಯಲ್ಲಿ ಜಿಲ್ಲಾಧಿಕಾರಿ ತನ್ನ ಅಧಿಕಾರವನ್ನು ಚಲಾಯಿಸಲು ಆಯ್ಕೆಮಾಡಿದರೆ, ಮಿತಿ ಕಾಯ್ದೆಯಡಿ ಮಿತಿಯ ಅವಧಿ ಮುಗಿದಿದೆ ಎಂದು ವಾದಿಸುವುದು ವ್ಯರ್ಥ. ಮಿತಿ ಕಾಯ್ದೆಯಡಿ ಮಿತಿಯ ಅವಧಿಯು ಸಿವಿಲ್ ನ್ಯಾಯಾಲಯಗಳಲ್ಲಿ ತರಲಾದ ಮೊಕದ್ದಮೆಗಳನ್ನು ತಡೆಯುವ ಉದ್ದೇಶವನ್ನು ಹೊಂದಿದೆ, ಅಲ್ಲಿ ಸ್ಥಿರ ಆಸ್ತಿಯನ್ನು ಪುನಃಸ್ಥಾಪಿಸಲು ತನ್ನ ಹಕ್ಕನ್ನು ಚಲಾಯಿಸಲು ಪಾರ್ಟಿ ಆಯ್ಕೆ ಮಾಡುತ್ತಾರೆ. ಆದರೆ, ಎಲ್ಲಿ, ಸಾಮಾಜಿಕ-ಆರ್ಥಿಕ ಕಾರಣಗಳಿಗಾಗಿ, ಪಾರ್ಟಿಯು ತನ್ನ ಸ್ವಂತ ಹಕ್ಕುಗಳ ಬಗ್ಗೆ ತಿಳಿದಿರಲಿಕ್ಕಿಲ್ಲ, ಶಾಸಕಾಂಗವು ಸಾಕಷ್ಟು ಅಧಿಕಾರವನ್ನು ಧರಿಸಿ ಸಾಮಾಜಿಕ ನ್ಯಾಯವನ್ನು ಮಾಡುವ ಜವಾಬ್ದಾರಿಯನ್ನು ರಾಜ್ಯದ ಅಧಿಕಾರಿಯನ್ನಾಗಿ ಮಾಡುವ ಮೂಲಕ ಹೆಜ್ಜೆ ಹಾಕಿದೆ. ಆದಾಗ್ಯೂ, ತಾರ್ಕಿಕ ಹಿತಾಸಕ್ತಿಗಳು ಜಾರಿಗೆ ಬಂದಿರಬಹುದಾದ ವಿವೇಚನೆಯಿಲ್ಲದ ದೀರ್ಘಕಾಲದ ನಂತರ ಅಂತಹ ಶಕ್ತಿಯನ್ನು ಸಹ ಬಳಸಲಾಗುವುದಿಲ್ಲ. ಹೀಗಾಗಿ, 1963 ರ

ಕಾಯಿದೆಯಲ್ಲಿ ನಿಗದಿಪಡಿಸಿದ ಮಿತಿಯ ಅವಧಿ ಮುಗಿದಿದೆಯೆ ಎಂಬುದು ಪರೀಕ್ಷೆಯಲ್ಲ, ಆದರೆ ಸೆಕ್ಷನ್ 71 ಎ ಅಡಿಯಲ್ಲಿ ಅಧಿಕಾರವನ್ನು ಸಮಂಜಸವಾದ ವಿಳಂಬದ ನಂತರ ಚಲಾಯಿಸಲು ಪ್ರಯತ್ನಿಸಲಾಗಿದೆಯೇ ಎಂಬುದು."

**ಎಲ್ಲಿ ವಿಳಂಬವನ್ನು ಮನ್ನಿಸಲಾಗಿಲ್ಲ**

ಸುಪ್ರೀಮ್ ಕೋರ್ಟಿನ ದ್ವಿಸದಸ್ಯ ಪೀಠದ ಮುಂದಿನ ತೀರ್ಪು ನೋಡಿ, 1982 ರಲ್ಲಿ ಗ್ರಾಂಟ್ ಆದ ಜಮೀನನ್ನು 1997 ರಲ್ಲಿ 15 ವರ್ಷ ಪರಭಾರೆ ಅವದಿ ಮುಗಿದ ನಂತರ ಕ್ರಯ ಆಗಿರುತ್ತದೆ, ಲ್ಯಾಂಡ್ ಗ್ರಾಂಟ್ ನಿಯಮ 2005 ರಲ್ಲಿ ತಿದ್ದುಪಡಿಯಾಗಿ 25 ವರ್ಷ ಪರಭಾರೆ ಶರತ್ತು ಒಳಗೊಂಡಿದೆ, ನಂತರ 2005 ರಲ್ಲಿ ಅರ್ಜಿ ಹಾಕಲಾಗಿರುತ್ತದೆ, ಇದರಲ್ಲಿ 15 ವರ್ಷ ಕಾಲಾವದಿಯೊಳಗೆ ಜಿ.ಪಿ.ಎ ಕೊಡಲಾಗಿರುತ್ತದೆ, ಕ್ರಯದ ಮೊತ್ತ ನಗದಾಗಿ ನೀಡಲಾಗಿರುತ್ತದೆ, ಫೋರ್ಜರಿ ಅನುಮತಿ ಪತ್ರದ ಬಗ್ಗೆ ಕ್ರಿಮಿನಲ್ ಕೇಸ್ ಬಾಕಿ ಇರುತ್ತದೆ, ಮೇಲಾಗಿ ನ್ಯಾಯಾಲಯ ಕಲಂ 4(2) ರಲ್ಲಿ ಕ್ರಯ ಊರ್ಜಿತವಲ್ಲ ಎಂಬ ತೀರ್ಪು ನೀಡುತ್ತದೆ. ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡದ ಸಮುದಾಯಕ್ಕೆ ಪ್ರಯೋಜನಕಾರಿ ಶಾಸನಕ್ಕೆ ಸಂಬಂಧಿಸಿದಂತೆ ಇದನ್ನು ಪರಿಗಣಿಸಿ, ಎಂಟು (8) ವರ್ಷಗಳ ಅವಧಿಯು ಅಂತಹ ವಿಳಂಬ ಮತ್ತು ಕ್ರಮಗಳನ್ನು ಅನೂರ್ಜಿತಗೊಳಿಸುತ್ತದೆ ಎಂದು ಹೇಳಲಾಗುವುದಿಲ್ಲ.[1]

ಈ ಮೇಲಿನ ಸುಪ್ರೀಮ್ ಕೋರ್ಟ್ ಕೇಸಿನಲ್ಲಿ 2003 ರಲ್ಲಿ ಹೊರಬಂದ ಸುಪ್ರೀಮ್ ಕೋರ್ಟ್ ತೀರ್ಪೊಂದನ್ನು ಉಲ್ಲೇಕಿಸಲಾಗಿದೆ, ಅದು ಒರಿಸ್ಸಾ ರಾಜ್ಯದ ಪರಿಶಿಷ್ಟ ವರ್ಗ (ಟ್ರೈಬಲ್ – ಬುಡಕಟ್ಟು ಜನಾಂಗ) ಜಮೀನು ಬಗ್ಗೆ ಆಗಿದೆ, ಅಲ್ಲಿನ ಕಾನೂನು ಸರ್ಕಾರಿ ಅನುಮತಿ ಇಲ್ಲದೆ ವರ್ಗಾವಣೆ ನಿರ್ಬಂದಿಸಿರುತ್ತದೆ, ಅಂತಹ ವಿಚಾರದಲ್ಲಿ ಖರೀದಿದಾರನು ವ್ಯತಿರಿಕ್ತ ಸ್ವಾಧೀನ ಪ್ರತಿಪಾದನೆ ಮಾಡಲು ಬರುವುದಿಲ್ಲ ಎಂಬ ತೀರ್ಪನ್ನು ನೀಡಿ ಹೀಗೆಂದಿದೆ, "ರಾಜ್ಯವು ಬುಡಕಟ್ಟು ಜನಾಂಗದವರ ಸ್ಥಿರ ಆಸ್ತಿಯ

---

[1] ಸತ್ಯನ್ ವಿ. ಜಿಲ್ಲಾಧಿಕಾರಿಗಳು – ಎ.ಐ.ಆರ್ 2019 ಎಸ್.ಸಿ 2797

ಉಸ್ತುವಾರಿ ಮತ್ತು ಟ್ರಸ್ಟಿಯಾಗಿದ್ದು, ಬುಡಕಟ್ಟು ಜನಾಂಗದವರು ಅಂತಹ ಆಸ್ತಿಯನ್ನು ಹೊಂದಿದ್ದಾರೆಂದು ನೋಡಲು ಆದೇಶಿಸಲಾಗಿದೆ. ಪ್ಯಾರಾ 3ಎ ಯಿಂದ ಯಾವುದೇ ಕಾಲಮಿತಿಯ ಅವಧಿಯನ್ನು ಸೂಚಿಸಲಾಗಿರುವುದಿಲ್ಲ. ಮಿತಿ ಕಾಯ್ದೆಯ 65 ನೇ ವಿಧಿಯಲ್ಲಿ 12 ವರ್ಷಗಳ ಅವಧಿಯ ನಿಯಮ ಒಂದು ಬುಡಕಟ್ಟು ಜನಾಂಗದವರ ಸ್ಥಿರ ಆಸ್ತಿಗೆ ಸಂಬಂಧಪಟ್ಟಂತೆ ಅಪ್ರಸ್ತುತವಾಗುತ್ತದೆ. ಅದನ್ನು ಮಿತಿಯ ಕಾನೂನಿನಿಂದ ನಿಯಂತ್ರಿಸಲು, ಬುಡಕಟ್ಟು ಜನಾಂಗದವರು ಸಿವಿಲ್ ಮೊಕದ್ದಮೆ ಹೂಡಬೇಕಾಗಿಲ್ಲ; ಅವನು ಅಥವಾ ಅವನ ಪರವಾಗಿ ಯಾರಾದರೂ ರಾಜ್ಯವನ್ನು ಸಮೀಪಿಸಬೇಕು ಅಥವಾ ರಾಜ್ಯವು ಅವನನ್ನು ರಕ್ಷಿಸಲು ಕಾರ್ಯರೂಪಕ್ಕೆ ಬರಬೇಕು ಮತ್ತು ಅವನ ಆಸ್ತಿಯನ್ನು ಅವನಿಗೆ ಮರುಕೊಡಿಸಿದರೆ ಸಾಕು. ಅಂತಹ ಕ್ರಮಕ್ಕೆ ಮಿತಿ ಕಾಯ್ದೆಯ 65 ನೇ ವಿಧಿ ಅಥವಾ ಅದರ 27 ನೇ ಸೆಕ್ಷನ್ ಆಕರ್ಷಿಸಲಾಗುವುದಿಲ್ಲ."[1]

ಪ್ರಕರಣವೊಂದರಲ್ಲಿ ಗ್ರಾಂಟ್ ಪತ್ರದಲ್ಲಿ 15 ವರ್ಷ ಪರಭಾರೆ ಮಾಡಬಾರದು ಎಂಬ ಶರತ್ತಿನೊಂದಿಗೆ, ಪರಿಶಿಷ್ಟ ಜಾತಿ/ ಪರಿಶಿಷ್ಟ ವರ್ಗದ ಜನರಿಗೆ ಮಾತ್ರ ಮಾರಾಟಮಾಡಬೇಕು ಎಂಬ ಶರತ್ತನ್ನು ನಮೂದಿಸಲಾಗಿರುತ್ತದೆ, ಮೊದಲ ಕ್ರಯ 15 ವರ್ಷದ ನಂತರ ಆಗಿರುವುದಾದರೂ 1979 ಕ್ಕೆ ಮುಂಚೆ ಆಗಿರುವುದಾದರೂ, 2012 ರಲ್ಲಿ ಹೈಕೋರ್ಟ್ ದ್ವಿಸದಸ್ಯ ಪೀಠ ತೀರ್ಪು ನೀಡಿ, ಸದರಿ ಶರತ್ತನ್ನು ಗ್ರಾಂಟಿ ಮಾತ್ರ ಪ್ರಶ್ನಿಸಬಹುದು ಖರೀದಿದಾರನಲ್ಲ ಎಂಬ ಸಿದ್ಧಾಂತವನ್ನು ಅನುಮೋದಿಸಿ ತೀರ್ಪು ನೀಡಿರುತ್ತದೆ.[2]

**ಗ್ರಾಂಟಿಗಳಿಗೆ ಇರುವ ಬುನಾದಿಗಳು**

ಷೆಡ್ಯೂಲ್ ಆಸ್ತಿಗೆ ಸರಿಹೊಂದುವಂತೆ ಸಂಪೂರ್ಣ ಮಾಲೀಕತ್ವವನ್ನು ಹೊಂದಿರದ ಕೆಲವು ಸಹ-ಷೇರುದಾರರ ನಡುವೆ ಮಾರಾಟದ ಒಪ್ಪಂದವನ್ನು

---

[1] ಅಮ್ರೇಂದ್ರ ವಿ. ತೇಜ್ ಬಹದ್ದೂರ್ – ಎ.ಐ.ಆರ್ 2004 ಎಸ್.ಸಿ 3782

[2] ಕುಸುಮಾವತಿ ವಿ. ಜಿಲ್ಲಾಧಿಕಾರಿಗಳು – ಮನು/ ಕೆ.ಎ/ 0960/ 2012 (ಡಿ.ಬಿ)

ಮಾಡಿಕೊಂಡಿದ್ದಲ್ಲಿ ಅದು ಕಾನೂನಿನಲ್ಲಿ ಜಾರಿಗೊಳಿಸಲಾಗುವುದಿಲ್ಲ.[1] ಹಾಗಾಗಿ ಗ್ರಾಂಟಿ ಕುಟುಂಬದಲ್ಲಿ ಸದರಿ ಗ್ರಾಂಟ್ ಜಮೀನನ್ನು ಒಟ್ಟು ಕುಟುಂಬವಾಗಿ ಅನುಭವದಲ್ಲಿ ಇರುವಾಗ, ಅಂತಹ ಅವಿಭಕ್ತ ಕುಟುಂಬದ ಶೇರುದಾರರೆಲ್ಲಾ ಕ್ರಯಕರಾರು/ ಕ್ರಯ ಮಾಡಿಕೊಡದಿದ್ದಲ್ಲಿ, ಸದರಿ ಕ್ರಯ ಆಗಿರುವುದು ತಿಳಿದು ಬಂದ ಸಕಾರಣ ಬದ್ದ ಅವದಿಯಲ್ಲಿ ಕಾನೂನು ಪ್ರಕ್ರಿಯೆ ಜರುಗಿಸಬಹುದು.

[2]"ಸಾಕಷ್ಟು ಕಾರಣ ಮತ್ತು ಅವರ ಸ್ವಂತ ನಡವಳಿಕೆಯನ್ನು ತೋರಿಸುವ ಮೂಲಕ ವಿಳಂಬವನ್ನು ವಿವರಿಸಲು ಇತರ ಪಕ್ಷವು ವಿಫಲವಾದ ಪರಿಣಾಮವಾಗಿ ಒಂದು ಪಕ್ಷದ ಪರವಾಗಿ ಒಂದು ಅಮೂಲ್ಯವಾದ ಹಕ್ಕನ್ನು ಪಡೆದ ನಂತರ, ಅರ್ಜಿದಾರರ ಕೇವಲ ಕೇಳುವಿಕೆಯ ಮೇರೆಗೆ ಆ ಹಕ್ಕನ್ನು ಕಸಿದುಕೊಳ್ಳುವುದು ಅಸಮಂಜಸವಾಗಿದೆ, ವಿಶೇಷವಾಗಿ ವಿಳಂಬವು ನೇರವಾಗಿ ಆ ಪಕ್ಷದ ನಿರ್ಲಕ್ಷ್ಯ, ಪೂರ್ವನಿಯೋಜಿತ ಅಥವಾ ನಿಷ್ಕ್ರಿಯತೆಯ ಪರಿಣಾಮವಾಗಿರುವಾಗ. ಎರಡೂ ಪಕ್ಷಗಳಿಗೆ ಸಮಾನವಾಗಿ ನ್ಯಾಯ ಒದಗಿಸಬೇಕು. ಆಗ ಮಾತ್ರ ನ್ಯಾಯದ ತುದಿಗಳನ್ನು ಸಾಧಿಸಬಹುದು. ಒಂದು ಪಕ್ಷವು ತನ್ನ ಹಕ್ಕುಗಳು ಮತ್ತು ಪರಿಹಾರಗಳನ್ನು ಅನುಷ್ಠಾನಗೊಳಿಸುವಲ್ಲಿ ಸಂಪೂರ್ಣವಾಗಿ ನಿರ್ಲಕ್ಷ್ಯ ವಹಿಸಿದ್ದರೆ, ಅವನು ಅಜಾಗರೂಕತೆಯಿಂದ ವರ್ತಿಸಿದ ಪರಿಣಾಮವಾಗಿ ಇತರ ಪಕ್ಷವು ಅಮೂಲ್ಯವಾದ ಹಕ್ಕನ್ನು ಕಸಿದುಕೊಳ್ಳುವುದು ಅನ್ಯಾಯವಾಗುತ್ತದೆ." ಈ ಕಾರಣಕ್ಕೆ ಅರ್ಜಿದಾರನು ನಿರ್ಲಕ್ಷತೆ ತೋರಿಲ್ಲ, ಹಾಗೆ ತೋರಲು ಕಾರಣವೇನು ಎಂಬುದನ್ನು ವಿವರಿಸಬೇಕಿರುತ್ತದೆ.

"ಮಿತಿಯ ಅವಧಿಯೊಳಗೆ ಅರ್ಜಿಯನ್ನು ಮಾಡದಿರಲು ಸಾಕಷ್ಟು ಕಾರಣ" ಎಂಬ ಪದಗಳನ್ನು ಪ್ರಕರಣದ ಸಂಗತಿಗಳು ಮತ್ತು ಸಂದರ್ಭಗಳು ಮತ್ತು ಪ್ರಕರಣದ ಪ್ರಕಾರವನ್ನು ಅವಲಂಬಿಸಿ ಸಮಂಜಸವಾದ, ಲೌಕಿಕ, ಪ್ರಾಯೋಗಿಕ ಮತ್ತು ಉದಾರವಾದ ರೀತಿಯಲ್ಲಿ ಅರ್ಥಮಾಡಿಕೊಳ್ಳಬೇಕು ಮತ್ತು ಅನ್ವಯಿಸಬೇಕು. ಮಿತಿ ಕಾಯ್ದೆಯ ಸೆಕ್ಷನ್ 5 ರಲ್ಲಿನ `ಸಾಕಷ್ಟು

---

[1] ಪೆಮ್ಮಡಪ್ರಭಾಕರ್ ವಿ. ಯಂಗಮೆನ್ಸ್ – 2015 (5) ಎಸ್.ಸಿ.ಸಿ 355

[2] ಬಲ್ವಂತ್ ಸಿಂಗ್ ವಿ. ಜಗದೀಶ್ ಸಿಂಗ್ – ಎ.ಐ.ಆರ್ 2010 ಎಸ್.ಸಿ 3043

ಕಾರಣ'ಎಂಬ ಪದಗಳು ಸಾಕಷ್ಟು ನ್ಯಾಯವನ್ನು ಮುನ್ನಡೆಸಲು ಉದಾರವಾದ ನಿರ್ಮಾಣವನ್ನು ಪಡೆಯಬೇಕು, ಯಾವುದೇ ವಿಳಂಬ ತಂತ್ರಗಳ ಕಾರಣದಿಂದಾಗಿ, ಉತ್ತಮ ನಂಬಿಕೆಗಳ ಕೊರತೆಯಿಂದ, ಉದ್ದೇಶಪೂರ್ವಕ ನಿಷ್ಕ್ರಿಯತೆಯಿಂದ ಅಥವಾ ನಿರ್ಲಕ್ಷ್ಯತೆಯಿಂದ ಅರ್ಜಿದಾರನಿಂದ ವಿಳಂಬವಾಗದಿದ್ದಾಗ, ಅರ್ಜಿ ಪುರಸ್ಕರಿಸಬಹುದು".[1]

"…. ಪ್ರಕ್ರಿಯಾ ಮಾರ್ಗದಲ್ಲಿ ಯಾವುದೇ ವ್ಯಕ್ತಿಗೆ ಪ್ರಾಪ್ತವಾದ ಹಕ್ಕಿಲ್ಲ. ನಿಗದಿತ ರೀತಿಯಲ್ಲಿ ಮುಂದುವರಿಯುವ ಹಕ್ಕು ಮಾತ್ರ ಅವನಿಗೆ ಇದೆ. ಶಾಸನಬದ್ಧ ಬದಲಾವಣೆಯಿಂದ ಪ್ರಕ್ರಿಯಾ ವಿಧಾನವನ್ನು ಬದಲಾಯಿಸಿದರೆ, ವಿನಾಯಿತಿ ಇಲ್ಲದೆ, ಬೇರೆ ಷರತ್ತು ಇಲ್ಲದಿದ್ದರೆ, ಪಕ್ಷಗಳು ಬದಲಾದ ಪ್ರಕಾರ ಮುಂದುವರಿಯಬೇಕು."[2]

ವಿಳಂಬವನ್ನು ನ್ಯಾಯಾಲಯ ಯಾವ ರೀತಿಯಲ್ಲಿ ವಿವರಣೆ ಬಯಸುತ್ತದೆ,[3] (1). "ವಿಳಂಬವನ್ನು ಕ್ಷಮಿಸುವ ಅರ್ಜಿಯೊಂದಿಗೆ ವ್ಯವಹರಿಸುವಾಗ ಉದಾರವಾದ, ಪ್ರಾಯೋಗಿಕ, ನ್ಯಾಯ-ಆಧಾರಿತ, ನಿಷ್ಠುರವಲ್ಲದ ವಿಧಾನ ಇರಬೇಕು, ಏಕೆಂದರೆ ನ್ಯಾಯಾಲಯಗಳು ಅನ್ಯಾಯವನ್ನು ಕಾನೂನುಬದ್ಧಗೊಳಿಸಬೇಕಾಗಿಲ್ಲ ಆದರೆ ಅನ್ಯಾಯವನ್ನು ತೆಗೆದುಹಾಕಲು ಭಾದ್ಯತೆಯನ್ನು ಹೊಂದಿವೆ. (2). "ಸಾಕಷ್ಟು ಕಾರಣ" ಎಂಬ ಪದಗಳನ್ನು ಅವುಗಳ ಸರಿಯಾದ ಮನೋಭಾವ, ತತ್ವಶಾಸ್ತ್ರ ಮತ್ತು ಉದ್ದೇಶದ ಅರ್ಥದಲ್ಲಿ ಅರ್ಥೈಸಿಕೊಳ್ಳಬೇಕು, ಈ ಪದಗಳು ಮೂಲತಃ ಸ್ಥಿತಿಸ್ಥಾಪಕವಾಗಿದ್ದು, ವಾಸ್ತವ-ಸನ್ನಿವೇಶವನ್ನು ಪಡೆದುಕೊಳ್ಳಲು ಸರಿಯಾದ ದೃಷ್ಟಿಕೋನದಲ್ಲಿ ಅನ್ವಯಿಸಬೇಕು. (3). ಸತ್ವಶಾಲಿಯಾದ ನ್ಯಾಯವು ಅತ್ಯುನ್ನತ ಮತ್ತು ಪ್ರಮುಖವಾದುದರಿಂದ ತಾಂತ್ರಿಕ ಪರಿಗಣನೆಗಳನ್ನು ಅನಗತ್ಯವಾಗಿ ನೀಡಬಾರದು ಮತ್ತು ಒತ್ತು ನೀಡಲಾಗುವುದಿಲ್ಲ. (4). ವಿಳಂಬ ಉದ್ದೇಶಪೂರ್ವಕ ಕಾರಣಕ್ಕೆ ಯಾವುದೇ ಊಹೆಯನ್ನು ಲಗತ್ತಿಸಲಾಗುವುದಿಲ್ಲ

---

[1] ಪೆರುಮೊನ್ ಭಗವತಿ ವಿ. ಭಾರ್ಗವಿ - 2008 (8) ಎಸ್.ಸಿ.ಸಿ 321

[2] ಶಿವಶಕ್ತಿ ವಿ. ಸ್ವರಾಜ್ - ಎ.ಐ.ಆರ್ 2003 ಎಸ್.ಸಿ 2434

[3] ಈಶಾ ಭಟ್ಟಾಚರ್ಜಿ ವಿ. ಮ್ಯಾನೇಜಿಂಗ್ ಕಮಿಟಿ - 2013 (12) ಎಸ್.ಸಿ.ಸಿ 649

ಆದರೆ, ವಕೀಲರ ಅಥವಾ ದಾವೆ ಹೂಡುವವರ ಕಡೆಯಿಂದ ತೀವ್ರ ನಿರ್ಲಕ್ಷ್ಯವನ್ನು ಗಮನಿಸಬೇಕು. (5). ವಿಳಂಬವನ್ನು ಕ್ಷಮಿಸಲು ಬಯಸುವ ಪಕ್ಷಕ್ಕೆ ಪ್ರಾಮಾಣಿಕತೆಯ ಕೊರತೆಯು ಗಮನಾರ್ಹ ಮತ್ತು ಸಂಬಂಧಿತ ಸಂಗತಿಯಾಗಿದೆ. (6) ಕಟ್ಟುನಿಟ್ಟಾದ ಪುರಾವೆಗಳನ್ನು ಅನುಸರಿಸುವುದು ಸಾರ್ವಜನಿಕ ನ್ಯಾಯದ ಮೇಲೆ ಪರಿಣಾಮ ಬೀರಬಾರದು ಮತ್ತು ಸಾರ್ವಜನಿಕ ಕಿಡಿಗೇಡಿತನಕ್ಕೆ ಕಾರಣವಾಗಬಾರದು ಎಂಬುದನ್ನು ನೆನಪಿನಲ್ಲಿಡಬೇಕು ಏಕೆಂದರೆ ನ್ಯಾಯಾಲಯಗಳು ಜಾಗರೂಕರಾಗಿರಬೇಕು ಆದ್ದರಿಂದ ಅಂತಿಮ ಘಟನೆಯಲ್ಲಿ ನ್ಯಾಯದ ನಿಜವಾದ ವೈಫಲ್ಯವಿರಬಾರದು. (7). ಉದಾರವಾದಿ ವಿಧಾನದ ಪರಿಕಲ್ಪನೆಯು ಸಮಂಜಸತೆಯ ಪರಿಕಲ್ಪನೆಯನ್ನು ಒಳಗೊಳ್ಳಬೇಕಾಗಿದೆ ಮತ್ತು ಅದನ್ನು ಸಂಪೂರ್ಣವಾಗಿ ಮುಕ್ತಗೊಳಿಸದ ಉಚಿತ ಆಟವಾಡುವಿಕೆಗೆ ಅನುಮತಿಸಲಾಗುವುದಿಲ್ಲ. (8). ಅತಿಯಾದ ವಿಳಂಬ ಮತ್ತು ಅಲ್ಪಾವಧಿಯ ಅಥವಾ ಕೆಲವು ದಿನಗಳ ವಿಳಂಬದ ನಡುವೆ ವ್ಯತ್ಯಾಸವಿದೆ, ಅತಿಯಾದ ವಿಳಂಬಕ್ಕೆ ಪಕ್ಷಪಾತ (ಪ್ರಿಜುಡೀಸ್) ಸಿದ್ಧಾಂತವು ಆಕರ್ಷಿತವಾಗಿದ್ದರೆ, ನಂತರದವುಗಳಿಗೆ ಅದನ್ನು ಆಕರ್ಷಿಸಲಾಗುವುದಿಲ್ಲ. ಇದಲ್ಲದೆ, ಮೊದಲನೆಯದು ಕಟ್ಟುನಿಟ್ಟಾದ ವಿಧಾನವನ್ನು ಸಮರ್ಥಿಸುತ್ತದೆ ಆದರೆ ನಂತರದವುಗಳು ಉದಾರವಾದ ವಿವರಣೆಯನ್ನು ಬಯಸುತ್ತದೆ. (9). ಪಕ್ಷದ ನಿಷ್ಕ್ರಿಯತೆ ಅಥವಾ ನಿರ್ಲಕ್ಷ್ಯಕ್ಕೆ ಸಂಬಂಧಿಸಿದ ನಡವಳಿಕೆ, ನಡವಳಿಕೆ ಮತ್ತು ವರ್ತನೆ ಗಣನೆಗೆ ತೆಗೆದುಕೊಳ್ಳಬೇಕಾದ ಸಂಬಂಧಿತ ಅಂಶಗಳಾಗಿವೆ. ಎರಡೂ ಪಕ್ಷಗಳಿಗೆ ಸಂಬಂಧಿಸಿದಂತೆ ನ್ಯಾಯದ ಸಮತೋಲನದ ಪ್ರಮಾಣವನ್ನು ನ್ಯಾಯಾಲಯಗಳು ಅಳೆಯುವ ಅವಶ್ಯಕತೆಯಿದೆ ಮತ್ತು ಉದಾರವಾದ ವಿಧಾನದ ಹೆಸರಿನಲ್ಲಿ ಹೇಳಲಾದ ತತ್ವವನ್ನು ಬಿಟ್ಟು ಹೋಗಲು ಸಾಧ್ಯವಿಲ್ಲ ಎಂಬುದು ಮೂಲಭೂತ ತತ್ತ್ವವಿದ್ದಂತೆ. (10). ನೀಡಿರುವ ವಿವರಣೆಯನ್ನು ಸುಳ್ಳಿನಿಂದ ಕೂಡಿದ್ದರೆ ಅಥವಾ ಅರ್ಜಿಯಲ್ಲಿ ಒತ್ತಾಯಿಸಲಾದ ಆಧಾರಗಳು ಕಾಲ್ಪನಿಕವಾಗಿದ್ದರೆ, ಅಂತಹ ಮೊಕದ್ದಮೆಯನ್ನು ಎದುರಿಸಲು ಅನಗತ್ಯವಾಗಿ ಇನ್ನೊಂದು ಪಾರ್ಟಿಯನ್ನು ಒತ್ತಾಯಿಸದಂತೆ ನ್ಯಾಯಾಲಯಗಳು

ಜಾಗರೂಕರಾಗಿರಬೇಕು. (11). ಮಿತಿಯ ಕಾನೂನಿನ ತಾಂತ್ರಿಕತೆಗಳಿಗೆ ಸಹಾಯ ಮಾಡುವ ಮೂಲಕ ಯಾರೂ ವಂಚನೆ, ತಪ್ಪಾಗಿ ನಿರೂಪಣೆ ಅಥವಾ ಅಡ್ಡಿಪಡಿಸುವ ಟೀಕೆ ಯಿಂದ ದೂರವಾಗುವುದಿಲ್ಲ ಎಂಬುದನ್ನು ಮನಸ್ಸಿನಲ್ಲಿಟ್ಟುಕೊಳ್ಳಬೇಕು. (12). ವಾಸ್ತವಿಕತೆಯ ಸಂಪೂರ್ಣ ವಿವರಣೆ ಎಚ್ಚರಿಕೆಯಿಂದ ಪರಿಶೀಲನೆ ನಡೆಸಬೇಕು ಮತ್ತು ವಿಧಾನವು ನ್ಯಾಯಾಂಗ ವಿವೇಚನೆಯ ಮಾದರಿಯನ್ನು ಆಧರಿಸಿರಬೇಕು, ಅದು ವಸ್ತುನಿಷ್ಠ ತಾರ್ಕಿಕತೆಯ ಮೇಲೆ ಸ್ಥಾಪಿತವಾಗಿದೆ ಮತ್ತು ವೈಯಕ್ತಿಕ ಗ್ರಹಿಕೆಯ ಮೇಲೆ ಅಲ್ಲ. (13). ರಾಜ್ಯ ಅಥವಾ ಸಾರ್ವಜನಿಕ ಸಂಸ್ಥೆ ಅಥವಾ ಸಾಮೂಹಿಕ ಕಾರಣವನ್ನು ಪ್ರತಿನಿಧಿಸುವ ಒಂದು ಘಟಕಕ್ಕೆ ಕೆಲವು ಸ್ವೀಕಾರಾರ್ಹ ವಿನಾಯ್ತಿಯನ್ನು ನೀಡಬೇಕು." .... (14). ವಿಳಂಬವನ್ನು ಕ್ಷಮಿಸುವ ಅರ್ಜಿಯನ್ನು ಎಚ್ಚರಿಕೆಯಿಂದ ಕಾಳಜಿಯೊಂದಿಗೆ ರಚಿಸಬೇಕು ಮತ್ತು ಅರ್ಧ ಅಪಾಯದ ರೀತಿಯಲ್ಲಿ, ನ್ಯಾಯಾಲಯಗಳು ಅರ್ಹತೆಯ ಮೇಲೆ ಕೇಸನ್ನು ನಿರ್ಣಯಿಸುವುದು ನ್ಯಾಯ ವಿತರಣಾ ವ್ಯವಸ್ಥೆಗೆ ಬುನಾದಿಯಾಗಿದೆ ಎಂಬ ತತ್ವದ ತಳಪಾಯದಲ್ಲಿ ವಿಳಂಬವನ್ನು ಕ್ಷಮಿಸಲು ಅಗತ್ಯವಾಗಿದೆ ಎಂಬ ಕಲ್ಪನೆಯನ್ನು ಆಶ್ರಯಿಸಬಾರದು. (15). ವಿಳಂಬವನ್ನು ಕ್ಷಮಿಸುವ ಅರ್ಜಿಯನ್ನು ವೈಯಕ್ತಿಕ ತತ್ತ್ವಶಾಸ್ತ್ರದ ಆಧಾರದ ಮೇಲೆ ವಾಡಿಕೆಯಂತೆ ವ್ಯವಹರಿಸಬಾರದು, ಅಂತಹದ್ದು ಮೂಲತಃ ಕಾಲ್ಪನಿಕವಾಗಿರುತ್ತದೆ. (16). ನ್ಯಾಯಾಂಗ ವಿವೇಚನೆಯ ಪರಿಕಲ್ಪನೆಗೆ ಸಂಬಂಧಿಸಿದಂತೆ ಯಾವುದೇ ನಿಖರವಾದ ಸೂತ್ರವನ್ನು ಹಾಕಲಾಗದಿದ್ದರೂ, ತೀರ್ಪಿನ ವ್ಯವಸ್ಥೆಯ ಸ್ಥಿರತೆ ಮತ್ತು ಸಾಮೂಹಿಕತೆಯನ್ನು ಸಾಧಿಸುವ ಪ್ರಜ್ಞಾಪೂರ್ವಕ ಪ್ರಯತ್ನವನ್ನು ಮಾಡಬೇಕು ಅದು ಅಂತಿಮ ಸಾಂಸ್ಥಿಕ ಧ್ಯೇಯವಾಕ್ಯವಾಗಿದೆ. (17). ವಿಳಂಬವನ್ನು ಗಂಭೀರವಲ್ಲದ ವಿಷಯವೆಂದು ಗ್ರಹಿಸುವ ಹೆಚ್ಚುತ್ತಿರುವ ಪ್ರವೃತ್ತಿ ಮತ್ತು ಆದ್ದರಿಂದ, ಜಾಗರೂಕತೆಯಿಲ್ಲದ ಪ್ರವೃತ್ತಿಯನ್ನು ನಿರ್ಲಕ್ಷ್ಯದ ರೀತಿಯಲ್ಲಿ ಪ್ರದರ್ಶಿಸಬಹುದು, ಸಹಜವಾಗಿ, ಕಾನೂನು ಮಾನದಂಡಗಳಲ್ಲಿ ಅದನ್ನು ತಡೆಯುವ ಅಗತ್ಯವಿದೆ."

"ವಿಳಂಬದ ಪ್ರತಿಯೊಂದು ಸಂದರ್ಭದಲ್ಲೂ ಸಂಬಂಧಪಟ್ಟ ದಾವೆದಾರರ ಕಡೆಯಿಂದ ಸ್ವಲ್ಪ ನಿಷ್ಕ್ರಿಯತೆ ಇದೆ ಎಂಬುದನ್ನು ನೆನಪಿನಲ್ಲಿಡಬೇಕು. ಅವನ ಮನವಿಯನ್ನು ತಿರಸ್ಕರಿಸಲು ಮತ್ತು ಅವನ ವಿರುದ್ಧ ಬಾಗಿಲು ಮುಚ್ಚಲು ಅದು ಮಾತ್ರ ಸಾಕಾಗುವುದಿಲ್ಲ. ವಿವರಣೆಯು ನಂಬಿಕೆಗೆ ಅರ್ಹವಾದ ಕಾರಣಗಳಿಂದ ಮಾಡಿದ್ದರೆ ಅಥವಾ ಅದನ್ನು ಕಾಲಹರಣ ಕಾರ್ಯತಂತ್ರದ ಭಾಗವಾಗಿ ಮಂಡಿಸದಿದ್ದರೆ ನ್ಯಾಯಾಲಯವು ಅರ್ಜಿದಾರನಿಗೆ ಹೆಚ್ಚಿನ ಪರಿಗಣನೆಯನ್ನು ತೋರಿಸಬೇಕು. ಆದರೆ ಸಮಯವನ್ನು ಪಡೆಯಲು ಪಾರ್ಟಿಯು ಉದ್ದೇಶಪೂರ್ವಕವಾಗಿ ವಿಳಂಬಮಾಡಿರುವುದು ಎಂದು ಯೋಚಿಸಲು ಸಮಂಜಸವಾದ ಆಧಾರವಿದ್ದಾಗ, ನ್ಯಾಯಾಲಯವು ವಿವರಣೆಯನ್ನು ಸ್ವೀಕರಿಸುವ ವಿರುದ್ಧ ಒಲವು ತೋರಬೇಕು. ವಿಳಂಬವನ್ನು ಮನ್ನಿಸುವಾಗ ನ್ಯಾಯಾಲಯವು ವಿರುದ್ಧ ಪಾರ್ಟಿಯನ್ನು ಸಂಪೂರ್ಣವಾಗಿ ಮರೆಯಬಾರದು. ಅವನು .......... ಸಹ ಸಾಕಷ್ಟು ದೊಡ್ಡ ...... ವೆಚ್ಚಗಳನ್ನು ಹೊಂದಿದ್ದನೆಂಬುದನ್ನು ಮನಸ್ಸಿನಲ್ಲಿಟ್ಟುಕೊಳ್ಳಬೇಕು. ಅರ್ಜಿದಾರರ ಕಡೆಯಿಂದ ಉಂಟಾಗುವ ವಿಳಂಬವನ್ನು ನ್ಯಾಯಾಲಯಗಳು ಕ್ಷಮಿಸಿದಾಗ ನ್ಯಾಯಾಲಯವು ಎದುರಾಳಿ ಪಕ್ಷಕ್ಕೆ ಅವನ ನಷ್ಟವನ್ನು ಸರಿದೂಗಿಸುತ್ತದೆ ಎಂಬುದು ಮಾನ್ಯ ಮಾರ್ಗಸೂಚಿಯಾಗಿದೆ. ...... ಆಗಿರುವ ಕಾನೂನು ಗಾಯದ ಪರಿಹಾರಕ್ಕಾಗಿ, ಅಂತಹ ಕಾನೂನು ಪರಿಹಾರಕ್ಕಾಗಿ, ಮಿತಿಯ ಕಾನೂನು ಜೀವಿತಾವಧಿಯನ್ನು ನಿಗದಿಪಡಿಸುತ್ತದೆ. ಸಮಯವು ಅಮೂಲ್ಯವಾದುದು ಮತ್ತು ವ್ಯರ್ಥವಾದ ಸಮಯವು ಎಂದಿಗೂ ಮರುಬರುವುದಿಲ್ಲ. ಹಾದು ಹೋಗುವ ಸಮಯದಲ್ಲಿ, ಹೊಸ ಕಾರಣಗಳು ಮೊಳಕೆಯೊಡೆಯುವುದರಿಂದ ಹೊಸ ವ್ಯಕ್ತಿಗಳು ನ್ಯಾಯಾಲಯಗಳನ್ನು ಸಂಪರ್ಕಿಸುವ ಮೂಲಕ ಕಾನೂನು ಪರಿಹಾರವನ್ನು ಪಡೆಯಬೇಕಾಗುತ್ತದೆ. ಆದ್ದರಿಂದ ಪ್ರತಿ ಪರಿಹಾರಕ್ಕೂ ಜೀವಿತಾವಧಿಯನ್ನು ನಿಗದಿಪಡಿಸಬೇಕು. ಪರಿಹಾರವನ್ನು ಪ್ರಾರಂಭಿಸಲು ಅಂತ್ಯವಿಲ್ಲದ ಅವಧಿ ಅಂತ್ಯವಿಲ್ಲದ ಅನಿಶ್ಚಿತತೆ ಇದ್ದಾಗ ಅದು ಪರಿಣಾಮಕಾರಿ ಅರಾಜಕತೆಗೆ ಕಾರಣವಾಗಬಹುದು. ಮಿತಿಯ ನಿಯಮವನ್ನು ಸಾರ್ವಜನಿಕ ನೀತಿಯ

ಮೇಲೆ ಸ್ಥಾಪಿಸಲಾಗಿದೆ. ಇದನ್ನು ಮ್ಯಾಕ್ಸಿಮ್ 'ಇಂಟರೆಸ್ಟ್ ರಿಪಬ್ಲಿಕ ಅಪ್ ಅಪ್ ಸಿಬ್ ಫಿನಿಸ್ ಲಿಟಿಯಂ"ನಲ್ಲಿ ಪ್ರತಿಪಾದಿಸಲಾಗಿದೆ (ಇದು ಸಾಮಾನ್ಯ ಕಲ್ಯಾಣಕ್ಕಾಗಿ ಒಂದು ಅವಧಿಯಲ್ಲಿ ದಾವೆ ಹೂಡಬೇಕು). ಮಿತಿಗಳ ನಿಯಮಗಳು ಪಾರ್ಟಿಗಳ ಹಕ್ಕುಗಳನ್ನು ನಾಶಮಾಡಲು ಉದ್ದೇಶಿಸಿಲ್ಲ. ಪಾರ್ಟಿಗಳು ವಿಳಂಬ ತಂತ್ರಗಳನ್ನು ಆಶ್ರಯಿಸಲು ನೀಡಲಾಗಿಲ್ಲ, ಆದರೆ ಪರಿಹಾರವನ್ನು ತ್ವರಿತವಾಗಿ ಪಡೆಯುವಂತೆ ನೋಡಲು ಅದು ಉದ್ದೇಶಿಸಿದೆ. ಪ್ರತಿ ಕಾನೂನು ಪರಿಹಾರವನ್ನು ಶಾಸನಬದ್ಧವಾಗಿ ನಿಗದಿತ ಅವಧಿಗೆ ಜೀವಂತವಾಗಿರಿಸಬೇಕು ಎಂಬ ಕಲ್ಪನೆ ಇದೆ."[1]

**ಸಕಾರಣಬದ್ಧ ಅವಧಿ ಬಗ್ಗೆ ಚರ್ಚೆಯಾಗದ ವ್ಯಾಖ್ಯಾನಗಳು**

"ಯಾವುದೇ ಮಿತಿಯನ್ನು ನಿಗದಿಪಡಿಸದಿದ್ದರೆ, ಶಾಸನಬದ್ಧ ಪ್ರಾಧಿಕಾರವು ತನ್ನ ನ್ಯಾಯವ್ಯಾಪ್ತಿಯನ್ನು ಸಮಂಜಸವಾದ ಅವಧಿಯೊಳಗೆ ಚಲಾಯಿಸಬೇಕು ಎಂಬುದು ನಿಜ. ಆದಾಗ್ಯೂ, ಸಮಂಜಸವಾದ ಅವಧಿ ಯಾವುದು ಎಂಬುದು ಶಾಸನದ ಸ್ವರೂಪ, ಹಕ್ಕುಗಳು ಮತ್ತು ಹೊಣೆಗಾರಿಕೆಗಳು ಮತ್ತು ಇತರ ಸಂಬಂಧಿತ ಅಂಶಗಳನ್ನು ಅವಲಂಬಿಸಿರುತ್ತದೆ".[2]

"ಶಾಸನವು ಸಮಯದ ಮಿತಿಯನ್ನು ಸೂಚಿಸುವುದಿಲ್ಲ, ಅದನ್ನು ಸುಯೋ ಮೋಟು (ತಾವಾಗೇ) ಅಥವಾ ಬೇರೆರೀತಿಯಲ್ಲಾದರೆ, ಸಮಂಜಸವಾದ ಸಮಯದೊಳಗೆ ಬಳಸಬೇಕಾಗುತ್ತದೆ. ಮಹಾರಾಷ್ಟ್ರ ಭೂ ಕಂದಾಯ ಸಂಹಿತೆಯಡಿ ಸಮಂಜಸವಾದ ಅವಧಿಯು ಅಸಾಧಾರಣ ಸಂದರ್ಭಗಳಿಗೆ ಒಳಪಟ್ಟು ಮೂರು ವರ್ಷಗಳು ಆಗಿರಬಹುದು ಮತ್ತು 17 ವರ್ಷಗಳ ನಂತರ ಪರಿಷ್ಕರಣೆ ಅಧಿಕಾರವನ್ನು ಯಾವುದೇ ಕಲ್ಪನೆಯ ವಿಸ್ತಾರದಿಂದ ಸಮಂಜಸವಾಗಿ ಪರಿಗಣಿಸಲಾಗುವುದಿಲ್ಲ ಎಂದು ಸ್ಪಷ್ಟವಾಗಿ ಹೇಳಲಾಗಿದೆ".[3]

---

[1] ಬಾಲಕೃಷ್ಣನ್ ವಿ. ಕೃಷ್ಣಮೂರ್ತಿ – 1998 (7) ಎಸ್.ಸಿ.ಸಿ 123

[2] ಪಂಜಾಬ್ ರಾಜ್ಯ ವಿ. ಭಟಿಂಡ – 2007 (11) ಎಸ್.ಸಿ.ಸಿ 363

[3] ಸಂತೋಷ್ ಕುಮಾರ್ ವಿ. ಬಾಳಸಾಹೇಬ್ – 2009 (9) ಎಸ್.ಸಿ.ಸಿ 352

ಈ ಮೇಲ್ಕಂಡ ತೀರ್ಪುಗಳಲ್ಲಿ ಸಂಬಂಧಿಸಿದ ಕಾಯ್ದೆ ಸ್ವರೂಪ, ಹಕ್ಕುಗಳು, ಹೊಣೆಗಾರಿಕೆಗಳು ಮತ್ತು ಸಂಬಂಧಿತ ಅಂಶಗಳಲ್ಲಿ ಸಮಂಜಸವಾದ ಅವದಿ ಯಾವುದು ಎಂಬುದನ್ನು ನಿರದರಿಸಲು ಅವಲಂಬಿಸಿರುತ್ತೆ ಎಂದಿದ್ದಾರೆ. ಪಿ.ಟಿ.ಸಿ.ಎಲ್ ಕಾಯ್ದೆಯಲ್ಲಿನ ಅಂತಹ ಕಾಲಾವಧಿಯನ್ನು, ಹಕ್ಕು ಬಾದ್ಯತೆ ಸೂಚಿಸುವ ಯಾವ ಅಂಶಗಳು ಇವೆ ಎಂಬುದನ್ನು ನೋಡೋಣ.

ಕಲಂ 12 ರಲ್ಲಿ ಹೀಗೆ ಹೇಳಿದೆ, ತೊಂದರೆಗಳನ್ನು ತೆಗೆದುಹಾಕುವ ಅಧಿಕಾರ:– ಈ ಕಾಯ್ದೆಯ ನಿಬಂಧನೆಗಳನ್ನು ಜಾರಿಗೆ ತರುವಲ್ಲಿ ಯಾವುದೇ ತೊಂದರೆ ಎದುರಾದರೆ, ಅಧಿಕೃತ ಗೆಜೆಟ್‌ನಲ್ಲಿ ಪ್ರಕಟವಾದ ಸಾಮಾನ್ಯ ಅಥವಾ ವಿಶೇಷ ಆದೇಶದ ಮೂಲಕ ಸರ್ಕಾರವು ಈ ಕಾಯ್ದೆಯ ನಿಬಂಧನೆಗಳಿಗೆ ಹೊಂದಿಕೆಯಾಗುವಂತೆ ಕಷ್ಟವನ್ನು ತೆಗೆದುಹಾಕುವ ಉದ್ದೇಶದಿಂದ ಅಗತ್ಯ ಅಥವಾ ಅನುಕೂಲಕರವಾಗಿರುವ ನಿಬಂದನೆಗಳನ್ನು ಮಾಡಬಹುದು: <u>ಆದರೆ ಈ ಕಾಯಿದೆಯ ಪ್ರಾರಂಭದ ನಂತರ ಎರಡು ವರ್ಷಗಳ ಅವಧಿ ಮುಗಿದ ನಂತರ ಅಂತಹ ಯಾವುದೇ ಆದೇಶವನ್ನು ಮಾಡಬಾರದು.</u> – ಇಲ್ಲಿ ಕಾಯ್ದೆ ಜಾರಿಯಲ್ಲಿ ಉಂಟಾಗುವ ತೊಂದರೆ ನಿವಾರಿಸಲು ಸಮಾನಾಂತರ ನಿಯಮಗಳನ್ನು ರಚಿಸಲು ಎರಡು ವರ್ಷ ಕಾಲಾವದಿಯನ್ನು ಮಾತ್ರ ನೀಡಲಾಗಿದೆ. ಅದರಂತೆ ಅನುಭಂದ–10 ರಲ್ಲಿ ತೋರಿರುವಂತೆ ಸರ್ಕ್ಯುಲರ್ ಹೊರಡಿಸಿ, ದರ್ಖಾಸ್ತ್ ಜಮೀನುಗಳ ಬಗ್ಗೆ ತನಿಖೆ ಮಾಡಿ ಭೂಮಿಗಳನ್ನು ಗುರುತಿಸುವಂತೆ ಲಿಸ್ಟ್ ತಯಾರಿಸುವಂತೆ 1979 ರಲ್ಲೇ ಆದೇಶಿಸಲಾಗಿದೆ. ಕಲಂ 6. ರ ರೀತ್ಯ ಅಂತಹ ಪಟ್ಟಿಯನ್ನು ಸಬ್ ರಿಜಿಸ್ಟ್ರಾರ್ ರವರಿಗೆ ಕಳಿಸಬೇಕಿರುತ್ತದೆ. ಕಲಂ. 6 ಹೀಗೆಂದಿದೆ, ಮಂಜೂರು ಮಾಡಿದ ಜಮೀನುಗಳ ವರ್ಗಾವಣೆಯ ನೋಂದಣಿಯನ್ನು ನಿಷೇಧಿಸುವುದು:–ಈ ಕಾಯ್ದೆ ಪ್ರಾರಂಭವಾದ ದಿನಾಂಕ ಅಥವಾ ನಂತರ ನೋಂದಣಿ ಕಾಯ್ದೆ 1908 ರಲ್ಲಿ ಏನಾದರೂ ಇದ್ದರೂ, ಈ ಕಾಯ್ದೆ ಅಥವಾ ಅನುದಾನದ ನಿಯಮಗಳಿಗೆ ಅನುಗುಣವಾಗಿ ನೋಂದಾಯಿತ ಅಧಿಕಾರಿಗೆ ಒದಗಿಸಲಾದ ಮಂಜೂರು ಮಾಡಿದ ಜಮೀನುಗಳ ಪಟ್ಟಿಯಲ್ಲಿ ಸೇರಿಸಲಾಗಿರುವ ಯಾವುದೇ ಮಂಜೂರು

ಭೂಮಿಯನ್ನು, ಯಾವುದೇ ನೋಂದಣಿ ಅಧಿಕಾರಿ ವರ್ಗಾವಣೆಗೆ ಸಂಬಂಧಿಸಿದ ಯಾವುದೇ ದಾಖಲೆಯನ್ನು ನೋಂದಾಯಿಸಲು ಸ್ವೀಕರಿಸುವುದಿಲ್ಲ, ಆದರೆ ಯಾವುದಾದರೂ ಅಂತಹ ವರ್ಗಾವಣೆ ಕಾಯ್ದೆ ಅನುಸಾರ ವರ್ಗಾವಣೆ ಆಗುತ್ತಿದ್ದರೆ ಅಥವ ಅನುದಾನದ ಶರತ್ತು ರೀತ್ಯ ವರ್ಗಾವಣೆ ಆಗುತ್ತಿದ್ದರೆ ಅಥವ ಗ್ರಾಂಟ್ ಕಾನೂನು ರೀತ್ಯ ವರ್ಗಾವಣೆ ಆಗುತ್ತಿದ್ದರೆ ಅಂತಹ ವರ್ಗಾವಣೆ ಹೊರತುಪಡಿಸಲಾಗಿದೆ. – ಇಲ್ಲಿ ಕಾಯ್ದೆ ಜಾರಿಯಾದ ತಾರೀಖಿನಿಂದ ಮತ್ತು ನಂತರದಲ್ಲಿ ನೊಂದಾವಣಾಧಿಕಾರಿಗಳಿಗೆ ಅಂತಹ ಗ್ರಾಂಟ್ ಜಮೀನಿನ ಪಟ್ಟಿಗಳನ್ನು ನೀಡಲು ಕಡ್ಡಾಯಗೊಳಿಸಿ ಅಂತಹ ಜಮೀನುಗಳನ್ನು ಕಡ್ಡಾಯವಾಗಿ ನೊಂದಾಯಿಸಬಾರದು ಎಂದೂ ಕೂಡ ಶಾಸನ ರಚಿಸಲಾಗಿದೆ. ಅಂತಹ ಶಾಸನದ ಕರ್ತವ್ಯವನ್ನು ನಿಭಾಯಿಸಲು ಅನುಭಂದ–10 ರಂತೆ ಆದೇಶವೂ ಆಗಿದೆ. – ಇದೇ ಕಾಯ್ದೆಯ ಕಲಂ 8 ರಲ್ಲಿ ಸದರಿ ಕಾಯ್ದೆ ಕಲಂ 4(2) ರಲ್ಲಿ ಸರ್ಕಾರಿ ಅನುಮತಿ ಇಲ್ಲದೆ ಖರೀದಿಸಲಾಗಿರುವುದನ್ನು ಸಂಜ್ಞೇಯ (ಕಾಗ್ನಿಸಿಬಲ್) ಅಪರಾಧ ಅಂತ ಗುರುತಿಸಲಾಗಿ ಇದಕ್ಕೆ ಗರಿಷ್ಟ ಆರು ತಿಂಗಳ ವರೆಗೆ ಶಿಕ್ಷೆ ಅಥವ 2000 ರೂ ವರೆಗೆ ದಂಡ ಅಥವ ಎರಡನ್ನೂ ವಿಧಿಸಲು ಶಾಸಕಾಂಗ ಘೋಷಿಸಿದೆ. ಇದರ ಜೊತೆಯಲ್ಲಿ ಕ್ರಿಮಿನಲ್ ಪ್ರೋಸೀಜರ್ ಕೋಡ್ ಕಲಂ 468 ಅನ್ನು ಗಮನಿಸಿದಾಗ ಅಂತಹ ಅಪರಾಧ ಜರುಗಿದ ತಾರೀಖಿನಿಂದ ಒಂದು ವರ್ಷದ ನಂತರ ಕೋರ್ಟ್ ಅಪರಾಧವನ್ನು ಪರಿಗಣಿಸಲು ಬರುವುದಿಲ್ಲ ಎಂದು ಹೇಳಲಾಗಿದೆ. ಕಲಂ 473 ರಲ್ಲಿ ಹೇಳಿರುವಂತೆ ವಿಳಂಬವನ್ನು ಸರಿಯಾದ ರೀತಿಯಲ್ಲಿ ವಿವರಿಸಲಾಗಿದ್ದರೆ, ನ್ಯಾಯದ ಹಿತದಲ್ಲಿ ಅದನ್ನು ಪರಿಗಣಿಸಬೇಕು ಎಂಬ ಅವಶ್ಯಕತೆ ಕಂಡುಬಂದಲ್ಲಿ, ನ್ಯಾಯಾಲಯವು ಅಂತಹ ಅಪರಾಧವನ್ನು ಒಂದು ವರ್ಷದ ನಂತರವೂ ಪರಿಗಣಿಸಬಹುದು. ಇಲ್ಲಿ ಪರಿಗಣಿಸಬೇಕು ಎಂಬ ಕಡ್ಡಾಯತೆ ಇಲ್ಲ. – ಹೀಗೆ ಕಾಯ್ದೆಯಲ್ಲಿನ ಮತ್ತು ಅದಕ್ಕೆ ಸಂಬಂದಿಸಿದ ಕಾನೂನು ಗಳಲ್ಲಿ ಒಂದರಿಂದ ಎರಡು ವರ್ಷಗಳ ವರೆಗೆ ಮಿತಿಯನ್ನು ಗುರುತಿಸಲಾಗಿದೆ. ಕಾಯ್ದೆಯಲ್ಲಿ ಕಡ್ಡಾಯಗೊಳಿಸಲಾದ ಗ್ರಾಂಟ್ ಜಮೀನು ಲಿಸ್ಟ್ ತಯಾರಿಸಿ ನೊಂದಾವಣಾಧಿಕಾರಿಗಳಿಗೆ ನೀಡಲು ನಿರ್ಲಕ್ಷ್ಯ ವಹಿಸುವುದೂ ಎರಡು

ವರ್ಷದ ಒಳಗೆ ಸರ್ಕಾರದಿಂದ ಅಂತಹ ಆದೇಶ ಮಾಡಿಯೂ ಸರಿಪಡಿಸಲಾಗದೆ ಇರುವುದಕ್ಕೆ – 01–01–1979 ರವರೆಗೆ ಆಗಿರುವ ಗ್ರಾಂಟ್ ಜಮೀನುಗಳ ಉಲ್ಲಂಘನೆಗಳ ವಿಚಾರವಾಗಿ ಅಲ್ಲಿಂದ ಎರಡು ವರ್ಷದ ವರೆಗೆ ಪರಿಶೀಲಿಸಿ ಕ್ರಮ ಜರುಗಿಸುವ ಬಗ್ಗೆ ಆದೇಶ ಹೊರಡಿಸಿ ಮುಂದಾಗುವ ಅಧಿಕಾರ ಇರುತ್ತದೆ. ಆ ನಂತರವೂ ವಿಫಲತೆ ಸರ್ಕಾರದ ಮಟ್ಟದಲ್ಲಿ ಆದರೆ ಅದು ಸಕಾರಣಬದ್ಧ ವಿಳಂಬವೇ.?

ಇನ್ನೊಂದು ಕಲಂ 3(2) ರಲ್ಲಿ ಹೇಳಿರುವಂತೆ, ಈ ಕಾಯ್ದೆಯಲ್ಲಿನ ಪದಗಳು ಮತ್ತು  ತಿಳಿಪಡಿಸುವಿಕೆಗಳು (ವರ್ಡ್ಸ್ ಅಂಡ್ ಎಕ್ಸಪ್ರೆಷನ್ಸ್) ವ್ಯಾಖ್ಯಾನಿಸಿಲ್ಲವಾದರೆ, ಕರ್ನಾಟಕ ಭೂ ಕಂದಾಯ ಕಾಯ್ದೆ 1964 ರಲ್ಲಿ ನಿಯೋಜಿಸಲಾದ ಅರ್ಥವನ್ನು ಹೊಂದಿರತಕ್ಕದ್ದು, ಎಂದಿದೆ.

1. ಕರ್ನಾಟಕ ಭೂ ಕಂದಾಯ ಕಾಯ್ದೆ ಕಲಂ 128 ರಲ್ಲಿ ನೊಂದಾಯಿತ ವರ್ಗಾವಣೆಗಳನ್ನು ನೊಂದಾವಣಾಧಿಕಾರಿ ಸೂಕ್ತ ಶುಲ್ಕ ಕಟ್ಟಿಸಿಕೊಂಡು ಅಂತಹ ವ್ಯವಸಾಯ ಜಮೀನಿನ ನೊಂದಾವಣಿ ವಿವರಗಳನ್ನು ಕಂದಾಯ ಇಲಾಖೆಗೆ ಕಳಿಸಿಕೊಡುತ್ತಾರೆ.

2. ಅಂತಹ ವರ್ಗಾವಣೆಗಳನ್ನು ಕಲಂ 129(6) ರಲ್ಲಿ ಸರಿಯಾಗಿದೆ ಎಂದು ಪರಿಶೀಲಿಸಿ ಪ್ರಮಾಣೀಕರಿಸಬೇಕಿರುತ್ತದೆ, ನಂತರವಷ್ಟೇ ಆರ್.ಟಿ.ಸಿ (ಪಹಣಿ) ಯಲ್ಲಿ ನಮೂದಿಸಲಾಗುತ್ತದೆ.

3. ಅಂತಹ ಪ್ರಮಾಣೀಕರಿಸಿ ನಮೂದಿಸಲಾದದ್ದನ್ನು ಸರಿಯಲ್ಲವೆಂದು ರುಜುವಾತು ಪಡಿಸುವವರೆಗೆ ಕಲಂ 133 ರಲ್ಲಿ ಅದರ ಸತ್ಯತೆ ಬಗ್ಗೆ ಕಾನೂನು ರೀತ್ಯ ಊಹೆ ಇರುತ್ತದೆ.

4. ಅಂತಹ ಪ್ರಮಾಣೀಕರಿಸಿ ನಮೂದಿಸಲಾದದ್ದನ್ನು, ಹಾಗೆ ನಮೂದಿಸಲಾಗಿದೆ ಎಂಬುದು ತಿಳಿವಳಿಕೆಗೆ ಬಂದ ನಂತರ ಎರಡು ತಿಂಗಳಲ್ಲಿ ಅದನ್ನು ಪ್ರಶ್ನಿಸಿ ಅಪೀಲು ಸಲ್ಲಿಸಬಹುದಾಗಿರುತ್ತದೆ, ಎನ್ನುತ್ತದೆ ಕಲಂ 136(2)

5. ಕಲಂ 56 ರಲ್ಲಿ ಹೇಳಿರುವಂತೆ ಕೆಲವು ಸೂಚಿತ ಕಂದಾಯ ಅಧಿಕಾರಿಗಳು ಕೆಳ ಅಧಿಕಾರಿಗಳು ನಿರ್ವಹಿಸಿರುವ ದಾಖಲೆ ಅಥವ ವಿಚಾರಣೆ ಅಥವ ನಡಾವಳಿಗಳು ಕಾನೂಬದ್ಧತೆಯಿಂದ ಕೂಡಿದೆಯೇ ಎಂಬ ತಮ್ಮ

ಸಂತೃಪ್ತಿಗಾಗಿ ಪರಿಶೀಲನೆಯನ್ನು ಅರ್ಜಿ ಕೊಟ್ಟಿರುವುದಾದರೆ ನಾಲ್ಕು ತಿಂಗಳ ಒಳಗೆ, ಸ್ವಯಂ ತಾವೇ ಪರ್ಶೀಲನೆಗೆ ಇಳಿದರೆ ಯಾವುದೇ ವೇಳೆಯಲ್ಲಿ ಮೂರು ವರ್ಷದ ಒಳಗೆ ಪರಿಶೀಲಿಸಬೇಕಿರುತ್ತದೆ.

6. ಕಲಂ 51 ರಲ್ಲಿ ಮೊದಲನೇ ಅಪೀಲಿಗೆ 60 ದಿನ ಕಾಲಮಿತಿ ನೀಡಲಾಗಿದೆ. ಎರಡನೇ ಅಪೀಲಿಗೆ 90 ದಿನ ಕಾಲಮಿತಿ ನೀಡಲಾಗಿದೆ. ಕಲಂ 52 ರಲ್ಲಿ ಲಿಮಿಟೇಷನ್ ಕಾಯ್ದೆ 1963 ರ ಕಲಂ 4,5,12 ಅನ್ವಯಿಸುವಿಕೆಯನ್ನು ಘೋಷಿಸಲಾಗಿದೆ. ಕಲಂ 5 ರಲ್ಲಿ ವಿಳಂಬಕ್ಕೆ ಕಾರಣವನ್ನು ನೀಡಬಹುದಾಗಿರುತ್ತದೆ.

ಹೀಗೆ ಕರ್ನಾಟಕ ಭೂ ಕಂದಾಯ ಕಾಯ್ದೆಯಲ್ಲಿ 60 ದಿನದಿಂದ 3 ವರ್ಷಗಳ ವರೆಗೆ ಕಾಲಮಿತಿಯನ್ನು ವಿವಿದತೆಯಲ್ಲಿ ನೀಡಿ ಅರ್ಥೈಸಲಾಗಿದೆ. ಕಂದಾಯ ದಾಖಲಾತಿಗಳ ನಿರ್ವಹಣೆ ಮತ್ತು ಉಲ್ಲೇಕಗಳ ಕಾನೂನು ಬದ್ದತೆ ಬಗ್ಗೆ ಪಿ.ಟಿ.ಸಿ.ಎಲ್ ಕಾಯ್ದೆಯಲ್ಲಿ ವ್ಯಾಖ್ಯಾನಿಸಲಾಗಿಲ್ಲ. ಆದರೆ ಅಂತಹ ವ್ಯಾಖ್ಯಾನಗಳನ್ನು ಪಿ.ಟಿ.ಸಿ.ಎಲ್ ಕಾಯ್ದೆ ಕಲಂ 3 (2) ರಲ್ಲಿ ಉಚ್ಚರಿಸಲಾಗಿದೆ. ಪಿ.ಟಿ.ಸಿ.ಎಲ್ ಕಾಯ್ದೆ ಕಲಂ 6 ಮತ್ತು 12 ರಲ್ಲೂ ಅಂತಹ ಜವಾಬ್ದಾರಿಗಳನ್ನು ನಿರ್ವಹಿಸಲು ಕಂದಾಯ ಅಧಿಕಾರಿಗಳಿಗೆ ಸ್ಪಷ್ಟ ಸೂಚನೆ ಇದೆ. ಅಂತಹ ನಿರ್ವಹಣೆ ಹೇಗೆ ಮಾಡಬೇಕು ಅದರ ಕಾನೂನು ಮಹತ್ವ ಏನು ಎಂಬ ವ್ಯಾಖ್ಯಾನ ಕರ್ನಾಟಕ ಭೂ ಕಂದಾಯ ಕಾಯ್ದೆಯಲ್ಲಿ ಇದೆ. ಒಟ್ಟಾರೆ ಈ ಎಲ್ಲಾ ಕಾಯ್ದೆ ಸುತ್ತಲಿನ ಅಂಶಗಳನ್ನು ಗಮನಿಸಿದಾಗ ವಿವಿದ ವ್ಯಾಖ್ಯಾನಿತ ಅಂಶಗಳು ಸಕಾರಣ ಬದ್ದ ಅವಧಿಯನ್ನು ನಿರ್ದರಿಸಲು ವಿವಿದ ಕೇಸುಗಳ ವಾಸ್ತವಿಕತೆಯ ಚಿತ್ರಣದಂತೆ ಪರಿವೀಕ್ಷಿಸಿ ಮುಂದಾದರೆ ಈ ಕಾನೂನಿಗೆ ನಿಜವಾದ ಅರ್ಥ ಸಿಕ್ಕೀತು.

ಈ ರೀತಿಯ ಕಾನೂನು ಪಿ.ಟಿ.ಸಿ.ಎಲ್ ಕಾಯ್ದೆ ಅನ್ವಯ ಆಗುವ ಗ್ರಾಂಟ್ ಜಮೀನಿನ ಪ್ರತ್ಯೇಕ ಲಿಸ್ಟ್ (ಪಟ್ಟಿ) ತಯಾರಿಸಿ ಉಪನೊಂದಾವಣಾಧಿಕಾರಿಗೆ ನೀಡಬೇಕಾದ ಕರ್ತವ್ಯದ ನಿಬಂದನೆಗಳು ಕಡ್ಡಾಯವೇ ಎಂಬ ಬಗ್ಗೆ ಪರಿಶೀಲಿಸಲು ಕಲಂ 6 ರಲ್ಲಿ "ಶಲ್" ಎಂಬ ಪದವನ್ನು ಉಪಯೋಗಿಸಲಾಗಿದೆ. ಅಲ್ಲಿ ನೊಂದಾವಣಾಧಿಕಾರಿಯ ಬಳಿ

ಅಂತಹ ಪಟ್ಟಿ ನೀಡಬೇಕಾದವರು ಕಂದಾಯ ಇಲಾಖೆಯವರು ಕಲಂ 12 ರಲ್ಲಿ ಅಂತಹ ಉದ್ದೇಶಕ್ಕೆ ಸರ್ಕಾರಿ ಸರ್ಕ್ಯುಲರ್ ಹೊರಡಿಸಿ ಆದೇಶಿಸಲಾಗಿದೆ. ಇಷ್ಟಿದ್ದರೂ ಇಲ್ಲಿವರೆಗೆ ಅಂತಹ ಕೆಲಸ ಆಗದೆ ಇರುವುದಕ್ಕೆ ಕಾಯ್ದೆ ಬೇಕಾಬಿಟ್ಟಿ, ಅನಿಯಂತ್ರಿತವಾಗಿ, ನಿರಂಕುಶವಾಗಿ (ಅರ್ಬಿಟ್ರರಿಯಾಗಿ) ಜಾರಿ ಮಾಡಲಾಗುತ್ತಿದೆ ಎಂದು ಬಾಸವಾಗುವುದಿಲ್ಲವೆ.

**ಕಾಯ್ದೆ ಜಾರಿಯಲ್ಲಿ ಅನಿಯಂತ್ರತೆ ಸಂವಿಧಾನ ಬದ್ಧತೆ**

ಕಾನೂನು ಜಾರಿ ಮಾಡುವ ಅಧಿಕಾರಿಗಳ ಅನಿಯಂತ್ರಿತ ಕರ್ತವ್ಯ ಲೋಪದ ಬಗ್ಗೆ ಮಾರ್ಗದರ್ಶನವನ್ನು ನೀಡಿರುವ ಸುಪ್ರೀಮ್ ಕೋರ್ಟ್ ಪ್ರಕರಣವೊಂದರಲ್ಲಿ,[1] ವಕೀಲರನ್ನು ಸರ್ಕಾರದ ನಿಮಿತ್ತ ನೇಮಿಸುವ ಬಗ್ಗೆ ಅನಿಯಂತ್ರಿತ ವರ್ತನೆ ಕಂಡಿಸುತ್ತ ಹೀಗೆಂದಿದೆ, "(i) ಸರ್ಕಾರ ಮತ್ತು ಎಲ್ಲಾ ಸಾರ್ವಜನಿಕ ಸಂಸ್ಥೆಗಳು ಅವುಗಳಲ್ಲಿರುವ ಅಧಿಕಾರದ ಟ್ರಸ್ಟಿಗಳಾಗಿವೆ. (ii) ಅವರ ಮೇಲೆ ಇಟ್ಟಿರುವ ನಂಬಿಕೆಯನ್ನು ಉತ್ತಮ ರೀತಿಯಲ್ಲಿ ವಿಸರ್ಜಿಸುವುದು ಅವರ ಪ್ರಾಥಮಿಕ ಕರ್ತವ್ಯ. (iii) ಸೇವಕರು, ಏಜೆಂಟರು, ಸಲಹೆಗಾರರು ಮತ್ತು ಪ್ರತಿನಿಧಿಗಳನ್ನು ತೊಡಗಿಸಿಕೊಳ್ಳಲು, ನೇಮಿಸಿಕೊಳ್ಳಲು ಅಥವಾ ನೇಮಕ ಮಾಡುವ ಅಧಿಕಾರವು ಯಾವುದೇ ಅಧಿಕಾರವನ್ನು ನ್ಯಾಯಯುತ, ಸಮಂಜಸವಾದ, ತಾರತಮ್ಯರಹಿತ ಮತ್ತು ವಸ್ತುನಿಷ್ಠ ರೀತಿಯಲ್ಲಿ ಚಲಾಯಿಸಲು ಬದ್ಧರಾಗಿರಬೇಕು. (iv) ನಮ್ಮಂತಹ ಸಾಂವಿಧಾನಿಕ ಪ್ರಜಾಪ್ರಭುತ್ವದಲ್ಲಿ ನ್ಯಾಯಯುತ, ಸಮಂಜಸವಾದ, ತಾರತಮ್ಯರಹಿತ ಮತ್ತು ವಸ್ತುನಿಷ್ಠ ರೀತಿಯಲ್ಲಿ ಕಾರ್ಯನಿರ್ವಹಿಸುವ ಕರ್ತವ್ಯವು ಕಾನೂನಿನ ನಿಯಮದ ಒಂದು ಅಂಶವಾಗಿದೆ. (v) ಭಾರತದ ಸಂವಿಧಾನದ 14 ನೇ ವಿಧಿಯಿಂದ ಖಾತರಿಪಡಿಸಿದ ಸಮಾನತೆಯ ಷರತ್ತಿಗೆ ಆಕ್ರಮಣಕಾರಿಯಾಗುವುದು ಮತ್ತು ಅನಿಯಂತ್ರಿತ ಕ್ರಿಯೆಗೆ ಕಾನೂನಿನ ನಿಯಮದಿಂದ ನಿಯಂತ್ರಿಸಲ್ಪಡುವ ರಾಜಕೀಯದಲ್ಲಿ ಸ್ಥಾನವಿಲ್ಲ. ........." ಈ ಆದೇಶದಲ್ಲಿ ಸರ್ಕಾರ ಮತ್ತು ಅದರ ಅಧೀನ ಅಧಿಕಾರಿಗಳ ಅನಿಯಂತ್ರಿತ

---

[1] ಪಂಜಾಬ್ ರಾಜ್ಯ ವಿ. ಬ್ರಿಜೇಶ್ವರ್ ಸಿಂಗ್ – ಎ.ಐ.ಆರ್ 2016 ಎಸ್.ಸಿ 1629

ಕರ್ತವ್ಯ ಉಲ್ಲಂಘನೆ ಸಂವಿಧಾನಭಾಹಿರ ಮತ್ತು ಸಮಾನತೆಯನ್ನು ಉಲ್ಲಂಘಿಸಿದಂತೆ ಎಂದು ಸ್ಪಷ್ಟಪಡಿಸಲಾಗಿದೆ.

"ಕಾನೂನುಬದ್ಧವಾಗಿ ಮತ್ತು ತಾತ್ವಿಕವಾಗಿ ಸಮಂಜಸತೆಯ ತತ್ವವು (ಸಕಾರಣಬದ್ಧತೆಯ ತತ್ವವು) ಸಮಾನತೆಯ ಅತ್ಯಗತ್ಯ ಅಂಶವಾಗಿದೆ ಮತ್ತು ಅನಿಯಂತ್ರಿತವಲ್ಲದ್ದು ವಿಧಿ 14 ಅನ್ನು ಸರ್ವವ್ಯಾಪಿಯಾಗಿ ಅರಳಿಸುತ್ತ ವ್ಯಾಪಿಸುತ್ತದೆ, ಎಂದು ನ್ಯಾಯಾಲಯವು ಅಭಿಪ್ರಾಯಪಟ್ಟಿದೆ. ರಾಜ್ಯ ಕ್ರಿಯೆಯಲ್ಲಿ ಎಲ್ಲಿಯಾದರೂ ಅನಿಯಂತ್ರತೆ ಇದ್ದಲ್ಲಿ, ಅದು ಶಾಸಕಾಂಗವಿರಬಹುದು ಅಥವಾ ಕಾರ್ಯಾಂಗವಿರಬಹುದು ವಿಧಿ 14 ಕಾರ್ಯರೂಪಕ್ಕೆ ಬರುತ್ತದೆ ಮತ್ತು ಅದೇ ರೀತಿ ಅಂತದ್ದನ್ನು ತೊಡೆದುಹಾಕುತ್ತದೆ ಎಂದು ಸೂಚಿಸುತ್ತದೆ. ಸಮಂಜಸತೆ ಮತ್ತು ಅನಿಯಂತ್ರತೆ-ರಹಿತ ಪರಿಕಲ್ಪನೆಯು ಸಾಂವಿಧಾನಿಕ ಯೋಜನೆಯನ್ನು ವ್ಯಾಪಿಸಿದೆ ಮತ್ತು ಇದು ಒಂದು ಸುವರ್ಣ ದಾರವಾಗಿದೆ, ಇದು ಇಡೀ ಸಂವಿಧಾನದ ಮೂಲಕ ಸಾಗುತ್ತದೆ".[1]

ಸುಪ್ರೀಮ್ ಕೋರ್ಟ್ ವ್ಯಾಖ್ಯಾನಿಸಿರುವಂತೆ, "ಸಮಾನತೆ ಮತ್ತು ಅನಿಯಂತ್ರಿತತೆಯನ್ನು ಪ್ರಮಾಣಿತ ಶತ್ರುಗಳು ಇದ್ದಂತೆ, ಒಂದು ಗಣರಾಜ್ಯದಲ್ಲಿ ಕಾನೂನಿನ ನಿಯಮಕ್ಕೆ ಸೇರಿದೆ ಮತ್ತು ಇನ್ನೊಂದು ನಿರಂಕುಶ ರಾಜನ ಆಶಯಗಳು ಮತ್ತು ಬುದ್ಧಿಚಾಂಚಲ್ಯಕ್ಕೆ ಸೇರಿದೆ.[2]

ಸಂವಿಧಾನ ವಿಧಿ 14 ರಲ್ಲಿ ರದ್ದಾಗುವುದೇ ಅನಿಯಂತ್ರಿತತೆ ಮತ್ತು ಅನಿಯಂತ್ರಿತವಾದ ಯಾವುದೇ ಕ್ರಮ, ಇದು ಸಮಾನತೆಯ ನಿರಾಕರಣೆಯನ್ನು ಒಳಗೊಂಡಿರುತ್ತದೆ ಎಂದು ಈಗ ಇತ್ಯರ್ಥಪಡಿಸಲಾಗಿದೆ.[3]

ರಾಜ್ಯದ ಅಂಗಸಂಸ್ಥೆಯ ಅಥವಾ ರಾಜ್ಯದ ಪ್ರತಿಯೊಂದು ಕ್ರಿಯೆಯೂ ಕಾರಣದಿಂದ ತಿಳಿಸಬೇಕು ಮತ್ತು ಅಷ್ಟು ಕಾರಣದಿ ಮಾಹಿತಿ

---

[1] ಮನೇಕಗಾಂಧಿ ವಿ. ಯು.ಆಫ್.ಇ – 1978 (2) ಎಸ್.ಸಿ.ಆರ್ 621

[2] ರೊಯಪ್ಪ ವಿ. ತಮಿಳುನಾಡು ರಾಜ್ಯ – 1974 (4) ಎಸ್.ಸಿ.ಸಿ 3

[3] ನಕ್ರ ವಿ. ಯು.ಆಫ್.ಇ – 1983 (1) ಎಸ್.ಸಿ.ಸಿ 305

ನೀಡದ ಕ್ರಮಗಳನ್ನು ಸಂವಿಧಾನದ 226 ಮತ್ತು 32 ನೇ ವಿಧಿ ಅಡಿಯಲ್ಲಿ ಪ್ರಶ್ನಿಸಬಹುದು[1]

ಶಾಸಕಾಂಗದ ನೈಜ ಉದ್ದೇಶವನ್ನು ಕಂಡುಹಿಡಿಯಲು, (1) ನ್ಯಾಯಾಲಯವು ಇತರ ವಿಷಯಗಳ ನಡುವೆ, ಶಾಸನದ ಸ್ವರೂಪ ಮತ್ತು ವಿನ್ಯಾಸವನ್ನು ಪರಿಗಣಿಸಬಹುದು (2). ಅದನ್ನು (ಶಾಸನವನ್ನು) ಒಂದು ರೀತಿಯಲ್ಲಿ ಅಥವಾ ಇನ್ನೊಂದು ರೀತಿಯಲ್ಲಿ ನಿರ್ಣಯಿಸುವುದರಿಂದ ಉಂಟಾಗುವ ಪರಿಣಾಮಗಳನ್ನು ಪರಿಗಣಿಸಬಹುದು, (3). ಇತರ ನಿಬಂಧನೆಗಳ ಪ್ರಭಾವ ಮತ್ತು ಅವಶ್ಯಕತೆಯಿಂದ ಪ್ರಶ್ನೆಯಲ್ಲಿರುವ ನಿಬಂಧನೆಗಳನ್ನು ಅನುಸರಿಸುವುದನ್ನು ತಪ್ಪಿಸಲಾಗುವುದೆ, (4) ನಿಬಂಧನೆಗಳ ಅನುಸರಣೆಯ ಆಕಸ್ಮಿಕತೆಯನ್ನು ಶಾಸನವು ಒದಗಿಸುತ್ತದೆಯೇ, (5) ನಿಬಂಧನೆಗಳ ಅನುಸರಣೆಯಿಲ್ಲದಿರುವಾಗ ಕೆಲವು ದಂಡದಿಂದ ಅಥವಾ ಇಲ್ಲದೆ ನೀಡಲಾಗಿದೆಯೇ, (6) ಅದರಿಂದ ಹರಿಯುವ ಗಂಭೀರ ಅಥವಾ ಕ್ಷುಲ್ಲಕ ಪರಿಣಾಮಗಳು, (7) ಎಲ್ಲಕ್ಕಿಂತ ಹೆಚ್ಚಾಗಿ, ಶಾಸನದ ವಸ್ತುವನ್ನು ಸೋಲಿಸಲಾಗುತ್ತದೆಯೇ ಅಥವಾ ಹೆಚ್ಚಿಸಲಾಗುತ್ತದೆಯೇ ಎಂಬುದನ್ನು ತಿಳಿಯುವ ಸಂದರ್ಭಗಳಾಗಿರುತ್ತವೆ. ಎಂದು ವ್ಯಾಖ್ಯಾನಿಸುತ್ತದೆ ಸುಪ್ರೀಮ್ ಕೋರ್ಟಿನ ಸಂವಿಧಾನ ಪೀಠ.[2]

"ಸಾರ್ವಜನಿಕ ಕರ್ತವ್ಯಗಳನ್ನು ರಚಿಸುವ ಶಾಸನದ ನಿಬಂಧನೆಗಳನ್ನು ಸಾಮಾನ್ಯವಾಗಿ ಹೇಳುವುದಾದರೆ ಡೈರೆಕ್ಟರಿ (ಸೂಚಕವಾಗಿದೆ) ಮತ್ತು ಖಾಸಗಿ ಹಕ್ಕುಗಳನ್ನು ನೀಡುವುದರಲ್ಲಿ ಕಡ್ಡಾಯವಾಗಿರುತ್ತದೆ (ಮ್ಯಾಂಡೆಟರಿ) ಎಂದು ಚೆನ್ನಾಗಿ ತೀರ್ಮಾನಿಸಲಾಗಿದೆ. ಕಾನೂನಿನ ನಿಬಂಧನೆಗಳು ಸಾರ್ವಜನಿಕ ಕರ್ತವ್ಯದ ಕಾರ್ಯನಿರ್ವಹಣೆಗೆ ಸಂಬಂಧಿಸಿದಾಗ, ಈ ಕರ್ತವ್ಯವನ್ನು ನಿರ್ಲಕ್ಷಿಸಿ ಮಾಡಿದ ಅಂತಹ ಕೃತ್ಯಗಳನ್ನು ಹಿಡಿದಿಟ್ಟುಕೊಳ್ಳುವುದು ಗಂಭೀರವಾದ ಸಾಮಾನ್ಯ ಅನಾನುಕೂಲತೆ ಅಥವಾ ಅನ್ಯಾಯವನ್ನು ಮಾಡುತ್ತದೆ. ಅಂತಹ ಅನ್ಯಾಯಕ್ಕೆ

---

[1] ದ್ವಾರ್ಕಾದಾಸ್ ವಿ. ಬೋರ್ಡ್ – 1989 (3) ಎಸ್.ಸಿ.ಸಿ 293

[2] ಯು.ಪಿ. ರಾಜ್ಯ ವಿ. ಬಾಬು ರಾಮ್ – ಎ.ಐ.ಆರ್ 1961 ಎಸ್.ಸಿ 751

ಒಳಗಾದ ವ್ಯಕ್ತಿಗಳಿಗೆ ಕರ್ತವ್ಯ ನಿರ್ವಹಿಸುವವರ ಮೇಲೆ ಹಿಡಿತ ವಿಲ್ಲದಾಗ ಅಂತಹ ಕೃತ್ಯಗಳು ಶೂನ್ಯ ಮತ್ತು ಅನೂರ್ಜಿತವಾಗುತ್ತದೆ. ಅದೇ ಸಮಯದಲ್ಲಿ ಶಾಸಕಾಂಗದ ಮುಖ್ಯ ಉದ್ದೇಶವನ್ನು ಉತ್ತೇಜಿಸುವುದಿಲ್ಲ, ಅಂತಹ ನಿಬಂಧನೆಗಳನ್ನು ಡೈರೆಕ್ಟರಿಯಾಗಿ (ಸೂಚಿತವಾಗಿ) ಮಾತ್ರ ಇಟ್ಟುಕೊಳ್ಳುವುದು ನ್ಯಾಯಾಲಯಗಳ ಅಭ್ಯಾಸವಾಗಿದೆ, ಅವುಗಳ ನಿರ್ಲಕ್ಷ್ಯದಿ ಮಾಡಿದ ಕೃತ್ಯಗಳ ಸಿಂಧುತ್ವಕ್ಕೆ ಪರಿಣಾಮ ಬೀರುವುದಿಲ್ಲ".[1] – ಇಲ್ಲಿ ಪಿ.ಟಿ.ಸಿ.ಎಲ್ ಕಾಯ್ದೆಯಲ್ಲಿನ ಕಲಂ 6 ಮತ್ತು 12 ರಲ್ಲಿನ ಉಲ್ಲೇಖಿತ ಕರ್ತವ್ಯಗಳು ಖಾಸಗಿ ಹಕ್ಕುಗಳನ್ನು ನೀಡುವುದರಿಂದ ಮತ್ತು ಕಸಿದುಕೊಳ್ಳುವುದರಿಂದ ಈ ಕಾನೂನು ಕರ್ತವ್ಯಗಳು ಕಡ್ಡಾಯವಾಗಿರುತ್ತದೆ ಎಂದು ವ್ಯಾಖ್ಯಾನಿಸಬಹುದು, ಅಂತಹ ಕಡ್ಡಾಯ ಕರ್ತವ್ಯ ನಿರ್ವಹಣೆ ಇಲ್ಲದೆ ನಿರಂಕುಶವಾಗಿ ಕಾನೂನು ಜಾರಿ ಸಂವಿಧಾನ ಬದ್ದವೇ ಎಂಬ ಅಂಶದಲ್ಲಿ ತೀರ್ಪು ಹೊರಬರಬೇಕಿದೆ.

"..........ಶಾಸನದಲ್ಲಿ ಇತರ ನಿಬಂಧನೆಗಳ ಪ್ರಭಾವ ಮತ್ತು ಅಂತಹ ನಿಬಂಧನೆಗಳನ್ನು ಪಾಲಿಸದ ಇದ್ದಾಗ ಪರಿಣಾಮಗಳನ್ನು ಪರೀಕ್ಷಿಸಲು ಸಹ ಅನುಮತಿಸಲಾಗಿದೆ; ನಿಬಂಧನೆಗಳ ಜೀವಶಾಸ್ತ್ರವು ಸ್ವತಃ ನಿರ್ಣಾಯಕ ಅಂಶವಲ್ಲ. ಕ್ರಮವಾಗಿ `ಶಲ್ 'ಅಥವಾ` ಮೇ' (ಕಡ್ಡಾಯ ಅಥವ ಆಗಬಹುದು) ಪದಗಳ ಬಳಕೆಯು ಕಡ್ಡಾಯ ಅಥವಾ ಸೂಚಕ ಅಕ್ಷರವನ್ನು ಸೂಚಿಸುತ್ತದೆ, ಆದರೆ ಯಾವಾಗಲೂ ಅಲ್ಲ. ಅನ್ವಯಿಸಬೇಕಾದ ಪರೀಕ್ಷೆಯೆಂದರೆ, ನಿಬಂಧನೆಯನ್ನು ಅನುಸರಿಸದಿರುವುದು ಸಂಪೂರ್ಣ ವಿಚಾರಣೆಯನ್ನು ಅಮಾನ್ಯಗೊಳಿಸುತ್ತದೆಯೆ ಅಥವಾ ಇಲ್ಲವೇ ಎಂಬುದು...."[2]

"ಕೇಂದ್ರ ಮತ್ತು ರಾಜ್ಯ ಸರ್ಕಾರಗಳು ಸೇರಿದಂತೆ ಸಂಬಂಧಪಟ್ಟವರೆಲ್ಲರೂ ತಮ್ಮ ಕರ್ತವ್ಯಗಳನ್ನು ಮತ್ತು ಕಾರ್ಯಗಳನ್ನು ಸಮನ್ವಯದಿಂದ ಮತ್ತು ನಿಗದಿತ ಸಮಯದೊಳಗೆ ಪರಿಣಾಮಕಾರಿಯಾಗಿ ಮತ್ತು ತ್ವರಿತವಾಗಿ ನಿರ್ವಹಿಸುವ ಜವಾಬ್ದಾರಿಯನ್ನು ಹೊಂದಿರುತ್ತಾರೆ. ಕೇಂದ್ರ

---

[1] ದತ್ತಾತ್ರಾಯ ವಿ. ಬಾಂಬೆ ರಾಜ್ಯ – ಎ.ಐ.ಆರ್ 1952 ಎಸ್.ಸಿ 181

[2] ಜಾರ್ಜ್ ವಿ. ಸ್ಪೆಷಲ್ ತಹಶೀಲ್ದಾರ್ – 2010 (13) ಎಸ್.ಸಿ.ಸಿ 98

ಅಥವಾ ರಾಜ್ಯ ಸರ್ಕಾರವು ಒಂದು ನಿಬಂಧನೆಯ ಶಾಸನಬದ್ಧ ಅವಶ್ಯಕತೆಗಳನ್ನು, ಕಾಯ್ದೆಯ ಉದ್ದೇಶವನ್ನು ನಿರಾಶೆಗೊಳಿಸಲು ಯಾವುದೇ ಅಧಿಕಾರವನ್ನು ಯಾವುದೇ ನ್ಯಾಯಾಲಯವು ಅನುಮತಿಸುವುದಿಲ್ಲ ......... ಯಾವುದೇ ನಿರ್ದಿಷ್ಟ ಸಮಯ ಮಿತಿಯನ್ನು ನಿಗದಿಪಡಿಸದಿದ್ದಲ್ಲಿ, ಸಮಂಜಸವಾದ ಸಮಯದ ಪರಿಕಲ್ಪನೆಯು ಅಂತಹ ಕ್ರಿಯೆಯನ್ನು ಪೂರ್ಣಗೊಳಿಸಲು ಕ್ಷೇತ್ರವನ್ನು ಹಿಡಿದಿಟ್ಟುಕೊಳ್ಳುತ್ತದೆ ಎಂಬುದು ಶಾಸನಬದ್ಧ ವಿವರಣೆಯ ಒಂದು ನಿಯಮವಾಗಿದೆ. ವ್ಯಾಖ್ಯಾನ ಪ್ರಕ್ರಿಯೆಯಲ್ಲಿ ನ್ಯಾಯಾಲಯಗಳು ಖಾಲಿಭಾಗವನ್ನು ಪೂರೈಸಬಲ್ಲವು, ಇದು ಕಾಯ್ದೆಯ ಉದ್ದೇಶ ಮತ್ತು ಶಾಸಕಾಂಗದ ಉದ್ದೇಶವನ್ನು ಸಾಧಿಸಲು ಸಹಾಯ ಮಾಡುತ್ತದೆ ಮತ್ತು ನಿಬಂಧನೆಗಳನ್ನು ಪರಿಣಾಮಕಾರಿ ಮತ್ತು ಕಾರ್ಯರೂಪಕ್ಕೆ ತರುತ್ತದೆ."[1] – ಪಿ.ಟಿ.ಸಿ.ಎಲ್ ಕಾಯ್ದೆಯೊಳಗೆ ಇರುವ ಕರ್ತ್ಯವ್ಯಗಳನ್ನು ನಿರ್ವಹಿಸಲು ವಿಫಲವಾಗಿರುವ ಕಾರಣಕ್ಕೆ ಸಕಾರಣಬದ್ದ ಅವಧಿ ನಿರ್ಧರಿಸಲೂ ಅಂತಹ ಕರ್ತವ್ಯ ನಿರ್ಲಕ್ಷತೆ ಪರಿಗನಿಸಬಹುದಾಗಿರುತ್ತೆ ಎನ್ನುವ ತೀರ್ಪು ಹೊರಬರಬೇಕಿದೆ.

ಈ ಬಗ್ಗೆ ಕರ್ನಾಟಕ ಹೈಕೋರ್ಟಿನ ಮುಂದಿನ ಪ್ರಕರಣವೊಂದರಲ್ಲಿ, ಕಲಂ 6 ರ ರೀತ್ಯ ಸಬ್–ರಿಜಿಸ್ಟ್ರಾರ್ ನೊಂದಾವಣಿ ಮಾಡಬಾರದಿತ್ತು ಹಾಗೆ ಮಾಡದಿದ್ದಲ್ಲಿ ಅರ್ಜಿದಾರನು ಖರೀದಿಸುತ್ತಿರಲಿಲ್ಲ ಎಂದು ವಾದಿಸಲಾಗಿರುತ್ತದೆ. ಅದಕ್ಕೆ ನ್ಯಾಯಾಲಯ ಅರ್ಜಿದಾರನು ಕಾನೂನು ಅಭಿಪ್ರಾಯ ಪಡೆದು ಮಾರಾಟಗಾರರ ಮಾಲೀಕತ್ವದ ಬಗ್ಗೆ ಪರಿಶೀಲಿಸಬೇಕಿತ್ತು ಹಾಗೆ ಮಾಡದೆ ಇರುವುದಕ್ಕೆ ಆತನೇ ಹೊಣೆಯಾಗುತ್ತಾನೆ, ಸಬ್–ರಿಜಿಸ್ಟ್ರಾರ್ ರವರಿಗೆ ಅದು ಗ್ರಾಂಟ್ ಜಮೀನೇ ಎಂದು ಪರಿಶೀಲಿಸುವ ಅವಕಾಶ ಇರಲಿಲ್ಲ. ಸಾಮಾನ್ಯವಾಗಿ ಹಿಂದಿನ ಮಾಲೀಕರ ಮಾಲೀಕತ್ವದ ಬಗ್ಗೆ ಕ್ರಯ ಪತ್ರದಲ್ಲಿ ಹೇಳಲಾಗಿರುತ್ತದೆ. ಆಗಲೇ ಸಾಕಷ್ಟು ಕ್ರಯಗಳಾಗಿವೆ ಎಂದು ಉತ್ತರಿಸಿದೆ.[2]

---

[1] ನಾಗೂರ್ ವಿ. ಯು.ಆಫ್.ಇ – ಎ.ಐ.ಆರ್ 2012 ಎಸ್.ಸಿ 1774

[2] ಅನುಸೂಯಮ್ಮ ವಿ. ಉಪವಿಭಾಗಾಧಿಕಾರಿ – 2003 (4) ಕೆ.ಸಿ.ಸಿ.ಆರ್ 2734

ಕರ್ನಾಟಕ ಹೈಕೋರ್ಟಿನ ಇನ್ನೊಂದು ಪ್ರಕರಣದಲ್ಲಿ ಕಲಂ 6 ರಲ್ಲಿನ ನಿಬಂದನೆಗಳನ್ನು ಶಾಸಕಾಂಗದ ಮುಖ್ಯ ಉದ್ದೇಶಗಳನ್ನು ಮೊಟಕು ಗೊಳಿಸಲು ಅರ್ಥೈಸಲಾಗದು ಅಥವ ವ್ಯಾಖ್ಯಾನಿಸಲಾಗದು,[1] ಎಂದಿದೆ.

ಕರ್ನಾಟಕ ಸರ್ಕಾರದ, ಕಂದಾಯ ಇಲಾಖೆ, ಹೊರಡಿಸಿದ್ದ ಸರ್ಕ್ಯುಲರ್ ಒಂದರಲ್ಲಿ ಪಿ.ಟಿ.ಸಿ.ಎಲ್ ವ್ಯಾಪ್ತಿಗೆ ಬರುವ ಗ್ರಾಂಟ್ ಜಮೀನು ನೊಂದಾಯಿಸಲು ತಡೆಯುವ ಉದ್ದೇಶದಿಂದ ಕೆಲವು ಪ್ರಮಾಣಪತ್ರಗಳನ್ನು ನೊಂದಾವಣೆಗೆ ಮುಂಚೆ ಹಾಜರು ಪಡಿಸಲು ಕರ್ನಾಟಕ ತಿದ್ದುಪಡಿ ಕಲಂ 22ಎ ರೀತ್ಯ ಕಡ್ಡಾಯ ಗೊಳಿಸಲಾಗಿತ್ತು. ಇದರ ಬಗ್ಗೆ ಇದೇ ರೀತಿಯ ರಾಜಸ್ಥಾನದ ತಿದ್ದುಪಡಿಯನ್ನು ಸಂವಿಧಾನ ಬಾಹಿರ ಅಂತ ತೀರ್ಪು ನೀಡಾಲಾಗಿರುವುದನ್ನು ಉಲ್ಲೇಕಿಸಿ ಸದರಿ ತಿದ್ದುಪಡಿಯಂತೆ ಆಗಿರುವ ಎಲ್ಲಾ ಸರ್ಕ್ಯುಲರ್ ರದ್ದು ಪಡಿಸಿದೆ.[2]

[1] ಹರಿದಾಸ್ ವಿ. ಜಿಲ್ಲಾಧಿಕಾರಿಗಳು – 2014 (4) ಕೆ.ಸಿ.ಸಿ.ಆರ್ 3590

[2] ರಾಮಚಾರ್ ವಿ. ಕರ್ನಾಟಕ ರಾಜ್ಯ – 2016 (4) ಕೆ.ಸಿ.ಸಿ.ಆರ್ 3577

# ಅಧ್ಯಾಯ -7

## "ಪರಿಶಿಷ್ಟ ಜಾತಿ" ಮತ್ತು "ಪರಿಶಿಷ್ಟ ಪಂಗಡ"

### "ಪರಿಶಿಷ್ಟ ಜಾತಿ" ಮತ್ತು "ಪರಿಶಿಷ್ಟ ಪಂಗಡ" ಯಾರು ?

ಪಿ.ಟಿ.ಸಿ.ಎಲ್ ಕಾಯ್ದೆ ಕಲಂ 2(ಡಿ) ಅಡಿಯಲ್ಲಿ ಹೇಳಿರುವಂತೆ ಷೆಡ್ಯೂಲ್ಡ್ ಕ್ಯಾಸ್ಟ್ಸ್ ಮತ್ತು ಷೆಡ್ಯೂಲ್ಡ್ ಟ್ರೈಬ್ಸ್ ("ಪರಿಶಿಷ್ಟ ಜಾತಿ" ಮತ್ತು "ಪರಿಶಿಷ್ಟ ಪಂಗಡ") ಎಂದರೆ ಸಂವಿಧಾನದಲ್ಲಿ ನೀಡಲಾಗಿರುವ ಅರ್ಥವನ್ನು ಅಳವಡಿಸಲಾಗಿದೆ. ಸಂವಿಧಾನ ಜಾರಿಯಾದದ್ದು 26-01-1950 ರಿಂದ ಅದಕ್ಕೆ ಮುಂಚೆ ಈಗಿನ ಹಲವಾರು ವರ್ಗಗಳನ್ನು ಡಿಪ್ರೆಸ್ಡ್ ಕ್ಲಾಸಸ್ ಎಂದು ಪರಿಗಣಿಸಲಾಗುತ್ತಿತ್ತು, ಕಲಂ 3 ರಲ್ಲಿ ಗ್ರಾಂಟ್ ಜಮೀನು ಎಂದರೆ ಗ್ರಾಂಟ್ ಸಮಯದಲ್ಲಿ ಗ್ರಾಂಟಿ ಎಸ್.ಸಿ ಅಥವ ಎಸ್.ಟಿ ಆಗಿರಬೇಕಿರುತ್ತದೆ. 26-01-1950 ಕ್ಕೆ ಮುಂಚೆ ಗ್ರಾಂಟ್ ಆದ ಜಮೀನುಗಳು ಎಸ್.ಸಿ ಮತ್ತು ಎಸ್.ಟಿ ಗೆ ನೀಡಲಾಗಿಲ್ಲ ಎಂಬ ವಾದಕ್ಕೆ ಕರ್ನಾಟಕ ಹೈಕೋರ್ಟ್ ವಾದವನ್ನು ತಳ್ಳಿಹಾಕಿ ಈ ಉತ್ತರ ನೀಡಿದೆ, "ಕಾಯ್ದೆಯಲ್ಲಿ ಸಂಭವಿಸುವ "ಪರಿಶಿಷ್ಟ ಜಾತಿ" ಮತ್ತು "ಪರಿಶಿಷ್ಟ ಪಂಗಡ" ಎಂಬ ಪದಗಳು ಸಂವಿಧಾನದಲ್ಲಿ ಅವರಿಗೆ ನಿಗದಿಪಡಿಸಿದ ಅರ್ಥವನ್ನು ಹೊಂದಿವೆ ಎಂಬುದು ನಿಜ. ಸಂವಿಧಾನದ ಅಡಿಯಲ್ಲಿ ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡಗಳ ಪಟ್ಟಿಯಲ್ಲಿ ಸೇರ್ಪಡೆಗೊಂಡಿರುವ ಜಾತಿ ಮತ್ತು ಬುಡಕಟ್ಟು ಜನಾಂಗದವರು ಸಂವಿಧಾನದ ಪ್ರಾರಂಭದ ಮೊದಲು ಅಸ್ತಿತ್ವದಲ್ಲಿಲ್ಲ ಎಂದು ಇದರ ಅರ್ಥವಲ್ಲ. ಆ ಜಾತಿ ಮತ್ತು ಬುಡಕಟ್ಟು ಜನಾಂಗದವರಲ್ಲಿ ಹೆಚ್ಚಿನವರು ಖಿನ್ನತೆಗೆ ಒಳಗಾದ ವರ್ಗಗಳು, (ಡಿಪ್ರೆಸ್ಡ್ ಕ್ಲಾಸಸ್) ಹರಿಜನರು, ಬುಡಕಟ್ಟು ಜನರು ಮತ್ತು ಗಿರಿಜನರು ಎಂದು ಕರೆಯಲ್ಪಟ್ಟಿದ್ದರು. ಸಂವಿಧಾನದ ಆಗಮನದ ನಂತರ ಪರಿಶಿಷ್ಟ ಜಾತಿಗಳ ಪಟ್ಟಿಯಲ್ಲಿ ಅಥವಾ ಪರಿಶಿಷ್ಟ ಪಂಗಡದವರ ಪಟ್ಟಿಗೆ ಸೇರ್ಪಡೆಗೊಳ್ಳಲು ಬಂದ ಜಾತಿ ಅಥವಾ ಬುಡಕಟ್ಟು ಜನಾಂಗಕ್ಕೆ ಸೇರಿದ ಯಾವುದೇ ವ್ಯಕ್ತಿಗೆ ಸರ್ಕಾರ ಜಮೀನು ನೀಡಿದ್ದರೆ, ಸೆಕ್ಷನ್ 3 ರ ಷರತ್ತು (ಬಿ) ನಲ್ಲಿ ವ್ಯಾಖ್ಯಾನಿಸಿರುವಂತೆ 'ಮಂಜೂರು ಮಾಡಿದ ಜಮೀನುಗಳು' ಎಂಬ ಪದದ ವ್ಯಾಪ್ತಿಯಲ್ಲಿ ಬರುವಂತೆ ಪರಿಗಣಿಸಬಾರದು ಎಂಬುದಕ್ಕೆ ಯಾವುದೇ ಕಾರಣವಿಲ್ಲ. ಕಾಯ್ದೆಯ

ನಿಬಂಧನೆಗಳು ಅಂತಹ ಜಮೀನುಗಳಿಗೆ ಅನ್ವಯಿಸದಿರಲು ಯಾವುದೇ ಕಾರಣಗಳಿಲ್ಲ."[1] ಆದರೆ ನಾವು ಗಮನಿಸಿರುವಂತೆ ಕೆಲವು ಜಾತಿ ಮತ್ತು ಬುಡಕಟ್ಟು ಜನರನ್ನು 1950 ರ ನಂತರ ಸೇರ್ಪಡೆ ಮಾಡಲಾಗಿದೆ. ಇಲ್ಲಿ ಕೆಲವು ಸೇರ್ಪಡೆ ನಿರ್ದಿಷ್ಟ ತಾರೀಖಿನಿಂದ ಜಾರಿಯಾಗುವಂತೆ ತಿದ್ದುಪಡಿ ಮಾಡಿ ಸೇರ್ಸಲಾಗಿದೆ. ಕೆಲವು ತಿದ್ದುಪಡಿಗಳನ್ನ ಸಮಾನಾಂತರ ಜಾತಿ ಅತವ ಪಂಗಡ ಎಂದು ಕರಾರುವಕ್ಕಾಗಿ ಉಲ್ಲೇಕಿಸಿ ತಿದ್ದುಪಡಿ ಮಾಡಲಾಗಿದೆ. ಹಿಂದೆ ಕರ್ನಾಟಕದಲ್ಲಿ ಬ್ಯಾಕ್ವರ್ಡ್ ಕಮುನಿಟೀಸ್ (ಹಿಂದುಳಿದ ಸಮುದಾಯ), ಬ್ಯಾಕ್ವರ್ಡ್ ಕ್ಯಾಸ್ಟ್ಸ್ (ಹಿಂದುಳಿದ ಜಾತಿಗಳು) ಬ್ಯಾಕ್ವರ್ಡ್ ಟ್ರೈಬ್ಸ್ (ಹಿಂದುಳಿದ ಬುಡಕಟ್ಟು ಅಥವ ಪಂಗಡ) ಎಂದು ನೂರಾರು ಜಾತಿಗಳನ್ನು ಪ್ರತ್ಯೇಕಿಸಿ ಗುರುತಿಸಲಾಗಿದೆ. ಈ ಬಗ್ಗೆ ವಿವರಗಳನ್ನು ಅನುಭಂದ-24 ರಲ್ಲಿ ಸಮಗ್ರವಾಗಿ ನೀಡಲಾಗಿದೆ. 1976 ಮತ್ತು ಅದರ ನಂತರ ಸೇರ್ಪಡೆಯಾದ ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡದ ಅನೇಕ ಸಮುದಾಯಗಳನ್ನು ಅದರ ಹಿಂದೆ ಹಿಂದುಳಿದ ಸಮುದಾಯ, ಹಿಂದುಳಿದ ಜಾತಿಗಳು, ಹಿಂದುಳಿದ ಬುಡಕಟ್ಟು ಅಥವ ಪಂಗಡ ಎಂದು ಗುರುತಿಸಲಾಗಿರುತ್ತದೆ. ಈ ವಾಸ್ತವಿಕ ಅಂಶಗಳನ್ನು ಅನೇಕ ನ್ಯಾಯಾಲಯಗಳ ಪ್ರಕರಣಗಳಲ್ಲಿ ಸಾದರಪಡಿಸಲಾಗಿರುವುದಿಲ್ಲ. ಅಂತಹ ವಾಸ್ತವಿಕತೆ ಗಮನಕ್ಕೆ ಬಾರದೇ ಅನೇಕ ತೀರ್ಪುಗಳು "ಪರ್-ಇನ್ಕ್ಯೂರಿಯಮ್" ಆಗುವ ಸಾದ್ಯತೆ ಇದೆ. ತಜ್ಞರಲ್ಲಿ ಚರ್ಚೆಯ ಅವಶ್ಯಕತೆ ಇದೆ.

**ಜಾತಿ/ ಪಂಗಡ ವಿಚಾರದ ವಿವಾದಗಳು**

ಭೂ ಮಂಜೂರಾತಿ ಪಡೆದವರು ಪರಿಶಿಷ್ಟರೆ ಅಲ್ಲವೆ ಎಂಬುದು ಪ್ರಮುಖ ವಿಚಾರವಾಗಿರುತ್ತದೆ. ಉದಾಹರಣೆಗೆ 'ಎ' ಎಂಬ ಭೂ ಮಂಜೂರಾತಿದಾರನು ಮೇಲ್ಜಾತಿಯವನಾಗಿದ್ದು ಸರ್ಕಾರಕ್ಕೆ ತನ್ನ ಜಾತಿಯನ್ನು ಮಂಜೂರಾತಿಗಾಗಿ ಸಲ್ಲಿಸಿರುವ ಅರ್ಜಿಯಲ್ಲಿ ತಿಳಿಸಿ ಅದಕ್ಕೆ ಪೂರಕವಾಗಿ ಜಾತಿ ಪ್ರಮಾಣ ಪತ್ರವನ್ನು ಲಗತ್ತಿಸಿರುತ್ತಾನೆ. ನಂತರ ಪರಿಶಿಷ್ಟ ಜಾತಿಯ

---

[1] ವೆಂಕಟರಾಯಪ್ಪ ವಿ. ಕರ್ನಾಟಕ ರಾಜ್ಯ - ಐ.ಎಲ್.ಆರ್ 1997 ಕರ್ 850

ಮಹಿಳೆಯನ್ನು ಮದುವೆಯಾಗಿರುತ್ತಾನೆ ಎಂದು ಅಂದಾಜಿಸೋಣ. ಅವನಿಗೆ ಹುಟ್ಟುವ ಮಗನು ಹಿಂದು ಕಾನೂನಿನಂತೆ ಅವನ ಜಾತಿಗೆ ಸೇರುತ್ತಾನೆ. ಆದರೆ ಸದರಿ ಅಂತಹ ಮಗನು ತನ್ನ ತಾಯಿ ಜಾತಿ ಪ್ರಮಾಣ ಪತ್ರದ ಆಧಾರದಲ್ಲಿ ತನ್ನ ಜಾತಿಯನ್ನು ಪರಿಶಿಷ್ಟನು ಎಂದು ಪಡೆದು ತನ್ನ ತಂದೆಯ ಜಾತಿಯನ್ನು ಪರಿಶಿಷ್ಟನು ಎಂದು ತೋರಲು ಸಾಧ್ಯವೆ ? ಖಂಡಿತ ಆಗಲಾರದು. ಸದರಿ ಕಾರಣಕ್ಕೆ ಭೂ ಮಂಜೂರಿದಾರನ ಭೂ ಮಂಜೂರಾತಿ ದಿನದಲ್ಲಿ ಇದ್ದ ಜಾತಿ ಅಂದಿನ ದಾಖಲಾತಿ ಆಧಾರದಲ್ಲಿ ನಿರ್ದರಿಸಬೇಕಿರುತ್ತದೆ. ಅಂತಹ ಪ್ರಮುಖ ದಾಖಲಾತಿಗಳ ಪೈಕಿ, ಹಳೆಯ ರೇಷನ್ ಕಾರ್ಡ, (ಜಾತಿ ಮತ್ತು ಸಂಬಂದ ಉಲ್ಲೇಖಗಳು) ಹಳೆಯ ಜಾತಿ ಪ್ರಮಾಣ ಪತ್ರ, ಗ್ರಾಂಟ್ ಸರ್ಟಿಫಿಕೇಟಿನಲ್ಲಿ ಜಾತಿ ಉಲ್ಲೇಖ, ಅಥವ ಇತರೆ ಹಳೆ ದಾಖಲಾತಿಗಳಲ್ಲಿ ಜಾತಿ ಉಲ್ಲೇಖ ಇರುವುದನ್ನು ಅರ್ಜಿದಾರನು ಹಾಜರು ಪಡಿಸುವ ಅವಶ್ಯಕತೆ ಇರುತ್ತದೆ. ಇಲ್ಲವೆ ಅಂತಹ ಲಭ್ಯ ದಾಖಲಾತಿಯಿಂದ ಸಕ್ಷಮ ಪ್ರಾಧಿಕಾರಿಯು ಪರಿಶೀಲಿಸುವ ಅವಶ್ಯಕತೆ ಇರುತ್ತದೆ. ಈ ರೀತಿಯ ದಾಖಲಾತಿಗಳೇ ಇಲ್ಲದೆ ಮತ್ತು ಅಂತಹವು ಇದ್ದರೂ ಹಾಜರು ಪಡಿಸದೆ ವಿಷಯವನ್ನು ಮುಚ್ಚಿಟ್ಟಿರುವ ಅರ್ಜಿದಾರನಿಗೆ ಕೋರಿರುವ ಪರಿಹಾರವನ್ನು ನೀಡುವುದು ಕಾನೂನು ಭಾಹಿರವಾಗಿರುತ್ತದೆ. ಇಲ್ಲಿ ಹಳೆಯ ದಾಖಲಾತಿ ಎಂದರೆ 1971 ರಲ್ಲಿ ಆ ಜಾತಿ ಸದರಿ ಪ್ರಾಂತ್ಯಾವಾರು ಕ್ಷೇತ್ರದಲ್ಲಿ ಪರಿಶಿಷ್ಟ ಜಾತಿ/ಪಂಗಡಕ್ಕೆ ಸೇರಿತ್ತೇ ಎಂಬ ಶೋಧನಾ ಅವಶ್ಯಕತೆಯನ್ನು ಅನುಭಂದ–24 ರಲ್ಲಿನ 1976 ರ ತಿದ್ದುಪಡಿ ಕಾಯ್ದೆಯ ಕಲಂ 5 ರಲ್ಲಿನ ಮಾರ್ಗದರ್ಶನದಂತೆ ಪ್ರಮುಖ ವಿಚಾರವಾಗಿರುತ್ತೆ.

ಕರ್ನಾಟಕ ಹೈಕೋರ್ಟಿನ ಮುಂದೆ ಬಂದಂತಹ ಕೇಸಿನಲ್ಲಿ,[1] "ಗ್ರಾಂಟೀ ಗ್ರಾಂಟ್ ಸಮಯದಲ್ಲಿ ವಡ್ಡರು ಜನಾಂಗಕ್ಕೆ ಸೇರಿರುತ್ತಾರೆ, ಅವರು ಭೋವಿ ಜನಾಂಗಕ್ಕೆ ಸೇರಿದವರೆಂದು ಜಾತಿ ಪ್ರಮಾಣಪತ್ರ ಪಡೆದಿರುತ್ತಾರೆ. ಗ್ರಾಂಟ್ ಆಗಿರುವುದು 31–08–1961 ರಲ್ಲಿ ಮತ್ತು ಮೊದಲ ಕ್ರಯ ಆಗಿರುವುದು 24–08–1968 ರಲ್ಲಿ. 1988–89 ರಲ್ಲಿ ಪಿ.ಟಿ.ಸಿ.ಎಲ್ ಪ್ರಕರಣ

---

[1] ರಾಜಮ್ಮ ವಿ. ಜಿಲ್ಲಾಧಿಕಾರಿಗಳು – ಮನು/ ಕೆ.ಎ/ 4733/ 2018

ಪ್ರಾರಂಭವಾಗಿರುತ್ತದೆ. ಗ್ರಾಂಟಿ ಎಸ್.ಸಿ/ಎಸ್.ಟಿ ವರ್ಗಕ್ಕೆ ಸೇರಿಲ್ಲ ಎಂದು ಗ್ರಾಂಟ್ ರಿಜಿಸ್ಟರ್ ಎಕ್ಸಟ್ರಾಕ್ಟ್ ಹಾಜರುಪಡಿಸಲಾಗುತ್ತದೆ. ಸದರಿ ಗ್ರಾಂಟ್ ಹರಾಜು ಮಾರಾಟದ ಮೂಲಕ ಭೂ ಮೌಲ್ಯವನ್ನು ಕಟ್ಟಿಸಿಕೊಂಡು ಸಕ್ಷಮ ಅಧಿಕಾರಿ ನೀಡಿದ ಗ್ರಾಂಟ್ ಪ್ರಮಾಣಪತ್ರವಾಗಿರುತ್ತದೆ. ಇಲ್ಲಿ 4 ಎಕರೆ ಜಮೀನನ್ನು 10 ರೂ ಎಕರೆಗೆ ಅಂದಿನ ಮೌಲ್ಯವನ್ನು ಕಟ್ಟಿಸಿಕೊಂಡು ಹರಾಜು/ಗ್ರಾಂಟ್ ಮಾಡಲಾಗಿದೆ ಎಂದು ಗ್ರಾಂಟ್ ಪ್ರಮಾಣಪತ್ರ ತಿಳಿಸುತ್ತದೆ, ಹಾಗಾಗಿ ಪಿ.ಟಿ.ಸಿ.ಎಲ್ ಕಾಯ್ದೆ ಅನ್ವಯಿಸದು" ಪ್ರಕರಣವೊಂದರಲ್ಲಿ ಗ್ರಾಂಟಿ ಎಸ್.ಸಿ/ಎಸ್.ಟಿ ವರ್ಗಕ್ಕೆ ಸೇರಿಲ್ಲ 'ಮರಾಟ' ಸಮುದಾಯಕ್ಕೆ ಸೇರಿದವರು ಎಂದು ಇಲ್ಲಿ ಪಿ.ಟಿ.ಸಿ.ಎಲ್ ಕಾಯ್ದೆ ಅನ್ವಯಿಸದು ಎಂಬ ಕೆಳ ನ್ಯಾಯಾಲಯದ ತೀರ್ಪನ್ನು ಎತ್ತಿ ಹಿಡಿದಿದೆ.[1] (ರಿಟ್ ಅರ್ಜಿ ನಂ. 498/2015, ಬೆಂಗಳೂರು, ದಿ: 12-02-2014)

ಈ ಬಗ್ಗೆ ಕರ್ನಾಟಕ ಹೈಕೋರ್ಟಿನ ಪೂರ್ಣ ಪೀಠದ ಮೂರು ನ್ಯಾಯಮೂರ್ತಿಗಳ ಪೈಕಿ ಇಬ್ಬರು ನ್ಯಾಯಮೂರ್ತಿಗಳು ನೀಡಿರುವ ತೀರ್ಪಿನಂತೆ,[2] ಸಂವಿಧಾನದ ಪ್ರಾರಂಬದಲ್ಲಿ ನೋಟಿಫೈ ಮಾಡಲಾದ ಎಸ್.ಸಿ/ ಎಸ್.ಟಿ ಲಿಸ್ಟ್ ಗೆ ಮುಂದೆ ತಿದ್ದುಪಡಿ ಮಾಡಿ ಕೆಲವು ಜಾತಿ/ವರ್ಗ ಗಳನ್ನು ಸೇರ್ಪಡೆ ಮಾಡಿದ್ದರೆ, ಅಂತಹ ಸೇರ್ಪಡೆ ದಿನಾಂಕಕ್ಕೆ ಮುಂಚೆ ನೀಡಲಾದ ಭೂ ಮಂಜೂರಾತಿಗಳು ಅಥವ ಅಂತಹ ಸೇಪಡೆಗೆ ಮುಂಚೆ ಆದ ಮೊದಲ ಕ್ರಯಗಳು ಪಿ.ಟಿ.ಸಿ.ಎಲ್ ವ್ಯಾಪ್ತಿಗೆ ಬರುವುದೇ ಎಂಬ ಬಗ್ಗೆ ನೀಡಿರುವ ಬಹುಸಂಖ್ಯಾತ ತೀರ್ಪಿನ, ಈ ಕೇಸಿನಲ್ಲಿ "ನಾಯಕ" ಎಂಬ ಪದವನ್ನು 1991 ರ ತಿದ್ದುಪಡಿಯಿಂದ ಸೇರಿಸಿರುವ ಬಗ್ಗೆ ವ್ಯಾಖ್ಯಾನಿಸಿದೆ, ಅದು ಈಗಾಗಲೇ ಅಂತಹದ್ದೇ ಉಚ್ಚಾರಣೆ ಇರುವ ಪದದ ಮುಂದುವರಿದ ಸೇರ್ಪಡೆ ಮತ್ತು ವಿವರಣೆ ಆಗಿದೆ, ನಾಯಿಕ್ಡ್ / ನಾಯಕ ಎಂಬ ಪದ 1950 ರಲ್ಲೇ ಪರಿಶಿಷ್ಟ ವರ್ಗದಲ್ಲಿ ಇದೆ ನಾಯ್ಕ ಅಥವ ನಾಯಕ್ ಎಂಬ ಸಮಾನಾಂತರ ಪದಗಳನ್ನು 1991 ರಲ್ಲಿ ಸೇರಿಸಲಾಗಿದೆ ಎಂಬ ವಿಚಾರವಾಗಿ ನೀಡಿದ ತೀರ್ಪಾಗಿದೆ.

---

[1] ಗೋವಿಂದ ವಿ. ಹೇಮಂತ್ - ಮನು/ ಕೆ.ಎ/ 0563/ 2014

[2] ಜಯಣ್ಣ ವಿ. ಜಿಲ್ಲಾಧಿಕಾರಿಗಳು - 2013 (3) ಕೆ.ಸಿ.ಸಿ.ಆರ್ 2055

<u>ಬಹುಸಂಖ್ಯಾತ ತೀರ್ಪಿನಲ್ಲಿ ಉಲ್ಲೇಕಿತ ಕಾರಣಗಳು</u>

(1). ಅಂತಹ ಸೇರ್ಪಡೆಯು ನಿರ್ದಿಷ್ಟ ತಾರೀಖಿನಿಂದ ಜಾರಿಯಾಗಿದ್ದರೂ ಸದರಿ ಜಾತಿ/ವರ್ಗ ಹಿಂದಿನಿಂದಲೂ ಪರಿಶಿಷ್ಟರು ಅಲ್ಲ ಎಂಬುದನ್ನು ನಿರಾಕರಿಸಿದೆ.[1]

(2). "'ಪರಿಶಿಷ್ಟ ಜಾತಿ' ಅಥವಾ 'ಪರಿಶಿಷ್ಟ ವರ್ಗ' (ಬುಡಕಟ್ಟು ಜನಾಂಗ) ಭಾರತದ ಸಂವಿಧಾನಕ್ಕೆ ಹೊಸತಾಗಿರಲಿಲ್ಲ, ಏಕೆಂದರೆ ಅವರನ್ನು ಈಗಾಗಲೇ ಭಾರತ ಸರ್ಕಾರದ ಕಾಯ್ದೆ, 1935 ರಲ್ಲಿ ಬಳಸಲಾಗಿತ್ತು. ಆದರೆ 1950 ರ ನಂತರವೇ ಆ ಪದಗಳು ಕಲೆ ಮತ್ತು ಸರ್ವವ್ಯಾಪಿ ಬಳಕೆಯ ನಿಖರವಾದ ಪದಗಳಾಗಿವೆ; ಇದಕ್ಕೂ ಮೊದಲು ಅವರನ್ನು "ಖಿನ್ನತೆಗೆ ಒಳಗಾದ ವರ್ಗಗಳು" ಅಥವಾ "ದುರ್ಬಲ ವರ್ಗಗಳು" ಇತ್ಯಾದಿ ಎಂಬ ಪದಗುಚ್ಛಗಳಿಗೆ ಪರಸ್ಪರ ಬದಲಾಯಿಸಬಹುದಾದ ಅಥವಾ ಸಮಾನಾರ್ಥಕವೆಂದು ಕಲ್ಪಿಸಲಾಗಿತ್ತು.

(3). ಸಾರ್ವಜನಿಕ ಅಧಿಸೂಚನೆಯಿಂದ ಭಾರತದ ರಾಷ್ಟ್ರಪತಿಗಳು ಮಾಡಿದ ಖಚಿತವಾದ ಎಣಿಕೆ ಅಥವಾ ನಿರ್ದಿಷ್ಟತೆಯಿಂದ, ಸಂವಿಧಾನದ ವಿಧಿ 366 (24) ಮತ್ತು (25) ರಲ್ಲಿ ವಿಧಿ 341 ಮತ್ತು 342 ಬಗ್ಗೆ ಅವರನ್ನು ವಿವರಿಸುತ್ತದೆ. 341 ಮತ್ತು 342 ನೇ ವಿಧಿಗಳ ಉಪ-ವಿಧಿ (2) ಅಧ್ಯಕ್ಷೀಯ ಅಧಿಸೂಚನೆಯಲ್ಲಿ ಸೇರ್ಪಡೆ ಅಥವಾ ಹೊರಗಿಡುವಿಕೆಗಾಗಿ ಕಾನೂನುಗಳನ್ನು

---

[1] ಈ ಬಗ್ಗೆ 1950, 1956 ಮತ್ತು 1976 ರ ತಿದ್ದುಪಡಿಗಳನ್ನು ಸೂಕ್ಷ್ಮವಾಗಿ ಓದುವುದು ಅವಶ್ಯವಾಗಿದೆ. ಅನುಭಂದ-22 ರಲ್ಲಿನ 1950 ರ ಪಟ್ಟಿಯಲ್ಲಿ ನಾಯ್ಕಡ ಅಥವ ನಾಯಕ್ ಎಸ್.ಟಿ ಸಮುದಾಯ ಬಾಂಬೆ ಪ್ರಾಂತ್ಯಕ್ಕೆ ಬರುತ್ತಾರೆ, ಅವರು ಇತರೆ ಪ್ರಾಂತ್ಯದಲ್ಲಿ ಇಲ್ಲ. ಅನುಭಂದ-23 ರಲ್ಲಿ ಬೆಳಗಾಮ್, ಬಿಜಾಪುರ, ಧಾರವಾರ ಮತ್ತು ಕೆನರಾ ಪ್ರಾಂತ್ಯಕ್ಕೆ ಮಾತ್ರ ನಾಯ್ಕಡ ಅಥವ ನಾಯಕ್ ಇದರಜೊತೆಗೆ ಚೋಳಿವಾಲ ನಾಯಕ, ಕಪಾಡಿಯಾ ನಾಯಕ, ಮೋಟಾ ನಾಯಕ ಮತ್ತು ನಾನಾ ನಾಯಕ ಸೇರಿಸಿದ್ದಾರೆ. ಇತರೆ ಪ್ರಾಂತ್ಯದಲ್ಲಿ ಇಲ್ಲ. 1976 ರಲ್ಲಿ ತಿದ್ದುಪಡಿ ಕಾಯ್ದೆ ಹೊರಡಿಸಿ, ಪಾರ್ಲಿಮೆಂಟ್ ಮತ್ತು ಅಸೆಂಬ್ಲಿ ಕಾನ್ಸಟಿಟ್ಯೂಎನ್ಸಿ ವಿಂಗಡನೆಗಾಗಿ 1971 ರ ಸೆನ್ಸೆಸ್ ರೀತ್ಯ ಪರಿಶೀಲಿಸಿ ಜಾತಿ ಮತ್ತು ಪಂಗಡವನ್ನು ಆಯಾ ಪ್ರಾಂತ್ಯಕ್ಕೆ ಗುರುತಿಸಿ ಮತ್ತೊಂದು ಗೆಜೆಟ್ ಪ್ರಕಟಣೆ ಹೊರಡಿಸಲು ಕಲಂ 5(3) ರಲ್ಲಿ ಸೂಚನೆ ಇದೆ. ಇಂತಹ ಗೆಜೆಟ್ ಪ್ರಕಟಣೆ ಇಲ್ಲದೆ ಹೇಗೆ ರಾಜ್ಯದಾದ್ಯಂತ ನಾಯಕ ಜನಾಂಗವನ್ನು (ಇತರೆ ಜನಾಂಗವನ್ನು) ಗುರುತಿಸಲಾಗಿದೆ ಎಂಬುದೇ ಒಂದು ಪ್ರಶ್ನಾರ್ಥಕವಾಗಿದೆ. ಈ ಅಂಶ ತೀರ್ಪಿನಲ್ಲಿ ಚರ್ಚೆ ಆಗಿಲ್ಲ.

ಮಾಡಲು ಸಂಸತ್ತಿಗೆ ಅಧಿಕಾರ ನೀಡುತ್ತದೆ; ಮತ್ತು ಸಂಸತ್ತಿನ ಈ ಕ್ರಮವು ನಂತರದ ಅಧಿಸೂಚನೆಗಳ ಮೂಲಕ ಬದಲಾಗುವುದಿಲ್ಲ. ಸಂವಿಧಾನವು ಪರಿಶಿಷ್ಟ ಜಾತಿ ಅಥವಾ ಬುಡಕಟ್ಟು ಜನಾಂಗದವರ ಆಯ್ಕೆಯ ಹಿಂದೆ ಯಾವುದೇ ಸೂಚನೆಯನ್ನು ಹೊಂದಿಲ್ಲ.

(4). ನಿರ್ದೇಶನ ತತ್ವಗಳಲ್ಲಿ (ಡೈರೆಕ್ಟೀವ್ ಪ್ರಿನ್ಸಿಪಲ್ಸ್) ಒಂದಾದ 46 ನೇ ವಿಧಿ, "ದುರ್ಬಲ ವರ್ಗದ ಜನರ ಶೈಕ್ಷಣಿಕ ಮತ್ತು ಆರ್ಥಿಕ ಹಿತಾಸಕ್ತಿಗಳನ್ನು, ಮತ್ತು ನಿರ್ದಿಷ್ಟವಾಗಿ, ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡದವರ ವಿಶೇಷ ಕಾಳಜಿಯೊಂದಿಗೆ ರಾಜ್ಯವು ಉತ್ತೇಜಿಸಬೇಕೆಂದು ಮತ್ತು ಅವರನ್ನು ಸಾಮಾಜಿಕ ಅನ್ಯಾಯ ಮತ್ತು ಎಲ್ಲಾ ರೀತಿಯ ಶೋಷಣೆಯಿಂದ ರಕ್ಷಿಸುತ್ತದೆ". "ದುರ್ಬಲ ವಿಭಾಗ" ದಲ್ಲಿ ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡದ ಉಪವಿಭಾಗವಿದೆ ಎಂಬುದು ಈ ವಿಧಿಯಿಂದ ಸ್ಪಷ್ಟವಾಗಿದೆ, ಇದು 'ಈ ಹಿಂದೆಯ' ಮತ್ತು 'ನಂತರದ' ಸಾಂವಿಧಾನಿಕ ಭೂ ಮಂಜೂರಾತಿಗಳಿಗೆ ನೀಡಬೇಕಾದ ವ್ಯಾಖ್ಯಾನಕ್ಕೆ ಸಂಬಂಧಿಸಿದೆ.

(5). ಧರ್ಮ, ಜನಾಂಗ, ಜಾತಿ, ಲಿಂಗ ಅಥವಾ ಜನ್ಮಸ್ಥಳದ ಆಧಾರದ ಮೇಲೆ ತಾರತಮ್ಯವನ್ನು ನಿಷೇಧಿಸುವ ವಿಧಿ 15, ಉಪ-ವಿಧಿ (4) ರಲ್ಲಿ ಸ್ಪಷ್ಟಪಡಿಸುವುದೇನೆಂದರೆ, ಯಾವುದೇ ಸಾಮಾಜಿಕ ಮತ್ತು ಶೈಕ್ಷಣಿಕವಾಗಿ ಯಾವುದೇ ಪ್ರಗತಿಗೆ ರಾಜ್ಯವು ಯಾವುದೇ ವಿಶೇಷ ನಿಬಂಧನೆಗಳನ್ನು ನಾಗರಿಕರಿಗೆ ಅಥವ ಹಿಂದುಳಿದ ವರ್ಗಗಳು ಅಥವಾ ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡಗಳಿಗೆ ನೀಡುವುದನ್ನು ತಡೆಯುವುದಿಲ್ಲ". ಯಾವುದೇ ಕಚೇರಿಗೆ ಉದ್ಯೋಗ ಅಥವಾ ನೇಮಕಾತಿಗೆ ಸಂಬಂಧಿಸಿದ ವಿಷಯಗಳಲ್ಲಿ ಎಲ್ಲಾ ನಾಗರಿಕರಿಗೆ ಅವಕಾಶದ ಸಮಾನತೆಗೆ ಸಂಬಂಧಿಸಿದಂತೆ 16 ನೇ ವಿಧಿಯು ಇದೆ ರೀತಿಯ ಪರಿಸ್ಥಿತಿಯನ್ನು ವಿಧಿಸುತ್ತದೆ. ಆದ್ದರಿಂದ, 'ಹಿಂದುಳಿದ ವರ್ಗಗಳು' ಅಥವಾ 'ದುರ್ಬಲ ವಿಭಾಗಗಳು' ಎಂಬ ಪದಗಳು ವಿಶಾಲವಾದ ಸಾಧ್ಯತೆಗಳ ಅಂಗೀಕಾರವಾಗಿದ್ದು, ಇದರಲ್ಲಿ ಪರಿಶಿಷ್ಟ ಜಾತಿ / ಪರಿಶಿಷ್ಟ ಪಂಗಡಗಳನ್ನು ಸಹ ಆವರಿಸಿದೆ ಎಂಬುದು ಸ್ಪಷ್ಟವಾಗಿದೆ.

(6). ಈ ಚರ್ಚೆಯು ಅಗತ್ಯವಾಗುತ್ತದೆ ಏಕೆಂದರೆ ಸಾಂವಿಧಾನಿಕ ಪೂರ್ವದ ಭೂ ಮಂಜೂರಾತಿಯನ್ನು ಸರ್ವತ್ರವಾಗಿ 'ಖಿನ್ನತೆಗೆ ಒಳಗಾದ ವರ್ಗಗಳಿಗೆ' ಮಾಡಲಾಗಿದೆ. ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡದ (ಕೆಲವು ಜಮೀನುಗಳ ವರ್ಗಾವಣೆಯ ನಿಷೇಧ) ಕಾಯ್ದೆ, 1978 (ಪಿ.ಟಿ.ಸಿ.ಎಲ್ ಕಾಯ್ದೆ 'ಸಂಕ್ಷಿಪ್ತವಾಗಿ' ಸೆಕ್ಷನ್ 3 ರಂತೆ ಮಂಜೂರಾದ ಭೂಮಿಯನ್ನು 'ಸರ್ಕಾರವು ಪರಿಶಿಷ್ಟ ಜಾತಿ / ಪರಿಶಿಷ್ಟ ಪಂಗಡಕ್ಕೆ ಸೇರಿದ ವ್ಯಕ್ತಿಗೆ ನೀಡುವ ಯಾವುದೇ ಭೂಮಿಯಾಗಿ ವ್ಯಾಖ್ಯಾನಿಸುತ್ತದೆ, ಅಥವಾ ಕೃಷಿ ಸುಧಾರಣೆಗಳು ಅಥವಾ ಭೂಮಿತಿಗಳು ಅಥವಾ ಇನಾಮ್‌ಗಳ ನಿರ್ಮೂಲನೆ; ಮತ್ತು ಪರಿಶಿಷ್ಟ ಜಾತಿ / ಪರಿಶಿಷ್ಟ ಪಂಗಡದ ಪದಗಳು ಸಂವಿಧಾನದಲ್ಲಿ ಅವರಿಗೆ ನಿಗದಿಪಡಿಸಿದ ಅರ್ಥವನ್ನು ಹೊಂದಿವೆ.

(7). ಈ ವ್ಯಾಖ್ಯಾನವು, ಗ್ರಾಂಟ್ ಮಾರುಕಟ್ಟೆ ಬೆಲೆಗೆ ಅಥವಾ ಬೇಷರತ್ತಾಗಿರಲಿ, ಅದರ ವ್ಯಾಪ್ತಿಯ ಒಳಗೆ ಪರಿಶಿಷ್ಟ ಜಾತಿ / ಪರಿಶಿಷ್ಟ ಪಂಗಡದ ವ್ಯಕ್ತಿಗಳಿಗೆ ನೀಡುವ ಎಲ್ಲಾ ಅನುದಾನಗಳನ್ನು ಒಳಗೊಳ್ಳುತ್ತದೆ. ಈ ದೃಷ್ಟಿಕೋನವು ಯಾವುದೇ ಅನ್ಯಾಯದ ಅಥವಾ ಅಸಮಾನತೆಯ ವ್ಯವಹಾರಗಳಿಗೆ ಕಾರಣವಾಗುವುದಿಲ್ಲ; ಏಕೆಂದರೆ ಪಿ.ಟಿ.ಸಿ.ಎಲ್ ಕಾಯ್ದೆಯ ಸೆಕ್ಷನ್ 4 (2) ರ ಅಡಿಯಲ್ಲಿ ಅನುದಾನದ ಜಮೀನುಗಳನ್ನು ಮಾರಾಟ ಮಾಡಲು ಅನುಮತಿ ... ನೀಡುವಾಗ, ಪ್ರಾಧಿಕಾರವು ಮಾರುಕಟ್ಟೆ ಬೆಲೆಯಲ್ಲಿ ಮತ್ತು ಯಾವುದೇ ನಿರ್ಬಂಧಿತ ಒಪ್ಪಂದಗಳಿಲ್ಲದೆ ನೀಡಲ್ಪಟ್ಟ ಕಾರಣ ಅದನ್ನು ಒಪ್ಪುವ ನಿರೀಕ್ಷೆಯಿದೆ.

(8). <u>'ಖಿನ್ನತೆಗೆ ಒಳಗಾದ ವರ್ಗಗಳು' ಎಂಬ ಪರಿಕಲ್ಪನೆಗೆ ಸೇರುವ ವ್ಯಕ್ತಿಗಳ ಪೈಕಿ ಪರಿಶಿಷ್ಟ ಜಾತಿ / ಪರಿಶಿಷ್ಟ ಪಂಗಡಗಳು ಕೆಲವರಾಗಿದ್ದರೆ, ಪಿಟಿಸಿಎಲ್ ಕಾಯ್ದೆಯು 'ಖಿನ್ನತೆಗೆ ಒಳಗಾದ ವರ್ಗಗಳ' ಸಾಮಾನ್ಯತೆಗೆ ಯಾವುದೇ ಅನ್ವಯವನ್ನು ಹೊಂದಿಲ್ಲ ಎಂಬುದು ವ್ಯರ್ಥವಾದ ವಾದವಾಗಿದೆ; ಆದ್ದರಿಂದ, ಪಿಟಿಸಿಎಲ್ ಕಾಯ್ದೆ ಸಾಂವಿಧಾನಿಕ ಪೂರ್ವದ ಭೂ ಅನುದಾನಕ್ಕೆ ಅನ್ವಯಿಸುವುದಿಲ್ಲ ಎಂಬುದು ವ್ಯರ್ಥವಾದ ವಾದವಾಗಿದೆ. ಪರಿಶಿಷ್ಟ ಜಾತಿ / ಪರಿಶಿಷ್ಟ ಪಂಗಡಕ್ಕೆ ಮತ್ತು 'ಖಿನ್ನತೆಗೆ ಒಳಗಾದ ವರ್ಗಗಳಿಗೆ' ಆದ ಗ್ರಾಂಟ್</u>

ಒಂದೇ ರೀತಿಯ ಉದ್ದೇಶವನ್ನು ಹೊಂದಿದ್ದರೂ ಸಹ, 'ಖಿನ್ನತೆಗೆ ಒಳಗಾದ ವರ್ಗಗಳಿಗೆ' ಶಾಸನಬದ್ಧ ರಕ್ಷಣೆ ಕಾಣೆಯಾಗುವುದರಲ್ಲಿ ಇದು ಅಸಂಬದ್ಧ ಪರಿಸ್ಥಿತಿಯನ್ನು ಸೃಷ್ಟಿಸುತ್ತದೆ.

(9). ಶಾಸನಬದ್ಧ ನಿರ್ಮಾಣದ ನಿಯಮಗಳು ನ್ಯಾಯಾಲಯಗಳಲ್ಲಿ ಒಂದು ಶಾಸನದ ನೀತಿ ನಿರೂಪಣೆಯನ್ನು ಅನುಷ್ಠಾನಗೊಳಿಸುವ ವ್ಯಾಖ್ಯಾನವನ್ನು ಆದ್ಯತೆ ನೀಡುವಂತೆ ಒತ್ತಾಯಿಸುತ್ತವೆ. ಅದರಂತೆ, ಸಂವಿಧಾನದ ಪೂರ್ವದಲ್ಲಿ 'ಖಿನ್ನತೆಗೆ ಒಳಗಾದ ವರ್ಗ' ಗಳಿಗೆ ಸೇರಿದವರಿಗೆ ನೀಡಲಾಗುವ ಅನುದಾನವನ್ನು ಪಿಟಿಸಿಎಲ್ ಕಾಯ್ದೆಯ ವ್ಯಾಪ್ತಿಗೆ ಒಳಪಡಿಸಲಾಗುತ್ತದೆ ಎಂದು ನಮಗೆ ತೋರುತ್ತದೆ. ಈ ಹರಿವಿನ ಸ್ಥಿತಿಯಲ್ಲಿ, ಭಾರತದ ಸಂವಿಧಾನವು ಜಾರಿಗೆ ಬರುವ ಮೊದಲು ನೀಡಲಾದ ಅನುದಾನವನ್ನು ಪಿಟಿಸಿಎಲ್ ಕಾಯ್ದೆಯ ರಕ್ಷಣಾತ್ಮಕ ನಿಲುವಂಗಿಯ ವ್ಯಾಪ್ತಿಗೆ ಒಳಪಡಿಸಬೇಕು. ಕಟ್ಟುನಿಟ್ಟಾದ, ನಿಷ್ಠುರ ಅಥವಾ ಹೊರಗಿಡುವ ವ್ಯಾಖ್ಯಾನವನ್ನು ಹರಿಯುವ ಮತ್ತು ವಿಕಾಸದ ಪರಿಸರದಲ್ಲಿ ಸಮರ್ಥಿಸಲಾಗುವುದಿಲ್ಲ.

(10). ವಿಸ್ತೃತ ವಿವರಣೆ ಅಥವಾ ಸ್ಪಷ್ಟೀಕರಣ ಮಾತ್ರ ಸಾಂವಿಧಾನಿಕವಾಗಿ ನ್ಯಾಯಸಮ್ಮತವಾಗಿದೆ; ಎಣಿಕೆಯ ವಿಸ್ತರಣೆ, ಹಿಗ್ಗುವಿಕೆ ಅಥವಾ ವಿಸ್ತರಣೆ ಹಾಗಲ್ಲ. ಆರ್ಟಿಕಲ್ 341 (2) ಮತ್ತು 342 (2) ರ ಅಡಿಯಲ್ಲಿ ಸಂಸತ್ತಿನಿಂದ ಜಾತಿ / ಬುಡಕಟ್ಟು ಜನಾಂಗದವರನ್ನು ಸೇರ್ಪಡೆಗೊಳಿಸುವ ಅಥವಾ ಹೊರಗಿಡುವ ಗಡಿಯನ್ನು ಅಪೆಕ್ಸ್ ನ್ಯಾಯಾಲಯವು ವಿವರಿಸಿಲ್ಲ ಎಂದು ನಮ್ಮ ತಿಳುವಳಿಕೆ ತಿಳಿಸುತ್ತದೆ. ಜಾತಿ ಮತ್ತು ಬುಡಕಟ್ಟು ಜನಾಂಗದವರ ಆಯ್ಕೆಯು ಬದಲಾಯಿಸಲಾಗದಿದ್ದಲ್ಲಿ, ಅದರ ಹಿಂದಿನ ಪ್ರತಿಯೊಂದು ವಿಸ್ತೃತ ವಿವರಣೆ ಹಿಂದಿನಿಂದ ಜಾರಿಯಾಗುವುದು ಲಗತ್ತಿಸುತ್ತದೆ ಎಂದು ತರ್ಕವು ನಿರ್ದೇಶಿಸುತ್ತದೆ ಎಂದು ನಮಗೆ ತೋರುತ್ತದೆ. ಈ ವ್ಯಾಖ್ಯಾನ ಅನಿವಾರ್ಯವಾಗಿದೆ ಎಂದು ನಮಗೆ ತೋರುತ್ತದೆ, ಏಕೆಂದರೆ ಪ್ರತಿ ಜಾತಿಯ ಕಾಗುಣಿತವು ಜಿಲ್ಲೆಯಿಂದ ಉಪಪ್ರಾಂತ್ಯದವರೆಗೆ ಬದಲಾಗುತ್ತದೆ, ಮತ್ತು ಆಡುಭಾಷೆಯಿಂದ ಇಂಗ್ಲಿಷ್ ಭಾಷೆಗೆ ಅನುವಾದವು ನಿಖರತೆ ಮತ್ತು

ದೃಢೀಕರಣವನ್ನು ಹೊಂದಿರುವುದಿಲ್ಲ. ಖಿನ್ನತೆಗೆ ಒಳಗಾದ ವರ್ಗಗಳು ಅಥವಾ ಹಿಂದುಳಿದ ವರ್ಗಗಳು ಅಥವಾ ಪರಿಶಿಷ್ಟ ಜಾತಿ ಅಥವಾ ಬುಡಕಟ್ಟು ಜನಾಂಗದವರಿಗೆ ಭೂ ಮಂಜೂರಾತಿ, (ಇದು ನಮ್ಮ ತೀರ್ಮಾನ – ನ್ಯಾಯಾಲಯದ) ಭಾರತದ ಸಂವಿಧಾನದ ಮೊದಲು ಅಥವಾ ನಂತರ, ಒಂದೇ ರೀತಿ ಮತ್ತು ಸಮಾನತೆಯಿಂದ ಪರಿಗಣಿಸಬೇಕು.

(11). ಇಲ್ಲಿ ಉಲ್ಲೇಖಿಸಲಾದ ತೀರ್ಪುಗಳ ಬಗ್ಗೆ ಗಮನಿಸೋಣ

(ಎ). ಸುಪ್ರೀಮ್ ಕೋರ್ಟ್ ಮುಂದೆ ಬಂದ ಎಲೆಕ್ಷನ್ ಪ್ರಕರಣವೊಂದರಲ್ಲಿ ವೊಡ್ಡರು ಮತ್ತು ಬೋವಿ ಜನಾಂಗ ಪರಿಶಿಷ್ಟ ಜಾತಿಗೆ ಸೇರಿದೆಯೇ ಎಂಬ ಪ್ರಶ್ನೆಯನ್ನು ನಿರ್ಧರಿಸಲಾಗುತ್ತದೆ. ಈ ಪ್ರಕರಣದಲ್ಲಿ ಎಲೆಕ್ಷನ್ ಟ್ರೈಭ್ಯೂನಲ್ ವಡ್ಡರು ಜನಾಂಗದ ಪೈಕಿ ಒಂದು ಜಾತಿ ಬೋಯಿ ಮಾತ್ರ ಸೇರಿಸಲಾಗಿದೆ ಎಂದು ಹೇಳುತ್ತದೆ. ಮೈಸೂರು ರಾಜ್ಯ ಸರ್ಕಾರ 1944 ರಲ್ಲೇ ರೆಸಲ್ಯೂಷನ್ ಬರೆದು ವಡ್ಡ ಜನಾಂಗವನ್ನು ಇನ್ನು ಮುಂದೆ ಬೋಯಿ ಎಂದು ಬಳಸಲು ಸೂಚಿಸಲಾಗಿರುವ ಸಾಕ್ಷ್ಯದ ಆಧಾರದಲ್ಲಿ ಎರಡೂ ಜಾತಿ ಒಂದೇ ಎಂದು ಎತ್ತಿ ಹಿಡಿಯಲಾಗಿರುತ್ತದೆ.[1] ।ಆದರೆ ಈ ಬಗ್ಗೆ ಈ ಪ್ರಕರಣದ ತೀರ್ಪಿನ ನಂತರ ಕಾನೂನು ಏನು ಹೇಳುತ್ತದೆ ನೋಡಿ, 20-03-2015 ರಲ್ಲಿ ಸಂವಿಧಾನ (ಶೆಡ್ಯೂಲ್ ಕ್ಯಾಸ್ಟ್ಸ್) ಆರ್ಡರ್ಸ್ (ಅಮೆಂಡ್ಮೆಂಟ್) ಕಾಯ್ದೆ 2015 ಜಾರಿಯಾಗಿ ಪರಿಶಿಷ್ಟ ಜಾತಿ ಪಟ್ಟಿಯಲ್ಲಿನ 23 ನೇ ನಮೂದಿನಲ್ಲಿ ಇದ್ದ "ಭೋವಿ" ಎಂಬುದನ್ನು ತೆಗೆದು ಹಾಕಿ "ಭೋವಿ, (Bhovi), ಓಡ್, ಓಡ್ಡೆ, ವಡ್ಡಾರ್, ವಾಡ್ಡಾರ್, ವೊಡ್ಡಾರ್, ವೋಡ್ಡಾರ್, ಬೋವಿ (ಬೆಸ್ತಾ ಅಲ್ಲದವರು), (Bovi (non-besta)) ಕಲ್ಲುವಡ್ಡಾರ್, ಮಣ್ಣುವಡ್ಡಾರ್" ಎಂಬ ಜಾತಿಗಳನ್ನು ಸೇರಿಸಲಾಗಿದೆ. ಇಲ್ಲಿ ಭೋವಿ ಜಾತಿಗೆ ಪರ್ಯಾಯ ಜಾತಿ ಎಂದು ಸೇರಿಸಲಾಗಿಲ್ಲ, ಕೆಲವು ಸಮುದಾಯಗಳನ್ನು ಸೇರಿಸುವ ಮೂಲಕ ಎಂದಿದೆ, ಇಲ್ಲಿ ಸಮುದಾಯಗಳು ಹೊಸದಾಗಿ ಸೇರ್ಪಡೆಯಾದಂತೆ ತೋರುತ್ತಿದೆ. ತಿದ್ದುಪಡಿಯಲ್ಲಿ ಯಾವ ತಾರೀಖಿನಿಂದ ಇದನ್ನು ಜಾರಿಗೆ ತರಲಾಗಿದೆ ಎಂಬ

[1] ಬಸವಲಿಂಗಪ್ಪ ವಿ. ಮುನಿಚಿನ್ನಪ್ಪ – ಎ.ಐ.ಆರ್ 1965 ಎಸ್.ಸಿ 1269

ಉಲ್ಲೇಕ ಇಲ್ಲ. – ಅಲ್ಲಿಗೆ ಈ ಬದಲಾದ ಕಾನೂನಿನ ವ್ಯಾಖ್ಯಾನವನ್ನು ಮಾತ್ರ ತೆಗೆದುಕೊಳ್ಳಬೇಕಾಗುತ್ತದೆ[1] ಅನುಭಂದ-24 ರಲ್ಲಿ ನೀಡಲಾಗಿರುವ 1978 ಮತ್ತು 1979 ರ ಕರ್ನಾಟಕ ಸರ್ಕಾರದ ಹಿಂದುಳಿದ ಬುಡಕಟ್ಟು ಜನಾಂಗ ಪಟ್ಟಿಯಲ್ಲಿ ವಡ್ಡರು ಮತ್ತು ಇತರೆ ಸಮಾನಾರ್ಥಕ ಜಾತಿಯನ್ನು ಹಿಂದುಳಿದ ಬುಡಕಟ್ಟು ಪಟ್ಟಿಯಲ್ಲಿ ಇಟ್ಟಿದ್ದಾರೆ.

(ಬಿ). ಇತರ ಹಿಂದುಳಿದ ವರ್ಗಗಳ ಉಪ-ವರ್ಗೀಕರಣಕ್ಕಾಗಿ ಇಂದ್ರ ಸಹಾನಿಯವರ ಪ್ರಕರಣದಲ್ಲಿ[2] ತಿಳಿಸಲಾದ ತತ್ವಗಳನ್ನು ರಾಷ್ಟ್ರಪತಿ ಪಟ್ಟಿಯಲ್ಲಿ ಉಪ-ವರ್ಗೀಕರಣ ಅಥವಾ ಉಪ-ಗುಂಪುಗಾರಿಕೆಯನ್ನು ಪರಿಶಿಷ್ಟ ಜಾತಿಗಳಿಗೆ ಪೂರ್ವನಿದರ್ಶನದ ಕಾನೂನಾಗಿ ಅನ್ವಯಿಸಬಹುದು ಎಂದು ನಾವು ಭಾವಿಸುವುದಿಲ್ಲ ಏಕೆಂದರೆ ಆ ತೀರ್ಪು ಸ್ವತಃ ನಿರ್ದಿಷ್ಟವಾಗಿ ಹೇಳಿದೆ. ಇತರ ಹಿಂದುಳಿದ ವರ್ಗಗಳ ಉಪ-ವಿಭಾಗವು ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡಕ್ಕೆ ಅನ್ವಯಿಸುವುದಿಲ್ಲ. ಇದು ಸ್ಪಷ್ಟ ಕಾರಣಕ್ಕಾಗಿ ಎಂದು ನಾವು ಭಾವಿಸುತ್ತೇವೆ, ಅಂದರೆ ಸಂವಿಧಾನವು ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡಗಳ ಪಟ್ಟಿಯನ್ನು ರಾಜ್ಯ ಸರ್ಕಾರಗಳ ಹಸ್ತಕ್ಷೇಪದಿಂದ ದೂರವಿರಿಸಿದೆ.[3] ಅಂದರೆ 1950 ರ ಅಧ್ಯಕ್ಷರ ಆದೇಶಕ್ಕೆ ಸೇರ್ಪಡೆ ಮಾಡುವುದು, ರಾಜ್ಯ ಶಾಸಕಾಂಗದಿಂದ ಸೇರ್ಪಡೆ ಮಾಡುವುದು ಅಸಂವಿಧಾನ ಕ್ರಿಯೆ ಆಗುತ್ತದೆ. (ಈ ಉಲ್ಲೇಕಿತ ತೀರ್ಪು ತೆಗೆದುಕೊಂಡ ತೀರ್ಮಾನಕ್ಕೆ ಕಾರಣದ ಬುನಾದಿಯಾಗದು)[4]

(ಸಿ). ಸಂವಿದಾನ ಪೀಠ ಮಿನರ್ವ ಮಿಲ್ ಪ್ರಕರಣದಲ್ಲಿ[5] "ಆರ್ಟಿಕಲ್ 14 ರ ಶಿಸ್ತು ಹಿಂತೆಗೆದುಕೊಂಡರೆ ಮತ್ತು ಆ ವಿಧಿಯ ಕಾರ್ಯಾಚರಣೆಯಿಂದ ವಿನಾಯಿತಿ ನೀಡಿದರೆ, ಸಂಸತ್ತು ಅಂಗೀಕರಿಸಿದ ಕಾನೂನುಗಳ ಮೇಲೆ

---

[1] ಲೇಖಕರ ಅಭಿಪ್ರಾಯ

[2] ಇಂದಿರಾ ಸಾಹ್ವನಿ ವಿ. ಯು.ಆಫ್.ಇಂಡಿಯಾ – 1992 (3) ಎಸ್.ಸಿ.ಸಿ 217

[3] ಚಿನ್ನಯ್ಯ ವಿ. ಆಂಧ್ರಪ್ರದೇಶ ರಾಜ್ಯ – ಎ.ಐ.ಆರ್ 2005 ಎಸ್.ಸಿ 162

[4] ನಮ್ಮ ಅನಿಸಿಕೆ

[5] ಮಿನರ್ವಮಿಲ್ಸ್ ವಿ. . ಯು.ಆಫ್.ಇಂಡಿಯಾ – 1980 (3) ಎಸ್.ಸಿ.ಸಿ 625

ಮಾತ್ರವಲ್ಲದೆ ರಾಜ್ಯ ಶಾಸಕಾಂಗಗಳು ಅಂಗೀಕರಿಸಿದ ಕಾನೂನುಗಳ ಮೇಲೂ ವಿನಾಯಿತಿ ನೀಡಿದರೆ, ಸಂಖ್ಯಾತ್ಮಕವಾಗಿ ದೊಡ್ಡ ಗುಂಪುಗಳು ನಡೆಸುವ ರಾಜಕೀಯ ಒತ್ತಡಗಳು ಹರಿದು ಹೋಗಬಹುದು, ಆದ್ಯತೆಯ ಸೇವೆಗಳಿಗಾಗಿ ಅನುಕೂಲಕರ ಪ್ರದೇಶಗಳು ಮತ್ತು ನೆಚ್ಚಿನ ವರ್ಗಗಳನ್ನು ಆಯ್ಕೆ ಮಾಡಲು ಮಾಡಲು ಅದನ್ನು ಶಾಸಕಾಂಗಕ್ಕೆ ಒತ್ತಡ ತರುವ ಮೂಲಕ ದೇಶವನ್ನು ಬೇರ್ಪಡಿಸುತ್ತದೆ" (ಈ ಉಲ್ಲೇಕಿತ ತೀರ್ಪು ತೆಗೆದುಕೊಂಡ ತೀರ್ಮಾನಕ್ಕೆ ಕಾರಣದ ಬುನಾದಿಯಾಗದು)[1]

(ಡಿ). ಇನ್ನೊಂದು ಹೈಕೋರ್ಟಿನ ದ್ವಿಸದಸ್ಯ ಪೀಠದ ತೀರ್ಪು,[2] ಇದರಲ್ಲಿ ಸರ್ಕಾರಿ ಅಧಿಕಾರಿಗಳು ಸಾಗುವಳಿ ಚೀಟಿಯಲ್ಲೂ ಗ್ರಾಂಟಿಯನ್ನು ಭೋವಿ ಎಸ್.ಸಿ ಜಾತಿ ಎಂದು ಪರಿಗಣಿಸಿದ್ದಾರೆ, ಆದರೆ ಪರಭಾರೆ ನಿಬಂದನೆ ಹಾಕಿಲ್ಲ, ಅಂತಹ ಪರಿಗಣನೆ ನಂತರ ಕಾರಣವಿಲ್ಲದೆ ಅನ್ಯತಾ ಸರ್ಕಾರ ಹೇಳುವಹಾಗಿಲ್ಲ ಎಂಬ ಸಿದ್ಧಾಂತವನ್ನು ಪ್ರತಿಪಾದಿಸುತ್ತದೆ.

(ಇ). ಇನ್ನೊಂದು ಸುಪ್ರೀಮ್ ಪ್ರಕರಣವನ್ನು[3] ಉಲ್ಲೇಕಿಸಲಾಗುತ್ತದೆ. ಈ ಪ್ರಕರಣದಲ್ಲಿ ತಿದ್ದುಪಡಿಯನ್ನು ಹಿಂದಿನಿಂದ ಜಾರಿ ಮಾಡಬಹುದೆ ಎಂಬುದಕ್ಕೆ ವಿವರಣೆ ಇದೆ, "ಇದು ನಿರ್ಮಾಣದ ಒಂದು ಪ್ರಮುಖ ತತ್ವವಾಗಿದ್ದು, ಪ್ರತಿ ಶಾಸನವು ಮೇಲ್ನೋಟಕ್ಕೆ ಅಂದಿನಿಂದ ಜಾರಿಯಾಗಬೇಕು (ಪ್ರಾಸ್ಪೆಕ್ಟೀವ್) ಹೊರತು ಅದು ಸ್ಪಷ್ಟವಾಗಿ ಅಥವಾ ಅಗತ್ಯವಾದ ಸೂಚನೆಯಿಲ್ಲದೆ ಹಿಂದಿನಿಂದ (ರೀಟ್ರಾಸ್ಪೆಕ್ಟೀವ್) ಕಾರ್ಯಾಚರಣೆಯನ್ನು ಮಾಡಬೇಕಾಗಿಲ್ಲ. ಆದರೆ ಕಾನೂನಿನ ಉದ್ದೇಶವು ಪ್ರಾಪ್ತವಾದ ಹಕ್ಕುಗಳ ಮೇಲೆ ಪರಿಣಾಮ ಬೀರುವುದು ಅಥವಾ ಹೊಸ ಹೊರೆಗಳನ್ನು ಹೇರುವುದು ಅಥವಾ ಅಸ್ತಿತ್ವದಲ್ಲಿರುವ ಕಟ್ಟುಪಾಡುಗಳನ್ನು ದುರ್ಬಲಗೊಳಿಸುವುದಕ್ಕೆ ಸಾಮಾನ್ಯವಾದ ನಿಯಮವು ಅನ್ವಯಿಸುತ್ತದೆ. **ಅಸ್ತಿತ್ವದಲ್ಲಿರುವ ಹಕ್ಕುಗಳ ಮೇಲೆ ಪರಿಣಾಮ ಬೀರುವ ಶಾಸಕಾಂಗದ ಉದ್ದೇಶವನ್ನು ತೋರಿಸಲು ಸಾಕಷ್ಟು ಶಾಸನಗಳಲ್ಲಿ**

[1] ನಮ್ಮ ಅನಿಸಿಕೆ

[2] ವಿರುಪಾಕ್ಷಪ್ಪ ವ್. ಹನುಮಂತಾ – ಐ.ಎಲ್.ಆರ್ 1994 ಕರ್ 1270 (ಡಿ.ಬಿ)

[3] ಜಿಲೇಸಿಂಗ್ ವಿ. ಹರ್ಯಾಣ ರಾಜ್ಯ – ಎ.ಐ.ಆರ್ 2004 ಎಸ್.ಸಿ 5842

**ಪದಗಳಿಲ್ಲದಿದ್ದರೆ, ಅದು "ನೋವಾ ಕಾನ್ಸ್ಟಿಟಿಯೊ ಫ್ಯೂಚುರಿಸ್ ಫಾರ್ಮಾಮ್ ಇಂಪೊನೆರೆ ಡೆಬೆಟ್ ನಾನ್ ಪ್ರೆಟೆರಿಟಿಸ್' ಮಾತ್ರ ಎಂದು ಪರಿಗಣಿಸಲಾಗುತ್ತದೆ" -- "ಹೊಸ ಕಾನೂನು ಅನುಸರಿಸಬೇಕಾದದ್ದನ್ನು ನಿಯಂತ್ರಿಸಬೇಕು, ಕಳೆದುಹೋದದ್ದು ಅಲ್ಲ."** ಶಾಸನವನ್ನು ಹಿಂದಿನಿಂದ ಜಾರಿ ಮಾಡಲು ಕರಾರುವಕ್ಕು ನಿಬಂಧನೆ ಮಾಡುವುದು ಅನಿವಾರ್ಯವಲ್ಲ ಮತ್ತು ಹಿಂದಿನಿಂದ ಜಾರಿಯಾಗುವ ವಿರುದ್ಧದ ಊಹೆಯನ್ನು ಅಗತ್ಯವಾದ ಸೂಚನೆಯಿಂದ ಹಿಮ್ಮೆಟ್ಟಿಸಬಹುದು, ವಿಶೇಷವಾಗಿ ಸಮುದಾಯದ ಲಾಭಕ್ಕಾಗಿ ಅಂಗೀಕರಿಸಲ್ಪಟ್ಟ ದುಷ್ಟತನವನ್ನು ಗುಣಪಡಿಸಲು ಹೊಸ ಕಾನೂನನ್ನು ರೂಪಿಸಲಾಗಿರುತ್ತದೆ. ಹಿಂದಿನಿಂದ ಜಾರಿಯಾಗುವ ಕಾರ್ಯಾಚರಣೆಯ ವಿರುದ್ಧದ ಊಹೆಯು ಘೋಷಣಾತ್ಮಕ ಕಾನೂನುಗಳಿಗೆ ಅನ್ವಯಿಸುವುದಿಲ್ಲ ... ಆದ್ದರಿಂದ, ಕಾಯ್ದೆಯ ಸ್ವರೂಪವನ್ನು ನಿರ್ಧರಿಸುವಲ್ಲಿ, ಅದರ ರೂಪಕ್ಕೆ ಬದಲಾಗಿ ವಿಷಯವನ್ನು ಪರಿಗಣಿಸಬೇಕು. **ಹೊಸ ಕಾಯ್ದೆಯು ಹಿಂದಿನ ಕಾಯ್ದೆಯನ್ನು 'ವಿವರಿಸಲು' ಇದ್ದರೆ,** ಅದು ಹಿಂದಿನಿಂದ ನಿರ್ಣಯಿಸದ ಹೊರತು ಅದು ಉದ್ದೇಶವಿಲ್ಲದಾಗುತ್ತದೆ. ಸ್ಪಷ್ಟವಾದ ಲೋಪವನ್ನು ಪೂರೈಸಲು ಅಥವಾ ಹಿಂದಿನ ಕಾಯ್ದೆಯ ಅರ್ಥದ ಬಗ್ಗೆ ಅನುಮಾನಗಳನ್ನು ನಿವಾರಿಸಲು ವಿವರಣಾತ್ಮಕ ಕಾಯ್ದೆಯನ್ನು ಸಾಮಾನ್ಯವಾಗಿ ಅಂಗೀಕರಿಸಲಾಗುತ್ತದೆ. ಒಂದು ಶಾಸನವು ರೋಗನಿರೋಧಕವಾಗಿದ್ದರೆ ಅಥವಾ ಹಿಂದಿನ ಕಾನೂನಿನ ಘೋಷಣೆಯಾಗಿದ್ದರೆ ಹಿಂದಿನಿಂದ ಜಾರಿಯ ಕಾರ್ಯಾಚರಣೆ ಸಾಮಾನ್ಯವಾಗಿ ಉದ್ದೇಶಿಸಲಾಗಿರುತ್ತದೆ ..... ಒಂದು ತಿದ್ದುಪಡಿ ಕಾಯ್ದೆಯು ಈಗಾಗಲೇ ಸೂಚ್ಯವಾದ ಪ್ರಧಾನ ಕಾಯ್ದೆಯ ನಿಬಂಧನೆಯ ಅರ್ಥವನ್ನು ತೆರವುಗೊಳಿಸಲು ಸಂಪೂರ್ಣವಾಗಿ ಘೋಷಣೆಯಾಗಿರಬಹುದು. ಈ ಸ್ವರೂಪದ ಸ್ಪಷ್ಟ ತಿದ್ದುಪಡಿಯು ಹಿಂದಿನ ಅವಧಿಯ ಪರಿಣಾಮವನ್ನು ಬೀರುತ್ತದೆ."

(ಎಫ್). "ರಾಷ್ಟ್ರಪತಿಗಳು ಪ್ರಕಟಿಸಿದ ಷೆಡ್ಯೂಲ್ ಗಳಲ್ಲಿನ ಬದಲಾವಣೆ ವಿಷಯದಲ್ಲಿ ಯಾವುದೇ ರೀತಿಯ ರಾಜಕೀಯ ಅಂಶಗಳನ್ನು ನಿರ್ಮಿಸುವ ಉದ್ದೇಶದಿಂದ," ಹೊಸ ಜಾತಿಗಳು / ಬುಡಕಟ್ಟು ಜನಾಂಗದವರನ್ನು

ಸೇರ್ಪಡೆಗೊಳಿಸುವುದು ಸಂವಿಧಾನದ ಚೌಕಟ್ಟುಗಳಿಂದ ಅನುಮತಿಸಲಾಗದು, ಡಾ. ಅಂಬೇಡ್ಕರ್ ಅವರು ಸಂವಿಧಾನ ಸಭೆಯಲ್ಲಿ ಆಡಿದ ಈ ಮಾತನ್ನು, ಶ್ರೇಷ್ಠ ನ್ಯಾಯಾಲಯವು ಕನಿಷ್ಠ ಎರಡು ಬಾರಿ[1] ಅಂಗೀಕರಿಸಿದೆ.[2]

(ಇಲ್ಲಿ ತೀರ್ಪಿನ ಬುನಾಧಿಯಾಗಿ ಉಲ್ಲೇಕಿತ ಕಾರಣವನ್ನು ನೀಡುವ ಕೇಸುಗಳ ಸಾರಾಂಶಗಳು ತೆಗೆದುಕೊಂಡ ನಿರ್ಣಯಕ್ಕೆ ವ್ಯತಿರಿಕ್ತವಾಗಿರುವುದು ಮತ್ತು ಜಾತಿಗಳ ವಾಸ್ತವಿಕತೆಗಳ ಬಗ್ಗೆ ಚರ್ಚೆಯಾಗದೆ ಇರುವುದರಿಂದ ಮತ್ತೊಮ್ಮೆ ಇಂತಹ ಪ್ರಕರಣಗಳಲ್ಲಿ ಸುಪ್ರೀಮ್ ಕೋರ್ಟ್ ಗಮನಿಸುವುದು, ಅಥವ ಅದರ ವಿಮರ್ಶೆಗೆ ಕಳಿಸುವುದು ಸೂಕ್ತ. – ಲೇಖಕರು)

**ಅಲ್ಪಸಂಖ್ಯಾತ ತೀರ್ಮಾನದ ವಿವರ**

ಈ ಮೇಲ್ಕಂಡ ಕೇಸಿನ ಪೀಠದಲ್ಲಿ ಒಬ್ಬರು ನ್ಯಾಯಮೂರ್ತಿಗಳು, ಸಂವಿಧಾನದ ಪ್ರಾರಂಬದಲ್ಲಿ ನೋಟಿಫೈ ಮಾಡಲಾದ ಎಸ್.ಸಿ/ ಎಸ್.ಟಿ ಲಿಸ್ಟ್ ಗೆ ಮುಂದೆ ತಿದ್ದುಪಡಿ ಮಾಡಿ ಕೆಲವು ಜಾತಿ/ವರ್ಗ ಗಳನ್ನು ಸೇರ್ಪಡೆ ಮಾಡಿದ್ದರೆ, ಅಂತಹ ಸೇರ್ಪಡೆ ದಿನಾಂಕಕ್ಕೆ ಮುಂಚೆ ನೀಡಲಾದ ಭೂ ಮಂಜೂರಾತಿಗಳು ಅಥವ ಅಂತಹ ಸೇಪಡೆಗೆ ಮುಂಚೆ ಆದ ಮೊದಲ ಕ್ರಯಗಳು ಪಿ.ಟಿ.ಸಿ.ಎಲ್ ವ್ಯಾಪ್ತಿಗೆ ಬರುವುದಿಲ್ಲ ಎಂದು ತೀರ್ಪು ನೀಡಿ ಕೊಟ್ಟಿರುವ ಕಾರಣಗಳನ್ನು ಗಮನಿಸಿ:–

(1). ಮಹಲಿಂಗಪ್ಪ ಪ್ರಕರಣದ ವಿಭಾಗೀಯ ನ್ಯಾಯಪೀಠ (ರಿಟ್ ಅಪೀಲ್ ನಂ. 2807/1991 – ಡಿ.ಡಿ 07–11–1995) 'ಮಂಜೂರು ಮಾಡಿದ ಭೂಮಿ' ಯ ವ್ಯಾಖ್ಯಾನಕ್ಕೆ ಒಳಪಡುವ ಭೂಮಿ, ಅನುದಾನ ಪಡೆದವರು, ಅನುದಾನದ ದಿನಾಂಕದಂದು, ಪರಿಶಿಷ್ಟ ಜಾತಿ ಅಥವಾ ಪರಿಶಿಷ್ಟ ಪಂಗಡಕ್ಕೆ ಸೇರಿರಬೇಕು ಎಂಬ ಅಭಿಪ್ರಾಯವನ್ನು ತೆಗೆದುಕೊಂಡಿದ್ದಾರೆ ಮತ್ತು ಅನುದಾನದ ದಿನಾಂಕದ ನಂತರ, ಅನುದಾನದ ಜಾತಿಯನ್ನು ಪರಿಶಿಷ್ಟ ಜಾತಿ ಅಥವಾ ಪರಿಶಿಷ್ಟ ಪಂಗಡ ಎಂದು ಸೂಚಿಸುವುದರಿಂದ ಭೂಮಿಯನ್ನು 'ಮಂಜೂರು ಮಾಡಿದ ಭೂಮಿ' ಆಗುವುದಿಲ್ಲ.

---

[1] ಮಹಾರಾಷ್ಟ್ರ ರಾಜ್ಯ ವಿ. ಮಿಲಿಂದ್ – 2001 (1) ಎಸ್.ಸಿ.ಸಿ 4

[2] ಚಿನ್ನಯ್ಯ ವಿ ಆಂದ್ರಪ್ರದೇಶ ರಾಜ್ಯ – ಎ.ಐ.ಆರ್ 2005 ಎಸ್.ಸಿ 162

(2). ಇನ್ನೆರಡು ಪ್ರಕರಣಗಳಲ್ಲಿ, ಗ್ರಾಂಟಿಯನ್ನು ಗ್ರಾಂಟ್ ನಂತರದಲ್ಲಿ ಪರಿಶಿಷ್ಟ ಜಾತಿ ಅಥವಾ ಪರಿಶಿಷ್ಟ ಪಂಗಡಕ್ಕೆ ಸೇರಿಸಲಾಗಿದ್ದರೆ, ಅದು ಪಿ.ಟಿ.ಸಿ.ಎಲ್ ಕಾಯ್ದೆ ವ್ಯಾಪ್ತಿಯಲ್ಲಿ "ಗ್ರಾಂಟ್ ಜಮೀನು ಆಗುತ್ತದೆ". ಒಂದು ಪ್ರಕರಣದಲ್ಲಿ,[1] (ದ್ವಿಸದಸ್ಯ ಪೀಠ) ವಾಲ್ಮೀಕಿ ಸಮುದಾಯ 1991 ರಲ್ಲಿ ಪರಿಶಿಷ್ಟ ಪಂಗಡಕ್ಕೆ ಸೇರಿಸಲಾಯಿತು ಎಂಬ ವಿಚಾರಕ್ಕೆ ದ್ವಿಸದಸ್ಯ ಪೀಠದ ತೀರ್ಪಿನ[2] ಆಧಾರವಾಗಿಸಿ ಅಲ್ಲಿ 'ನಾಯಕ' ಜನಾಂಗವು ಪರಿಶಿಷ್ಟ ಪಂಗಡಕ್ಕೆ ಸೆರಿಸಲಾಗಿಲ್ಲವಾದರೂ ಅಂತಹ ಸಮುದಾಯದ ಅಸ್ತಿತ್ವ ಮತ್ತು ಅವರ ದೀನದಲಿತ ಸ್ಥಾನಮಾನವು ವಿವಾದದಲ್ಲಿಲ್ಲದಿರುವುದು ಮತ್ತು ಯೋಜನೆಯಡಿ ಭೂ ಮಂಜೂರಾತಿ ಮಾಡಲಾಗಿರುವುದು, ಪರಭಾರೆ ನಿಷಿದ್ಧ ಅವಧಿಯಲ್ಲಿ ಅಂತಹ ಯಾವುದೇ ಭೂಮಿಯನ್ನು ಮಾರಾಟ ಮಾಡುವುದು ಕಾಯ್ದೆಯ

---

[1] ರಂಗಯ್ಯ ವಿ. ಎ.ಸಿ ತಿಪಟೂರು – 2002 (2) ಕೆ.ಸಿ.ಸಿ.ಆರ್ 1257 (ಡಿ.ಬಿ)

[2] ಕೃಷ್ಣಪ್ಪ ವಿ. ಕರ್ನಾಟಕ ರಾಜ್ಯ – ಐ.ಎಲ್.ಆರ್ 1982 ಕರ್ 1310 (ಡಿ.ಬಿ) – "ಕಾಯ್ದೆಯಲ್ಲಿ ಬರುವ 'ಪರಿಶಿಷ್ಟ ಜಾತಿ' ಮತ್ತು 'ಪರಿಶಿಷ್ಟ ಪಂಗಡ' ಎಂಬ ಪದಗಳು ಸಂವಿಧಾನದಲ್ಲಿ ಅವರಿಗೆ ನಿಗದಿಪಡಿಸಿದ ಅರ್ಥಗಳನ್ನು ಹೊಂದಿವೆ ಎಂಬುದು ನಿಜ. ಸಂವಿಧಾನದ ಅಡಿಯಲ್ಲಿ ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡಗಳ ಪಟ್ಟಿಯಲ್ಲಿ ಸೇರ್ಪಡೆಗೊಂಡಿರುವ ಜಾತಿ ಮತ್ತು ಬುಡಕಟ್ಟು ಜನಾಂಗದವರು ಸಂವಿಧಾನದ ಪ್ರಾರಂಭದ ಮೊದಲು ಅಸ್ತಿತ್ವದಲ್ಲಿಲ್ಲ ಎಂದು ಇದರ ಅರ್ಥವಲ್ಲ. ಆ ಜಾತಿ ಮತ್ತು ಬುಡಕಟ್ಟು ಜನಾಂಗದವರಲ್ಲಿ ಹೆಚ್ಚಿನವರು ಖಿನ್ನತೆಗೆ ಒಳಗಾದ ವರ್ಗಗಳು, (ಡಿಪ್ರೆಸ್ಡ್ ಕ್ಲಾಸಸ್) ಹರಿಜನರು, ಬುಡಕಟ್ಟು ಜನರು ಮತ್ತು ಗಿರಿಜನರು ಎಂದು ಕರೆಯಲ್ಪಟ್ಟರು. ಸಂವಿಧಾನದ ಆಗಮನದ ನಂತರ, ಪರಿಶಿಷ್ಟ ಜಾತಿಗಳ ಪಟ್ಟಿಯಲ್ಲಿ ಅಥವಾ ಪರಿಶಿಷ್ಟ ಪಂಗಡದವರ ಪಟ್ಟಿಗೆ ಸೇರ್ಪಡೆಗೊಂಡ ಒಂದು ಜಾತಿ ಅಥವಾ ಬುಡಕಟ್ಟು ಜನಾಂಗಕ್ಕೆ ಸೇರಿದ ಯಾವುದೇ ವ್ಯಕ್ತಿಗೆ ಸರ್ಕಾರ ಭೂಮಿಯನ್ನು ನೀಡಿದ್ದರೆ, ಅಂತಹ ಭೂಮಿಯನ್ನು ಸೆಕ್ಷನ್ 3 ರ ಷರತ್ತು (ಬಿ) ರಲ್ಲಿ ವ್ಯಾಖ್ಯಾನಿಸಿರುವಂತೆ 'ಮಂಜೂರು ಭೂಮಿಗಳು' ಎಂಬ ಪದದ ವ್ಯಾಪ್ತಿಯಲ್ಲಿ ಬರುವಂತೆ ಪರಿಗಣಿಸಬಾರದು ಎಂಬುದಕ್ಕೆ ಯಾವುದೇ ಕಾರಣಗಳಿಲ್ಲ. ಕಾಯ್ದೆಯ ನಿಬಂಧನೆಗಳು ಅಂತಹ ಜಮೀನುಗಳಿಗೆ ಅನ್ವಯಿಸದಿರಲು ಯಾವುದೇ ಕಾರಣಗಳಿಲ್ಲ. ಹೀಗಾಗಿ, 26-1-1950ರ ಮೊದಲು ನೀಡಲಾದ ಜಮೀನುಗಳ ಪರಭಾರೆಯನ್ನು ಕಾಯ್ದೆಯಡಿ ಅಮಾನ್ಯಗೊಳಿಸಲಾಗದು ಅಥವಾ ಅಂತಹ ಭೂಮಿಯನ್ನು ವಶಪಡಿಸಿಕೊಳ್ಳಲಾಗದು ಎಂಬ ...... ವಾದವನ್ನು ತಿರಸ್ಕರಿಸಲು ನಮಗೆ ಯಾವುದೇ ಹಿಂಜರಿಕೆಯಿಲ್ಲ."

ನಿಬಂಧನೆಗಳಿಂದ ಬಾಧಿತವಾಗುತ್ತದೆ ಎಂದಿದೆ. ಇನ್ನೊಂದು ಪ್ರಕರಣದಲ್ಲಿ[1] 'ಕೊರಮ' ಜನಾಂಗಕ್ಕೆ ಸೇರಿದವರನ್ನು ಪರಿಶಿಷ್ಟ ಜಾತಿಯ ಪಟ್ಟಿಯಲ್ಲಿ 1950 ರ ಅಧಿಸೂಚನೆಯಲ್ಲಿ ಸೇರಿಸಲಾಗಿತ್ತು, ನಂತರ 1956 ರ ತಿದ್ದುಪಡಿಯಲ್ಲಿ ಕೈಬಿಡಲಾಗಿತ್ತು. ನಂತರ 1976 ರ ತಿದ್ದುಪಡಿಯಲ್ಲಿ ಸೇರಿಸಲಾಗಿತ್ತು. ಅಂತಹ ತಿದ್ದುಪಡಿ 27-07-1977 ರಿಂದ ಜಾರಿಗೆ ಬಂದಿತ್ತು. ಈ ಕೇಸಿನಲ್ಲಿ "ಉಪ್ಪಾರ ಕೊರಮ" ಜಾತಿ "ಕೊರಮ" ಜಾತಿ ಒಂದೆ ಅಲ್ಲ ಎನ್ನುವ ವಾದವೂ ಇರುತ್ತದೆ. ಈ ಬಗ್ಗೆ ಅಲ್ಲಗೆಳೆಯಲಾಗಿಲ್ಲ ಅಥವ ವಿವಾದಿಸಲಾಗಿಲ್ಲ ಆದುದರಿಂದ ಅಂಗೀಕಾರವಾಗಿದೆ ಎಂಬ ತೀರ್ಪು ಆಗಿದೆ. ಈ ಪ್ರಕರಣದಲ್ಲಿ ಮೇಲ್ಕಂಡ ಕೃಷ್ಣಪ್ಪ ಪ್ರಕರಣವನ್ನು ಆಧಾರವಾಗಿ ತೆಗೆದುಕೊಳ್ಳಲಾಗಿದೆ.[2]

(3). ಸಂವಿಧಾನಕ್ಕೆ ಪೂರ್ವದಲ್ಲಿ ಗ್ರಾಂಟ್ ಆದ ಬಗ್ಗೆ ಕೃಷ್ಣಪ್ಪ ಪ್ರಕರಣದಲ್ಲಿ ತೀರ್ಪು ನೀಡಲಾಗಿದ್ದು ಅದು ಇಂದಿಗೂ ಸಿಂಧುವಾಗಿದೆ. ಈಗ ರೆಫರ್ ಆಗಿರುವ ಅಂಶ ಸಂವಿಧಾನಕ್ಕೆ ನಂತರ ಆಗಿರುವ ಗ್ರಾಂಟ್ ಬಗ್ಗೆ ಆಗಿದ್ದು, ಮಹಲಿಂಗಪ್ಪ ಪ್ರಕರಣ ಕಾನೂನು ಅಂಶವನ್ನು ಪರಿಗಣಿಸಿಲ್ಲವೆ (ಪರ್ ಇನ್ಕ್ಯುರಿಯಮ್) ಎಂಬುದೇ ಪ್ರಶ್ನೆಯಾಗಿದೆ.

---

[1] ನಚಿಮುತ್ತು ವಿ. ನಾಗರಾಜು – ಐ.ಎಲ್.ಆರ್ 1999 ಕರ್ 250 (ಡಿ.ಬಿ)

[2] ಅನುಭಂದ-21, 23 ರ ಪ್ರಕಾರ 1950 ಮತ್ತು 1951 ರ ಪಟ್ಟಿಯಲ್ಲಿ ಮೈಸೂರು ಪ್ರಾಂತ್ಯಕ್ಕೆ ಮತ್ತು ಕೂರ್ಗ್ ಪ್ರಾಂತ್ಯಕ್ಕೆ ಸೀಮಿತವಾಗಿ ಕೊರಮ ಜನರನ್ನು ಎಸ್.ಸಿ ಪಟ್ಟಿಯಲ್ಲಿ ಇಟ್ಟಿದ್ದಾರೆ. 1956 ರ ತಿದ್ದುಪಡಿಯಲ್ಲಿ ಕೂರ್ಗ್, ಬೆಳಗಾಮ್, ಬಿಜಾಪುರ, ದಾರವಾರ, ಕೆನರಾ, ದಕ್ಷಿಣ ಕೆನರಾ, ಗುಲ್ಬರ್ಗ, ರಾಯಚೂರು, ಬೀದರ್ ಜಿಲ್ಲೆ ಮತ್ತು ಮೈಸೂರಿನ ಕೊಳ್ಳೆಗಾಲ ತಾಲೂಕು ಹೊರತು ಪಡಿಸಿ ಇಡೀ ರಾಜ್ಯದಲ್ಲಿ ಕೊರಮ ಜನರನ್ನು ಎಸ್.ಸಿ ಪಟ್ಟಿಯಲ್ಲಿ ಗುರುತಿಸಲಾಗಿದೆ. 1976 ರಲ್ಲಿ ತಿದ್ದುಪಡಿ ಕಾಯ್ದೆ ಹೊರಡಿಸಿ, ಪಾರ್ಲಿಮೆಂಟ್ ಮತ್ತು ಅಸೆಂಬ್ಲಿ ಕಾನ್ಸಟಿಟ್ಯೂಎನ್ಸಿ ವಿಂಗಡನೆಗಾಗಿ 1971 ರ ಸೆನ್ಸೆಸ್ ರೀತ್ಯ ಪರಿಶೀಲಿಸಿ ಜಾತಿ ಮತ್ತು ಪಂಗಡವನ್ನು ಆಯಾ ಪ್ರಾಂತ್ಯಕ್ಕೆ ಗುರುತಿಸಿ ಮತ್ತೊಂದು ಗೆಜೆಟ್ ಪ್ರಕಟಣೆ ಹೊರಡಿಸಲು ಕಲಂ 5(3) ರಲ್ಲಿ ಸೂಚನೆ ಇದೆ. ಇಂತಹ ಗೆಜೆಟ್ ಪ್ರಕಟಣೆ ಇಲ್ಲದೆ ಹೇಗೆ ರಾಜ್ಯದಾದ್ಯಂತ ಕೊರಮ ಜನಾಂಗವನ್ನು (ಇತರೆ ಜನಾಂಗವನ್ನು) ಗುರುತಿಸಲಾಗಿದೆ ಎಂಬುದೇ ಒಂದು ಪ್ರಶ್ನಾರ್ಥಕವಾಗಿದೆ. ಈ ಅಂಶ ತೀರ್ಪಿನಲ್ಲಿ ಚರ್ಚೆ ಆಗಿಲ್ಲ. ಕೂರ್ಗ್ ಜಿಲ್ಲೆಗೆ ಮಾತ್ರ ಕೊರಮ ಜನರನ್ನು ಕೈಬಿಟ್ಟಿರುವುದು ಸ್ಪಷ್ಟವಾಗಿ ತೀರ್ಪಿನಲ್ಲಿ ಚರ್ಚಿಸಲಾಗಿಲ್ಲ.

(4). ನನ್ನ ಅಭಿಪ್ರಾಯದಲ್ಲಿ, ಭಾರತದ ಸಂವಿಧಾನದ ಆರ್ಟಿಕಲ್ 341 (1) ಅಥವಾ 342 (1) ರ ಅಡಿಯಲ್ಲಿ ರಾಷ್ಟ್ರಪತಿಗಳು ಸೂಚಿಸಿರುವ ಪರಿಶಿಷ್ಟ ಜಾತಿ ಅಥವಾ ಪರಿಶಿಷ್ಟ ಪಂಗಡಗಳ ಪಟ್ಟಿಗೆ ಸಂಸತ್ತಿನಿಂದ ಯಾವುದೇ ಜಾತಿ ಅಥವಾ ಬುಡಕಟ್ಟು ಸೇರ್ಪಡೆ ಮಾಡಿರುವುದು, ಸ್ಪಷ್ಟಪಡಿಸುವುದಕ್ಕೆ, ವಿವರಿಸುವುದಕ್ಕೆ ಅಥವ ಇತರೆ ಉದ್ದೇಶಕ್ಕೆ ಆಗಿದ್ದರೂ, ಸಂಸತ್ತಿನ ತಿದ್ದುಪಡಿ ಕಾಯ್ದೆಯಲ್ಲಿ ಸ್ಪಷ್ಟವಾಗಿ ಹಿಂದಿನಿಂದ ಜಾರಿ ಬಗ್ಗೆ ಹೇಳದ ಹೊರತು, ಯಾವುದೇ ಹಿಂದಿನ ಪರಿಣಾಮವನ್ನು ಉಂಟುಮಾಡಲು ಸಾಧ್ಯವಿಲ್ಲ. ಇದು ಸ್ಥಿರ ಆಸ್ತಿಗಳಿಗೆ ಸಂಬಂಧಿಸಿದ ವಿಷಯಗಳಲ್ಲಿ, ಸಾರ್ವಜನಿಕ ಉದ್ಯೋಗದ ವಿಷಯಗಳಲ್ಲಿ ಮೂರನೇ ವ್ಯಕ್ತಿಗಳ ಕಾನೂನುಬದ್ಧವಾಗಿ ಸ್ವಾಧೀನಪಡಿಸಿಕೊಂಡಿರುವ ಹಕ್ಕುಗಳ ಮೇಲೆ ಉಂಟಾಗುವ ಪರಿಣಾಮಗಳಿಂದಾಗಿ, ಈ ನ್ಯಾಯಾಲಯವು ರಂಗಯ್ಯ ಮತ್ತು ಇತರ ಪ್ರಕರಣಗಳಲ್ಲಿ ತೆಗೆದುಕೊಂಡ ಜಾತಿ ಅಥವಾ ಬುಡಕಟ್ಟು ಜನಾಂಗದವರನ್ನು ಪರಿಶಿಷ್ಟ ಜಾತಿ / ಪರಿಶಿಷ್ಟ ಪಂಗಡದ ಪಟ್ಟಿಗೆ ಸೇರಿಸುವುದರಿಂದ ಹಿಂದಿನ ಪರಿಣಾಮವು ಕಾನೂನಿನಲ್ಲಿ ಉಂಟಾಗುತ್ತದೆ ಎಂಬುದು ಸರಿಯಾದ ನಿರ್ಣಯ ಅಲ್ಲವಾಗಿದೆ. (ಇದು ಅಲ್ಪಸಂಖ್ಯಾತ ತೀರ್ಪು).

(5). ಈ ಅಲ್ಪ ಸಂಖ್ಯಾತ ತೀರ್ಪಿನಲ್ಲಿ ಮಾನ್ಯ ನ್ಯಾಯ ಮೂರ್ತಿಗಳು ಎರಡು ಮುಂಬೈ ಹೈಕೋರ್ಟ್, ಒಂದು ಮಧ್ಯಪ್ರದೇಶ ಹೈಕೋರ್ಟ್ ತೀರ್ಪಿನ ಉಲ್ಲೇಕ ಮಾಡಿದ್ದಾರೆ, ಇದು ಇಂತದ್ದೇ ಕಾಯ್ದೆಯ ಬಗ್ಗೆ ತೆಗೆದುಕೊಂಡ ನಿರ್ಣಯಗಳಾಗಿವೆ. ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡದ 1950 ರ ನಂತರದಲ್ಲಿ ಸಂವಿಧಾನಕ್ಕೆ ಸೇರ್ಪಡೆ ಮಾಡಿರುವುದು ಹಿಂದಿನಿಂದ ಜಾರಿಯಾಗುವುದಕ್ಕೆ ಆ ತಿದ್ದುಪಡಿ ಕಾಯ್ದೆಯಲ್ಲಿ ತಿಳಿಸಿರಬೇಕು ಇಲ್ಲವೆ ಹಿಂದಿನಿಂದ ಜಾರಿ ಮಾಡಲು ಸಾಧ್ಯವಿಲ್ಲ ಎಂದು ತೀರ್ಪು ನೀಡಿವೆ.

(6). ಮಂಚೇಗೌಡ ಪ್ರಕರಣವನ್ನು[1] ಉಲ್ಲೇಕಿಸಿ ಕಾಯ್ದೆ ಪ್ರಾರಂಬಕ್ಕೆ ಮುನ್ನ ಅಂತಹ ಮಾಲೀಕತ್ವವನ್ನು ಪ್ರಶ್ನಿಸುವುದಕ್ಕೇ ಹಕ್ಕು ಇಲ್ಲದಾಗ ಕಲಂ 4 ರ

---

[1] ಮಂಚೇಗೌಡ ವಿ. ಕರ್ನಾಟಕ ರಾಜ್ಯ – ಎ.ಐ.ಆರ್ 1984 ಎಸ್.ಸಿ 1151

ಪಿ.ಟಿ.ಸಿ.ಎಲ್ ಕಾಯ್ದೆಯಲ್ಲಿ ಸಂವಿಧಾನ ಆಶಯಗಳನ್ನು ಉಲ್ಲಂಘಿಸಿ ಖರೀದಿದಾರರ ಮಾಲೀಕತ್ವವನ್ನು ಅನೂರ್ಜಿತಗೊಳಿಸಲಾಗದು ಎಂಬ ಅಂಶವನ್ನು ತೋರಿಸಿರುತ್ತಾರೆ.[1]

**ಸಂವಿಧಾನ ವಿಧಿ 341 ಮತ್ತು 342 ರ ಬಗ್ಗೆ**

**341. ಅನುಸೂಚಿತ ಜಾತಿಗಳು** (1) ರಾಷ್ಟ್ರಪತಿಯು ಯಾವುದೇ ರಾಜ್ಯಕ್ಕೆ ಅಥವಾ ಯಾವುದೇ ಒಕ್ಕೂಟ ರಾಜ್ಯಕ್ಷೇತ್ರಕ್ಕೆ ಸಂಬಂದಿಸಿದಂತೆ ಮತ್ತು ರಾಜ್ಯವಾಗಿರುವ ಸಂಧರ್ಬದಲ್ಲಿ ಅದರ ರಾಜ್ಯಪಾಲನೊಡನೆ ಸಮಾಲೋಚನೆ ಮಾಡಿದ ತರುವಾಯ, ಈ ಸಂವಿಧಾನದ ಉದ್ದೇಶಗಳಿಗಾಗಿ, ಆ ರಾಜ್ಯದ ಅಥವಾ ಸಂಧರ್ಭಾನುಸಾರ ಆ ಒಕ್ಕೂಟ ರಾಜ್ಯಕ್ಷೇತ್ರದ ಸಂಬಂಧದಲ್ಲಿ ಅನುಸೂಚಿತ ಜಾತಿಗಳೆಂಬುದಾಗಿ ಭಾವಿಸಬೇಕಾದ ಜಾತಿಗಳು, ಮೂಲ ವಂಶಗಳು ಅಥವ ಬುಡಕಟ್ಟುಗಳನ್ನು ಅಥವಾ ಜಾತಿಯ ಮೂಲವಂಶದ ಅಥವಾ ಬುಡಕಟ್ಟಿನ ಭಾಗಗಳನ್ನು ಅಥವಾ ಅವುಗಳೊಳಗಿನ ಗುಂಪುಗಳನ್ನು ಸಾರ್ವಜನಿಕ ಅಧಿಸೂಚನೆಯ ಮೂಲಕ ನಿರ್ದಿಷ್ಟಪಡಿಸಬಹುದು.

(2). ಸಂಸತ್ತು, ಕಾನೂನಿನ ಮೂಲಕ ಯಾವುದೇ ಜಾತಿ, ಮೂಲ ವಂಶ ಅಥವಾ ಬುಡಕಟ್ಟನ್ನು ಅಥವಾ ಯಾವುದೇ ಜಾತಿಯ, ಮೂಲವಂಶದ ಅಥವ ಬುಡಕಟ್ಟಿನ ಭಾಗವನ್ನು ಅಥವಾ ಅದರೊಳಗಿನ ಗುಂಪನ್ನು (1)ನೇ ಖಂಡದ ಮೇರೆಗೆ ಹೊರಡಿಸಲಾದ ಅಧಿಸೂಚನೆಯಲ್ಲಿ ನಿರ್ದಿಷ್ಟಪಡಿಸಿದ ಅನುಸೂಚಿತ ಜಾತಿಗಳ ಪಟ್ಟಿಯಲ್ಲಿ ಸೇರಿಸಬಹುದು ಅಥವಾ ಅದರಿಂದ ತೆಗೆದುಹಾಕಬಹುದು; ಆದರೆ ಹಿಂದೆ ಹೇಳಿದಂತೆ ಹೊರತು, ಸದರಿ ಖಂಡದ ಮೇರೆಗೆ ಹೊರಡಿಸಲಾದ ಅಧಿಸೂಚನೆಯನ್ನು ಆ ತರುವಾಯದ ಯಾವುದೇ ಅಧಿಸೂಚನೆಯ ಮೂಲಕ ವ್ಯತ್ಯಸ್ತಗೊಳಿಸತಕ್ಕುದಲ್ಲ.

**342. ಅನುಸೂಚಿತ ಬುಡಕಟ್ಟುಗಳು** (1) ರಾಷ್ಟ್ರಪತಿಯು ಯಾವುದೇ ರಾಜ್ಯ ಅಥವಾ ಯಾವುದೇ ಒಕ್ಕೂಟ ರಾಜ್ಯಕ್ಷೇತ್ರಕ್ಕೆ ಸಂಬಂದಿಸಿದಂತೆ ಮತ್ತು ಅದು ರಾಜ್ಯವಾಗಿರುವ ಸಂಧರ್ಬದಲ್ಲಿ ಅದರ ರಾಜ್ಯಪಾಲನೊಡನೆ ಸಮಾಲೋಚನೆ

---

[1] ಈ ಬಗ್ಗೆ ಬದಲಾದ ಕಾನೂನು ಮತ್ತು ಈ ತೀರ್ಪುಗಳ ಇಂದಿನ ಪ್ರಸ್ತುತತೆ ಬಗ್ಗೆ ಮುಂದೆ ಚರ್ಚಿಸಲಾಗಿದೆ.

ಮಾಡಿದ ತರುವಾಯ, ಈ ಸಂವಿಧಾನದ ಉದ್ದೇಶಗಳಿಗಾಗಿ, ಆ ರಾಜ್ಯದ ಅಥವಾ ಸಂಧರ್ಭಾನುಸಾರ ಆ ಒಕ್ಕೂಟ ರಾಜ್ಯಕ್ಷೇತ್ರದ ಸಂಬಂಧದಲ್ಲಿ ಅನುಸೂಚಿತ ಬುಡಕಟ್ಟುಗಳೆಂದು ಭಾವಿಸಬೇಕಾದ ಅನುಸೂಚಿತ ಬುಡಕಟ್ಟುಗಳನ್ನು ಅಥವಾ ಬುಡಕಟ್ಟುಗಳ ಸಮುದಾಯಗಳನ್ನು ಅಥವಾ ಬುಡಕಟ್ಟುಗಳ ಅಥವಾ ಬುಡಕಟ್ಟು ಸಮುದಾಯದ ಭಾಗಗಳನ್ನು ಅಥವಾ ಅದರೊಳಗಿನ ಗುಂಪುಗಳನ್ನು ಸಾರ್ವಜನಿಕ ಅಧಿಸೂಚನೆಯ ಮೂಲಕ ನಿರ್ದಿಷ್ಟಪಡಿಸಬಹುದು.

(2). ಸಂಸತ್ತು, ಕಾನೂನಿನ ಮೂಲಕ ಯಾವುದೇ ಬುಡಕಟ್ಟನ್ನು ಅಥವ ಬುಡಕಟ್ಟಿನ ಸಮುದಾಯವನ್ನು ಅಥವಾ ಯಾವುದೇ ಬುಡಕಟ್ಟಿನ ಅಥವ ಬುಡಕಟ್ಟಿನ ಸಮುದಾಯದ ಭಾಗವನ್ನು ಅಥವ ಅದರೊಳಗಿನ ಗುಂಪನ್ನು, (1)ನೇ ಖಂಡದ ಮೇರೆಗೆ ಹೊರಡಿಸಲಾದ ಅಧಿಸೂಚನೆಯಲ್ಲಿ ನಿರ್ದಿಷ್ಟಪಡಿಸಿದ ಅನುಸೂಚಿತ ಬುಡಕಟ್ಟುಗಳ ಪಟ್ಟಿಯಲ್ಲಿ ಸೇರಿಸಬಹುದು ಅಥವಾ ಅದರಿಂದ ತೆಗೆದುಹಾಕಬಹುದು; ಆದರೆ ಮೇಲೆ ಹೇಳಿದಂತೆ ಹೊರತು ಸದರಿ ಖಂಡದ ಮೇರೆಗೆ ಹೊರಡಿಸಲಾದ ಅಧಿಸೂಚನೆಯನ್ನು ಆ ತರುವಾಯದ ಯಾವುದೇ ಅಧಿಸೂಚನೆಯ ಮೂಲಕ ವ್ಯತ್ಯಸ್ತಗೊಳಿಸತಕ್ಕುದಲ್ಲ.

**ವಿಧಿ 341 ಮತ್ತು 342 ಸುಪ್ರೀಮ್ ಸಂವಿಧಾನ ಪೀಠ ವ್ಯಾಖ್ಯಾನ**

[1](1). ಭಾರತದ ಸಂವಿಧಾನದ ವಿಧಿ 341 ಮತ್ತು 342 ರ ಅಡಿಯಲ್ಲಿರುವ ಅಧಿಕಾರದ ಮೂಲಕ, ಜಾತಿ, ಜನಾಂಗ, ಅಥವಾ ಬುಡಕಟ್ಟು ಅಥವಾ ಗುಂಪುಗಳ ಭಾಗಗಳನ್ನು ಇತರೆ ಜಾತಿ, ಜನಾಂಗ, ಅಥವಾ ಬುಡಕಟ್ಟು ಜನಾಂಗದೊಳಗೆ ಒಂದು ಭಾಗ ಅಥವಾ ಗುಂಪುಗಳನ್ನಾಗಿ ನಿರ್ದಿಷ್ಟಪಡಿಸುವ ಸಾರ್ವಜನಿಕ ಅಧಿಸೂಚನೆಯನ್ನು ಹೊರಡಿಸಲು ರಾಷ್ಟ್ರಪತಿಯವರಿಗೆ ಅಧಿಕಾರವಿದೆ.

---

[1] ಮಹಾರಾಷ್ಟ್ರ ರಾಜ್ಯ ವಿ. ಮಿಲಿಂದ್ – 2001 (1) ಎಸ್.ಸಿ.ಸಿ 4

(2). ಸಂವಿಧಾನದ ಉದ್ದೇಶಗಳಿಗಾಗಿ ಒಂದು ರಾಜ್ಯ ಅಥವಾ ಕೇಂದ್ರಾಡಳಿತ ಪ್ರದೇಶಕ್ಕೆ ಸಂಬಂಧಿಸಿದಂತೆ ಅಂತಹ ಷೆಡ್ಯೂಲ್ ಅನ್ನು ಪರಿಶಿಷ್ಟ ಜಾತಿ ಅಥವಾ ಪರಿಶಿಷ್ಟ ಪಂಗಡ ಎಂದು ಪರಿಗಣಿಸಲಾಗುತ್ತದೆ.

(3). ವಿಧಿ 341 ಮತ್ತು 342 ರ ಭಾಷೆ ಮತ್ತು ನಿಯಮಗಳು ಒಂದೇ ಆಗಿವೆ. ವಿಧಿ 341 ರಲ್ಲಿ ಯತಾವತ್ತು ಸಂಬಂಧಿಸಿದಂತೆ ಏನು ಹೇಳಲಾಗಿದೆ ಎಂಬುದು ವಿಧಿ 342 ಕ್ಕೆ ಅನ್ವಯಿಸುತ್ತದೆ. ಈ ವಿಧಿ ಶ್ಲಾಘನೀಯ ಉದ್ದೇಶವು ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡದ ಸದಸ್ಯರಿಗೆ ಅವರು ಅನುಭವಿಸುತ್ತಿರುವ ಸಾಮಾಜಿಕ ಮತ್ತು ಶೈಕ್ಷಣಿಕ ಹಿಂದುಳಿದಿರುವಿಕೆಗೆ ಸಂಬಂಧಿಸಿದಂತೆ ಹೆಚ್ಚುವರಿ ರಕ್ಷಣೆ ನೀಡುವುದು.

(4). ಸಾಕಷ್ಟು ಸಮಯದ ನಂತರ. 'ಪರಿಶಿಷ್ಟ ಜಾತಿ' ಮತ್ತು 'ಪರಿಶಿಷ್ಟ ಪಂಗಡ' ಎಂಬ ಅಭಿವ್ಯಕ್ತಿಯಲ್ಲಿ 'ಜಾತಿಗಳು' ಅಥವಾ 'ಬುಡಕಟ್ಟುಗಳು' ಎಂಬ ಪದಗಳನ್ನು ಪದಗಳ ಸಾಮಾನ್ಯ ಅರ್ಥದಲ್ಲಿ ಬಳಸಲಾಗುವುದಿಲ್ಲ ಆದರೆ 366 (24) ಮತ್ತು 366 (25) ವಿಧಿಗಳಲ್ಲಿರುವ ವ್ಯಾಖ್ಯಾನಗಳ ಅರ್ಥದಲ್ಲಿ ಬಳಸಲಾಗುತ್ತದೆ. ಸಂವಿಧಾನ ವಿಧಿ 366 (24), ಮತ್ತು (25) ಕೆಳಕಂಡಂತೆ ಹೇಳಿದೆ.

366. ಪರಿಭಾಷೆಗಳು:- ಈ ಸಂವಿಧಾನದಲ್ಲಿ ಸಂದರ್ಭವು ಅನ್ಯಥಾ ಅಗತ್ಯಪಡಿಸಿದ ಹೊರತು ಈ ಕೆಳಗಿನ ಪದಗಳಿಗೆ ಅನುಕ್ರಮವಾಗಿ ಕೊಟ್ಟಿರುವಂಥ ಅರ್ಥಗಳೇ ಇರುತ್ತವೆ; ಎಂದರೆ:-

(24) "ಅನುಸೂಚಿತ ಜಾತಿಗಳು" ಎಂದರೆ 341ನೇಯ ಅನುಚ್ಛೇದದ ಮೇರೆಗೆ ಈ ಸಂವಿಧಾನದ ಉದ್ದೇಶಗಳಿಗಾಗಿ ಅನುಸೂಚಿತ ಜಾತಿಗಳೆಂದು ಭಾವಿಸಲಾಗಿರುವಂಥ ಜಾತಿಗಳು, ಮೂಲವಂಶಗಳು ಅಥವಾ ಬುಡಕಟ್ಟುಗಳು ಅಥವಾ ಅಂಥ ಜಾತಿ, ಮೂಲವಂಶ ಅಥವಾ ಬುಡಕಟ್ಟುಗಳಲ್ಲಿನ ಭಾಗಗಳು ಅಥವಾ ಗುಂಪುಗಳು;

(25) "ಅನುಸೂಚಿತ ಬುಡಕಟ್ಟುಗಳು" ಎಂದರೆ 342ನೇಯ ಅನುಚ್ಛೇದದ ಮೇರೆಗೆ ಈ ಸಂವಿಧಾನದ ಉದ್ದೇಶಗಳಿಗಾಗಿ ಅನುಸೂಚಿತ ಬುಡಕಟ್ಟುಗಳೆಂದು ಭಾವಿಸಲಾಗಿರುವಂಥ ಬುಡಕಟ್ಟುಗಳು ಅಥವ ಬುಡಕಟ್ಟು

ಕಮೀಷನರ್ ನ್ಯಾಯಾಲಯದಲ್ಲಿ ಗ್ರಾಂಟಿ ಬೋವಿ ಜನಾಂಗಕ್ಕೆ /ಪರಿಶಿಷ್ಟ ಜಾತಿಗೆ ಸೇರಿಲ್ಲ ಎಂಬ ಬಗ್ಗೆ ಯಾವುದೇ ಪುರಾವೆ ನೀಡಲಾಗಿರುವುದಿಲ್ಲ. ಗ್ರಾಂಟ್ ಪತ್ರದಲ್ಲಿ ಇಂತಿಷ್ಟು ವರ್ಷ ಪರಭಾರೆ ಮಾಡಬಾರದು ಎಂಬ ಶರತ್ತು ವಿಧಿಸಲಾಗಿರುತ್ತದೆ. ಮುಂಬರುವ ಖರೀದಿದಾರನು ಖರೀದಿಸಬೇಕೆ ಬ್ಯಾಡವೇ ಎಂಬ ಬಗ್ಗೆ ಜಾಗ್ರತೆ ವಹಿಸಬೇಕಾಗುತ್ತದೆ. ಇಂತಹ ಸೂಚನೆ ನಂತರವೂ ಖರೀದಿದಾರನು ನಿರ್ಲಕ್ಷ್ಯವಾಗಿ ಕ್ರಯದ ವ್ಯವಹರಣೆಗೆ ಹೋದರೆ ಆತನನ್ನೇ ದೂಷಿಸಬೇಕಾಗುತ್ತದೆ. ಗ್ರಾಂಟ್ ಶರತ್ತು ಯಾವಾಗಲೂ ಪರಭಾರೆ ಮಾಡಬಾರದು ಎಂದಿದ್ದರೂ ಅದನ್ನು ಗ್ರಾಂಟಿ ಮಾತ್ರ ಪ್ರಶ್ನಿಸಬೇಕಾಗುತ್ತದೆ. ಖರೀದಿದಾರನು ಆ ಬಗ್ಗೆ ಪ್ರಶ್ನಿಸುವಂತಿಲ್ಲ. ಗ್ರಾಂಟಿ ಮಗನ ಹೆಸರಿನಲ್ಲಿ ತಹಶೀಲ್ದಾರ್ ಕೊಟ್ಟಿರುವ ಜಾತಿ ಪ್ರಮಾಣಪತ್ರ ಅವಲಂಬಿಸಿರುವುದರಲ್ಲಿ ತಪ್ಪಿಲ್ಲ ಎಂದು ತೀರ್ಪಿತ್ತಿದೆ.

ಇನ್ನೊಂದು ಹೈಕೋರ್ಟ್[1] ಪ್ರಕರಣದಲ್ಲಿ 'ಬೋವಿ' ಜನ ಗ್ರಾಂಟ್ ಸಮಯದಲ್ಲಿ ಎಸ್.ಸಿ/ ಎಸ್.ಟಿ ಆಗಿರಲಿಲ್ಲ ಎಂದು ವಾದಿಸಲಾಗುತ್ತಾದರೂ ಬಸವಲಿಂಗಪ್ಪ ಪ್ರಕರಣ ಉಲ್ಲೇಕಿಸಿ, ಸದರಿ ಪ್ರತಿಪಾದನೆಯನ್ನು ದ್ವಿಸದಸ್ಯ ಪೀಠ ತಳ್ಳಿಹಾಕಿದೆ.

'ಕೊರಮ' ಮತ್ತು 'ಕೊರಮ ಶೆಟ್ಟಿ' ಇಬ್ಬರೂ ಒಂದೇ ಪರಿಶಿಷ್ಟಜಾತಿಗೆ ಸೇರಿದವರಾಗಿರುವರೇ ಎಂಬ ಪ್ರಶ್ನೆ ಕರ್ನಾಟಕ ಹೈಕೋರ್ಟಿನ ಮುಂದೆ ಎರಡು ಪ್ರಕರಣದಲ್ಲಿ ಬಂದಿದೆ ಏಕ ಸದಸ್ಯ ಪೀಠದ ಮುಂದೆ, ಗ್ರಾಂಟ್ ನೀಡಿದಾಗ ಆಗಲೀ ಪ್ರಕರಣ ಜಾರಿಯಾದಾಗ ಆಗಲೀ ಗ್ರಾಂಟಿ ಪರಿಶಿಷ್ಟ ಜಾತಿಗೆ ಸೇರಿರುವುದಿಲ್ಲ ಎಂಬ ವಾದ ಮಾಡಲಾಗುತ್ತದೆ. ಈ ವಾದವನ್ನು ತಳ್ಳಿಹಾಕಿದ ನ್ಯಾಯಾಲಯಗಳು[2] ಇದು ಪರ್ಯಾಯ ಪದ ಎಂದು ಅನುವಾದಿಸುತ್ತಾರೆ.[3] ಇದೇ ರೀತಿಯ ಜಾತಿ ವಿವಾದ[4] ಕರ್ನಾಟಕ ಹೈಕೋರ್ಟಿನ ದ್ವಿಸದಸ್ಯ ಪೀಠದ

---

[1] ಮುನಿವೆಂಕಟಪ್ಪ ವಿ. ಜಿಲ್ಲಾಧಿಕಾರಿಗಳು – 2003 (5) ಕರ್.ಎಲ್.ಜೆ 423

[2] ಓಬ್ಳಪ್ಪ ವಿ. ಲಕ್ಷ್ಮಣ – ಮನು/ ಕೆ.ಎ/ 1300/ 2011

[3] ಸಣ್ಣರಂಗಯ್ಯ ವಿ. ಉಪವಿಭಾಗಾಧಿಕಾರಿ – 1991 (4) ಕರ್.ಎಲ್.ಜೆ 766

[4] ರಾಮಕೃಷ್ಣ ಗೌಡ ವಿ. ಕರ್ನಾಟಕ ರಾಜ್ಯ – (ಡಿ.ಬಿ)

ಮುಂದೆ[1] ಬರುತ್ತದೆ ಅಲ್ಲಿ 1962 ರಲ್ಲಿ ಗ್ರಾಂಟ್ ಆಗಿರುತ್ತದೆ, ಕಾಯ್ದೆ ಪ್ರಾರಂಬದ ನಂತರ 1990 ರಿಂದ 1993 ರಲ್ಲಿ ಮೊದಲ ಕ್ರಯ ಆಗಿರುತ್ತದೆ, 1999 ರಲ್ಲಿ ಅರ್ಜಿಯನ್ನ ಹಾಕಲಾಗಿರುತ್ತದೆ. ಈ ಬಗ್ಗೆ ಕೊರಮ ಜನಾಂಗ 1950 ರ ಆದೇಶದಲ್ಲಿ ಎಸ್.ಸಿ ಆಗಿ ಗುರುತಿಸಲಾಗಿದೆ. 2002 ರ ನೋಟಿಫಿಕೇಷನ್ ನಲ್ಲಿ 'ಕೊರಮ ಶೆಟ್ಟಿ' ಜನರನ್ನ ಎಸ್.ಸಿ ಆಗಿ ಗುರುತಿಸಲಾಗಿದೆ ಎಂಬ ತಾರ್ಕಿಕ ವಾದವನ್ನು ಮಂಡಿಸಲಾಗುತ್ತದೆ. ಗ್ರಾಂಟಿ ಕೊರಮ ಜನಾಂಗಕ್ಕೆ ಸೇರಿದ್ದು ಎಂಬ ವಾದ ಮಂಡನೆ ಮಾಡುತ್ತಾರೆ. ಖರೀದಿದಾರರ ವಾದವು ಗ್ರಾಂಟಿ ಕೊರಮ ಶೆಟ್ಟಿ ಜನಾಂಗಕ್ಕೆ ಸೇರಿದ್ದು ಎಂದು ಇರುತ್ತದೆ. ಆದರೆ ಅದಕ್ಕೆ ಪೂರಕ ದಾಖಲೆ ಹಾಜರು ಪಡಿಸಿಲ್ಲ ಎಂದು ಈ ಬಗ್ಗೆ ಹೆಚ್ಚಿನ ಚರ್ಚೆಗೆ ನ್ಯಾಯಾಲಯ ಹೋಗುವುದಿಲ್ಲ. 1979 ರ ನಂತರ ಕ್ರಯ ಆಗಿರುವುದರಿಂದ ಕಲಂ 4(2) ರ ರೀತ್ಯ ಅನುಮತಿ ಪಡೆದಿಲ್ಲ ಎಂಬ ಕಾರಣಕ್ಕೆ ಖರೀದಿದಾರರ ವಾದ ತಿರಸ್ಕಾರವಾಗುತ್ತದೆ.

ಪ್ರಕರಣವೊಂದರಲ್ಲಿ ಗ್ರಾಂಟ್ ಮಾಡಿರುವಾಗಿನ ದಾಖಲಾತಿಗಳಲ್ಲಿ, ಗ್ರಾಂಟಿಯು ಎಸ್.ಸಿ. ಎಸ್.ಟಿ ಅಲ್ಲದ ಜಾತಿಯ ಉಲ್ಲೇಕ ಇರುತ್ತದೆ, ಗ್ರಾಂಟಿಯ ಜಾತಿ ಬುಂಡ–ಬೆಸ್ತ ಎಂದಿರುತ್ತದೆ. ಇದಕ್ಕಾಗಿ ಅಂದಿನ ಜಾತಿ ಪ್ರಮಾಣಪತ್ರ ಗಮನಿಸಿದ ಎ.ಸಿ ನ್ಯಾಯಾಲಯ ಕಾಯ್ದೆ ಕಲಂ 4 ರಲ್ಲಿ ಪ್ರಶ್ನಿತ ಕ್ರಯ ಉಲ್ಲಂಘನೆ ಆಗಿದೆಯೇ ಎಂಬುದನ್ನು ಬರೆಯದೆ ವಜಾ ಮಾಡುತ್ತದೆ. ಡಿ.ಸಿ ನ್ಯಾಯಾಲಯ ಸದರಿ ಜಾತಿ ಪ್ರಮಾಣಪತ್ರದ ಬಗ್ಗೆ ಉಲ್ಲೇಕಿಸದೆ ಅರ್ಜಿ ಪುರಸ್ಕರಿಸುತ್ತೆ. ಅಂತಹ ಮೂಲ ಅಂಶಗಳನ್ನು ಪರಿಗಣಿಸದೆ ಬರೆದಿರುವ ಆದೇಶ ಸರಿಯಲ್ಲ ಎಂದು ಹೈಕೋರ್ಟ್ ರಿಮ್ಯಾಂಡ್ ಮಾಡುತ್ತದೆ.[2]

ಸುಪ್ರೀಮ್ ಕೋರ್ಟ್[3] ಮುಂದಿನ ಒಂದು ಪ್ರಕರಣದಲ್ಲಿ, ತೀರ್ಪಿನಲ್ಲಿ ಉಲ್ಲೇಕಿಸಿರುವಂತೆ, ಕರಿಯಪ್ಪನ ಮಕ್ಕಳು ರಂಗಪ್ಪ ಮತ್ತು ನಾಗಪ್ಪನಿಗೆ 8 ಎಕರೆ ಜಮೀನು 1957 ರಲ್ಲಿ ಗ್ರಾಂಟ್ ಆಗಿರುತ್ತದೆ. ರಂಗಪ್ಪ ಮತ್ತು ನಾಗಪ್ಪ

---

[1] ರಿಟ್ ಅಪೀಲು 16482–83/2011 (ಎಸ್.ಸಿ/ಎಸ್.ಟಿ) ದಿ: 23–05–2012

[2] ಲೀಲಾವತಿ ವಿ. ಕರ್ನಾಟಕ ರಾಜ್ಯ – 2010 (1) ಕೆ.ಸಿ.ಸಿ.ಆರ್ 125

[3] ಕಲಿಯಮ್ಮ ವಿ. ಜಿಲ್ಲಾಧಿಕಾರಿಗಳು – 2008 (4) ಎಸ್.ಸಿ.ಸಿ 137

ಬುಡ್ಡಪ್ಪ ಎಂಬುವವರೊಡನೆ ಒಟ್ಟು ಕುಟುಂಬ ಹೊಂದಿ ಬುಡ್ಡಪ್ಪನಿಗೆ 3 ಎಕರೆ ನಾಗಪ್ಪನಿಗೆ 5 ಎಕರೆ ನೀಡಲ್ಪಡುತ್ತದೆ. 1965 ರಲ್ಲಿ ಬುಡ್ಡಪ್ಪ ತಿಪ್ಪೀರಣ್ಣನಿಗೆ ಮಾರಾಟ ಮಾಡುತ್ತಾರೆ. 1966 ರಲ್ಲಿ ತಿಪ್ಪೀರಣ್ಣ ಕೋರ್ಟ್ ಹರಾಜಿನಲ್ಲಿ ಬಾಕಿ 5 ಎಕರೆ ಕೊಂಡುಕೊಳ್ಳುತ್ತಾನೆ. ಆ ನಂತರ 1986 ರಲ್ಲಿ 8 ಎಕರೆ ತಿಪ್ಪೀರಣ್ಣ ಇನ್ನೊಬ್ಬರಿಗೆ ಮಾರಾಟ ಮಾಡಿರುತ್ತಾರೆ. ರಂಗಸ್ವಾಮಿ ಎನ್ನುವವರು ರಂಗಪ್ಪನ ಮಗನೆಂದು, ಸಣ್ಣಕರಿಯಮ್ಮ ಎನ್ನುವವರು ನಾಗಪ್ಪನ ವಾರಸ್ಸು ಎಂದು ಕಾಯ್ದೆ ಜಾರಿಯ ನಂತರ ಅರ್ಜಿ ಸಲ್ಲಿಸಿರುತ್ತಾರೆ. ಇಲ್ಲಿ ಹಲವು ಹಂತದಲ್ಲಿ ಕಂಡುಕೊಳ್ಳಲಾದ ಅಂಶಗಳನ್ನು ಗಮನಿಸಿ, (1) ಎ.ಸಿ. ನ್ಯಾಯಾಲಯವು ಹೀಗೆಂದಿದೆ, ಎಸ್.ಸಿ. ಎಸ್.ಟಿ ಗೆ ಸೇರಿದ ವ್ಯಕ್ತಿಗೆ ಜಮೀನು ಮಂಜೂರು ಮಾಡಿದ್ದರೆ ನಮೂನೆ-2 (ಫಾರ್ಮ್-II) ರಲ್ಲಿ ನೀಡಲಾಗುತ್ತದೆ, ಸಾಮಾನ್ಯ ವರ್ಗದವರಿಗೆ ನಮೂನೆ-1 ರಲ್ಲಿ ನೀಡಲಾಗುತ್ತದೆ. ಎಂದು ಅರ್ಜಿ ವಜಾ ಮಾಡಿದ್ದಾರೆ (2). ಜಿಲ್ಲಾಧಿಕಾರಿ ನ್ಯಾಯಾಲಯದಲ್ಲಿ 10 ವರ್ಷ ಪರಭಾರೆ ಮಾಡಬಾರದು ಎಂದು ಗ್ರಾಂಟ್ ಪತ್ರದಲ್ಲಿ ಇದೆ, 10 ವರ್ಷಕ್ಕೆ ಮುಂಚೆ ಕ್ರಯ ಆಗಿದೆ ಅದುದರಿಂದ ಸರ್ಕಾರದಲ್ಲಿ ಭೂಮಿ ವಿಹಿತವಾಗಿದೆ ಎಂದಿದ್ದಾರೆ. (3) ಹೈಕೋರ್ಟಿನ ಏಕ ಸದಸ್ಯ ಪೀಠದ ಮುಂದೆ ಅರ್ಜಿದಾರರು ಗ್ರಾಂಟೀ ವಾರಸ್ಸುದಾರರೇ ಎಂಬ ಅಂಶ ಚರ್ಚೆಯಾಗಿದೆ. (4). ಖರೀದಿದಾರರ ವಾದವು ನಮೂನೆ -1 ರಲ್ಲಿ ಗ್ರಾಂಟ್ ಆಗಿದೆ, ಗ್ರಾಂಟಿ ಡಿಪ್ರೆಸ್ಡ್ ಕ್ಲಾಸ್ ವರ್ಗದಲ್ಲಿ ಬರುವುದಿಲ್ಲ, ಕಾಯ್ದೆ ಜಾರಿಯಾದ ಮೆಲೆ 12 ವರ್ಷಕ್ಕೂ ಮೇಲ್ಪಟ್ಟು ವ್ಯತಿರಿಕ್ತ ಸ್ವಾಧೀನತೆ ಕ್ಲೇಮಿನ ವಾದ ಇರುತ್ತದೆ. ಹೈಕೋರ್ಟಿನಲ್ಲೂ ಇದೇ ವಾದ ಇರುತ್ತದೆ. (5). ಸುಪ್ರೀಮ್ ಕೋರ್ಟ್ ನಲ್ಲಿ ಗ್ರಾಂಟಿ ಪರ ವಕೀಲರು ಎರಡೂ ನಮೂನೆಗಳಲ್ಲಿ ಒಂದೇ ಪರಭಾರೆ ಅವಧಿ ಇದೆ ಎಂದು ವಾದಿಸಲಾಗಿರುತ್ತದೆ. (6). ಗುಂಟಯ್ಯ ಪ್ರಕರಣವನ್ನು ಸುಪ್ರೀಮ್ ಕೋರ್ಟ್ ತೀರ್ಪಿನಲ್ಲಿ ಉಲ್ಲೇಕಿಸಿದೆಯಾದರೂ ತೀರ್ಪಿನ ಬಾಗದಲ್ಲಿ ಹೈಕೋರ್ಟ್ ಪೀಠದ ತೀರ್ಮಾನವನ್ನು ಉಲ್ಲೇಕವಾಗಿದೆ. ಅದರ ಆಧಾರದಲ್ಲಿ ತೀರ್ಪು ನೀಡಿದೆ ಮಾನ್ಯ ಸುಪ್ರೀಮ್ ಕೋರ್ಟ್.

ಆದರೆ ಗುಂಟಯ್ಯ ಪ್ರಕರಣದಲ್ಲಿ ಗ್ರಾಂಟಿ ಮಾತ್ರ ಶರತ್ತನ್ನು ಪ್ರಶ್ನಿಸಬಹುದು ಖರೀದಿದಾರನಲ್ಲ ಎಂಬ ಅಂಶವು ಕೋರ್ಟ್ ಗಮನದಲ್ಲಿ ಇದೆಯೆಂದು ಓದುಗರಾದ ನಾವು ಬಾವಿಸಿದರೂ, ಆ ಕೇಸಿನಲ್ಲಿ ಉದಯವಾಗಿದ್ದ ಅಂಶಗಳಿಗೆ ಸಮರ್ಪಕ ಕಾರಣಗಳು ಇಲ್ಲದಿರುವುದು ಕಂಡು ಕೋರ್ಟ್ ವೆಬ್ ತಾಣದಲ್ಲೇ[1] ಪರಾಮರ್ಶಿಸಲಾಗಿ ಅಲ್ಲೂ ಹಾಗೆಯೆ ಇದೆ. ನಮಗೆ ಮೂಡುವ ಪ್ರಶ್ನೆ ಎ.ಸಿ ನ್ಯಾಯಾಲಯದಲ್ಲಿ ಎತ್ತಲಾದ ಗ್ರಾಂಟಿ ಎಸ್.ಸಿ/ ಎಸ್.ಟಿ ಗೆ ಸೇರಿಲ್ಲ ಎಂಬ ವಿಚಾರಕ್ಕೆ ಎಲ್ಲಾ ಹಂತದಲ್ಲಿ ಉತ್ತರವೇ ಇಲ್ಲ. ನಮೂನೆ ಉಪಯೋಗದ ಬಗ್ಗೆಯೂ ಯಾವುದೇ ಕಂಡುಹಿಡಿಯುವಿಕೆ ಮಾರ್ಗದರ್ಶನ ಇಲ್ಲ. ಇಂದಿನ ಸ್ಥಿತಿಯಲ್ಲಿ ಸಕಾರಣಬದ್ದ ಅವದಿಯಲ್ಲಿ ಹಾಕಲಾಗಿಲ್ಲ ಎಂಬ ಕಾರಣದಿ ವಜಾ ಆಗಬಹುದಿತ್ತು, ಆದರೇ ಅಂದಿನ ಸ್ಥಿತಿಗೇ ಇಂತಹ ಕಂಡುಕೊಳ್ಳುವಿಕೆ ಆದರೆ ಕಾಯ್ದೆ ಇರುವುದು ಎಸ್.ಸಿ/ ಎಸ್.ಟಿ ರಕ್ಷಣೆಗೋ ಅಥವ ಅವರ ಹೆಸರಲ್ಲಿ ಅನ್ಯ ಪ್ರಕರಣಗಳಲ್ಲಿ ವ್ಯಾಜ್ಯ ಸೃಷ್ಟಿಸಲೋ ಎಂಬ ಅನುಮಾನ ಮೂಡುತ್ತದೆ. ಕಾಯ್ದೆ ಉದ್ದೇಶ ಉನ್ನತ ಕಾರಣಕ್ಕೆ ಇರಬಹುದು ಅದರ ಬಳಕೆ ದುರುದ್ದೇಶಕ್ಕೆ ಆದರೆ ಯಾವುದೇ ಸಭ್ಯ ಸಮಾಜ ಹೆಚ್ಚು ದಿನ ಅದನ್ನು ಸಹಿಸದು ಎಂಬುದು ನನ್ನ ವೈಯುಕ್ತಿಕ ಅಭಿಪ್ರಾಯ. ನ್ಯಾಯಾಧೀಶರ ಬಗ್ಗೆ ಗೌರವ ಇರಬೇಕು ನಿಜ ಆದರೆ ಒಂದು ತೀರ್ಪಿನಲ್ಲಿ ಪ್ಯಾರ 8 ಅನ್ನು ಉಲ್ಲೇಕಿಸುತ್ತ, ಸುಪ್ರೀಮ್ ತೀರ್ಪು ಎನ್ನುತ್ತಾರೆ ಆದರೆ, ಆ ತೀರ್ಪಿನ ಪ್ಯಾರಾ 8, ತಳ್ಳಿಹಾಕಲಾದ ಹೈಕೋರ್ಟ್ ತೀರ್ಪಿನ ಅಂಶವಾಗಿರುತ್ತದೆ. ಟೈಪಿಂಗ್ ತಪ್ಪು ಆಗುತ್ತದೆ ನಿಜ ಆದರೆ ಇಡೀ ಪ್ಯಾರ ಕಾಪಿ ಪೇಸ್ಟ್ ಮಾಡಿದಂತೆ ಕಾಣುತ್ತದೆ. ಅಲ್ಲಿನ ಪೇಸ್ಟ್ ಮಾಡಿದ ಅಂಶಕ್ಕೂ ಪ್ರಶ್ನೆಯಲ್ಲಿದ್ದ ಕೇಸಿನ ವಿವಾದಕ್ಕೆ ಬೇಕಾದ ಕಾರಣಕ್ಕೂ ಸಂಬಂದವೇ ಇಲ್ಲ. ಇದೇ ನ್ಯಾಯಾಧೀಶರು ಇನ್ನೊಂದು ಪ್ರಕರಣದಲ್ಲಿ[2] ಒಂದು ವರ್ಷದ ಹಿಂದೆ ನೀಡಿರುವ ತೀರ್ಪಿನಲ್ಲಿ ಸದರಿ ಗುಂಟಯ್ಯ ತೀರ್ಪಿನ ಅಂಶವನ್ನು ಸದರಿ ಕೇಸಿನ ವೃತ್ತಾಂತಕ್ಕೆ ಸರಿಯಾಗಿ ಅನ್ವಯಿಸಿ ತೀರ್ಪು ನೀಡಿದ್ದಾರೆ. ಅದರಲ್ಲಿ

---

[1] https://sci.gov.in/jonew/judis/30073.pdf

[2] ಚಿಂದೇಗೌಡ ವಿ. ಪುಟ್ಟಮ್ಮ – 2007 (12) ಎಸ್.ಸಿ.ಸಿ 618

ಅರ್ಥಮಾಡಿಕೊಳ್ಳತಕ್ಕ ವಿವರಣಾ ತೀರ್ಪು ಇದೆ. ಅದು ಹೇಗೆ ಒಂದು ವರ್ಷದ ನಂತರ ಅದೇ ತೀರ್ಪಿನ ಬಾಗವನ್ನು ತಪ್ಪಾಗಿ ಉಲ್ಲೇಕಿಸಲು ಸಾಧ್ಯ. ಇದು ಯಾವ ವಿಧದಲ್ಲಿ ಒಪ್ಪಿಕೊಳ್ಳಲು ಸಾಧ್ಯ ಹೇಳಿ. ಇಲ್ಲಿ ಗ್ರಾಂಟ್ ದಾಖಲೆಯ ನಮೂನೆ ಬಗ್ಗೆ ಕಾನೂನು ರೀತ್ಯ ಅದನ್ನು ಯಾವ ರೀತಿಯಲ್ಲಿ ಪರಿಗಣಿಸಲಾಗುತ್ತೆ ಎಂಬ ವಿವರಣೆ ಎ.ಸಿ ಕೋರ್ಟ್ ಆದೇಶದಲ್ಲಿ ಇದೆ. ಈ ಅಂಶ ಫ್ಯಾಕ್ಟ್ (ವಾಸ್ತವಿಕತೆ) ಮಾತ್ರ ಆಗದು ಅದರಲ್ಲಿ ಕಾನೂನು ಅಂಶ ಇರುತ್ತದೆ. ಈ ಬಗ್ಗೆ ಏಕೆ ವ್ಯಾಖ್ಯನವಿಲ್ಲ ಎಂಬುದೇ ಮನಸ್ಸಿನಲ್ಲಿ ಕಾಡುವ ಪ್ರಶ್ನೆ.

ಇಂತಹ ತೀರ್ಪುಗಳು ಒಬ್ಬನ ಜೀವನವನ್ನು ನಿರ್ದರಿಸುವುದಿಲ್ಲ, ಗ್ರಾಮೀಣ ಭಾಗದಲ್ಲಿ ಜಮೀನಿನ ಬಗ್ಗೆ ಇಡೀ ಕುಟುಂಬ ಪ್ರಾಣವನ್ನೇ ಇಟ್ಟು ಕೊಂಡಿರುತ್ತಾರೆ. ಅಧಿಕಾರಿಗಳು ಸದರಿ ಜಮೀನಿನ ಪಹಣಿಯಲ್ಲಿ ಇದು ಎಸ್.ಸಿ /ಎಸ್.ಟಿ ರವರಿಗೆ ಗ್ರಾಂಟ್ ಮಾಡಿ ನೀಡಿರುವುದು ಎಂದು ಬರೆದು ಪರಭಾರೆಗೆ ನಿರ್ಬಂದ ಇದೆ ಎಂದು ಬರೆದರೆ ಯಾರೂ ಕೊಳ್ಳಲು ಹೋಗುವುದಿಲ್ಲ. ಅದನ್ನು ಮಾಡುವಂತಾ ಸಾಧ್ಯತೆ ಇದ್ದರೂ ಇಲ್ಲಿವರೆಗೆ ಯಾರೂ ತಲೆ ಕೆಡೆಸಿಕೊಂಡಿಲ್ಲ. ಈ ವ್ಯಾಜ್ಯಗಳ ವಿಷಯದಲ್ಲಿ ಬಹುದೊಡ್ಡ ಮಾಫಿಯಾ ಇಡೀ ರಾಜ್ಯದಲ್ಲಿ ನಡೆಯುತ್ತಿದೆ. ಅಂತಹ ಮಾಫಿಯಾಗೆ ಕೆಲಸವಿಲ್ಲದಂತೆ ಆಗುತ್ತದೆ ಎಂಬುದು ಸರ್ಕಾರದ ಅಥವ ಅಧಿಕಾರಿಗಳ ಚಿಂತನೆಯೇ. ಇಷ್ಟೆಲ್ಲಾ ಗೊಂದಲದ ನಡುವೆ ಮಾನ್ಯ ನ್ಯಾಯಮೂರ್ತಿಗಳೂ ಇಷ್ಟೊಂದು ನಿರ್ಲಕ್ಷ್ಯದಿ ತೀರ್ಪು ಬರೆಯುತ್ತಾರೆ ಎಂದರೆ, ಅದನ್ನು ಓದಿ ಅರ್ಥೈಸುವ ಯುವ ಕಾನೂನು ವಿಧ್ಯಾರ್ಥಿಗಳ ಪಾಡೇನು, ನ್ಯಾಯವೇ ಕೊನೆಯ ಅಸ್ತ್ರ ಎಂದು ಶರಣಾಗುವ ಅಮಾಯಕನ ಪಾಡೇನು, ನೋಡೋಣ ಇನ್ನಾದರೂ ನ್ಯಾಯಾಂಗ ವ್ಯವಸ್ಥೆಯಲ್ಲಿ ಸೂಕ್ತ ಮನ ಪರಿವರ್ತನೆ ಆಗುವುದೇ ಕಾದುನೋಡೋಣ.

ಆದರೆ ಈ ಬಗ್ಗೆ ಕಾನೂನು ವಿಚಾರವನ್ನು ನೋಡೋಣ.[1] 'ಭೋವಿ' (Bhovi) ಜನರನ್ನು 1950 ರಲ್ಲಿನ ಆದೇಶದಲ್ಲಿ ಮೈಸೂರು ಪ್ರಾಂತ್ಯದ

---

[1] ಲೇಖಕರ ವಿಮರ್ಶೆ

ಎಸ್.ಸಿ ಪಟ್ಟಿಯಲ್ಲಿ ಸೇರಿಸಲಾಗಿದೆ. ಹೈದಾರಾಬಾದ್ ಪ್ರಾಂತ್ಯದಲ್ಲಿ ಇವರ ಹೆಸರಿಲ್ಲ, ಮದ್ರಾಸ್ ಪ್ರಾಂತ್ಯದಲ್ಲಿ ಇವರ ಹೆಸರಿಲ್ಲ, ಬಾಂಬೆ ಪ್ರಾಂತ್ಯದಲ್ಲಿ ಇವರ ಹೆಸರಿಲ್ಲ, ಕೊಚ್ಚಿನ್ ಪ್ರಾಂತ್ಯದಲ್ಲಿ ಇವರ ಹೆಸರಿಲ್ಲ, ಕೂರ್ಗ್ ಪ್ರಾಂತ್ಯದಲ್ಲಿ ಇವರ ಹೆಸರಿಲ್ಲ 1956 ರ ಬದಲಾಯಿಸಿದ ಪಟ್ಟಿಯನ್ನು ನೋಡಿದರೆ ಮೈಸೂರು ಪ್ರಾಂತ್ಯದ ಎಲ್ಲಾ ಬಾಗದಲ್ಲಿ ಇರುವ ಭೋವಿಯನ್ನು ಪರಿಗಣಿಸಿ, ಕೂರ್ಗ್, ಬೆಳಗಾಮ್, ಬಿಜಾಪುರ, ದಾರವಾಡ, ಕೆನರಾ, ದಕ್ಷಿಣ ಕೆನರಾ, ಗುಲ್ಬರ್ಗ, ರಾಯಚೂರು ಮತ್ತು ಬೀದರ್ ಜಿಲ್ಲೆ ಮತ್ತು ಮೈಸೂರು ಜಿಲ್ಲೆಯ ಕೊಳ್ಳೆಗಾಲ ತಾಲೂಕಿನ ಭೋವಿಗಳನ್ನು ಹೊರತು ಪಡಿಸಿ ಎಂಬ ಕಾನೂನು 26-07-1977 ರವರೆಗೆ ಜಾರಿಯಲ್ಲಿ ಇದೆ. ಆ ನಂತರದಲ್ಲಿ ಇನ್ನೊಂದು ತಿದ್ದುಪಡಿ ಜಾರಿಯಾಗಿ ಪಾರ್ಲಿಮೆಂಟ್ ಮತ್ತು ಅಸೆಂಬ್ಲಿ ಕಾನ್ಸಿಟ್ಯುಯೆನ್ಸಿ ನಿರ್ದರಿಸಿ ಅದರಲ್ಲಿ ಸೂಕ್ತ ಪ್ರಾತಿನಿದ್ಯ ದೊರಕಿಸಿಕೊಡಲು 1971 ರ ಸೆನ್ಸಸ್ ಆದಾರದಲ್ಲಿ ಕಾನ್ಸಿಟ್ಯೂಯೆನ್ಸಿಯಲ್ಲಿನ ಜಾತಿ ಪಂಗಡಗಳನ್ನು ಗುರುತಿಸಿ ಪ್ರಾಂತ್ಯಾವರು ಇರುವ ವ್ಯತ್ಯಾಸಗಳನ್ನು ಗಮನಕ್ಕೆ ತೆಗೆದುಕೊಂಡು ಸದರಿ ಜಾತಿಗಳನ್ನು ನಮೂದಿಸಲು ಆಯೋಜಿಸಿ ತಿದ್ದುಪಡಿ ಮಾಡಲಾಗಿತ್ತು. ಇಲ್ಲಿಯೂ ಭೋವಿ ಜನಾಂಗವನ್ನು 23 ನೇ ನಂಬರ್ ನಮೂದಿನಲ್ಲಿ ಸೇರಿಸಲಾಗಿದೆ. ಅಲ್ಲಿಗೆ 1971 ಸೆನ್ಸೆಸ್ ಆಧಾರದಲ್ಲಿ ಪ್ರಾಂತ್ಯಾವಾರು ಇದ್ದ ಭೋವಿ ಜನರನ್ನು ಮಾತ್ರ ಭೋವಿ ಎಂದು ಪರಿಗಣಿಸಲು ಈ ತಿದ್ದುಪಡಿ ಕಾಯ್ದೆ ಅರ್ಥೈಸುತ್ತದೆ. 2002 ರಲ್ಲಿ ತಿದ್ದುಪಡಿ ಮಾಡಿ ಭೋವಿ ಜೊತೆಯಲ್ಲಿ ಓಡ್, ಓಡ್ಡೆ, ವಡ್ಡಾರ್, ವಾಡ್ಡಾರ್, ವೊಡ್ಡಾರ್, ವೋಡ್ಡಾರ್ ಸೇರಿಸಲಾಗುತ್ತದೆ. ಈ ನಮೂದನ್ನು 20-03-2015 ರಲ್ಲಿ ತಿದ್ದುಪಡಿ ಮಾಡಿ, ತಿದ್ದು ಪಡಿಯ ಉದ್ದೇಶವನ್ನು ಮತ್ತು ಕಾರಣಗಳನ್ನು ಹೀಗೆ ಉಲ್ಲೇಕಿಸಲಾಗಿದೆ, "ಹರಿಯಾಣ, ಕರ್ನಾಟಕ ಮತ್ತು ಒಡಿಶಾದ ರಾಜ್ಯ ಸರ್ಕಾರಗಳು ಮತ್ತು ಕೇಂದ್ರ ಪ್ರದೇಶವಾದ ದಾದ್ರಾ ಮತ್ತು ನಗರ ಹವೇಲಿಯು, ಪರಿಶಿಷ್ಟ ಜಾತಿಗಳ ಪಟ್ಟಿಯಲ್ಲಿ ಕೆಲವು ಸಮುದಾಯಗಳನ್ನು ಸೇರಿಸುವ ಮೂಲಕ ಕೆಲವು ಮಾರ್ಪಾಡುಗಳಿಗಾಗಿ ಪ್ರಸ್ತಾಪಿಸಿದೆ. ಭಾರತದ ರಿಜಿಸ್ಟ್ರಾರ್ ಜನರಲ್ ಮತ್ತು ಪರಿಶಿಷ್ಟ ಜಾತಿಗಳ ರಾಷ್ಟ್ರೀಯ ಆಯೋಗವು ಪ್ರಸ್ತಾವಿತ ಮಾರ್ಪಾಡುಗಳಿಗೆ ತಮ್ಮ ಸಮ್ಮತಿಯನ್ನು

ತಿಳಿಸಿದೆ. ..... ಮೇಲಿನ ಮಾರ್ಪಾಡುಗಳನ್ನು ಜಾರಿಗೆ ತರಲು, ಈ ಕೆಳಗಿನ ಎರಡು ಸಂವಿಧಾನ (ಪರಿಶಿಷ್ಟ ಜಾತಿ) ಆದೇಶಗಳನ್ನು ತಿದ್ದುಪಡಿ ಮಾಡುವುದು ಅವಶ್ಯಕ...." ಎಂದು 'ಭೋವಿ, ಓಡ್, ಓಡ್ಡೆ, ವಡ್ಡಾರ್, ವಾಡ್ಡಾರ್, ವೊಡ್ಡಾರ್, ವೋಡ್ಡಾರ್' ಪದಗಳನ್ನು ತೆಗೆದು "ಭೋವಿ, (Bhovi), ಓಡ್, ಓಡ್ಡೆ, ವಡ್ಡಾರ್, ವಾಡ್ಡಾರ್, ವೊಡ್ಡಾರ್, ವೋಡ್ಡಾರ್, ಬೋವಿ (ಬೆಸ್ತಾ ಅಲ್ಲದವರು), (Bovi (non-besta)) ಕಲ್ಲುವಡ್ಡಾರ್, ಮಣ್ಣುವಡ್ಡಾರ್" ಎಂಬ ಜಾತಿಗಳನ್ನು ಸೇರಿಸಲಾಗಿದೆ. ಇಲ್ಲಿ ಭೋವಿ ಜಾತಿಗೆ ಪರ್ಯಾಯ ಜಾತಿ ಎಂದು ಸೇರಿಸಲಾಗಿಲ್ಲ, ಕೆಲವು ಸಮುದಾಯಗಳನ್ನು ಸೇರಿಸುವ ಮೂಲಕ ಎಂದಿದೆ, ಇಲ್ಲಿ ಸಮುದಾಯಗಳು ಹೊಸದಾಗಿ ಸೇರ್ಪಡೆಯಾದಂತೆ ತೋರುತ್ತಿದೆ. ತಿದ್ದುಪಡಿಯಲ್ಲಿ ಯಾವ ತಾರೀಖಿನಿಂದ ಇದನ್ನು ಜಾರಿಗೆ ತರಲಾಗಿದೆ ಎಂಬ ಉಲ್ಲೇಕ ಇಲ್ಲ.

ಕರ್ನಾಟಕ ಸರ್ಕಾರದ 11-04-2002 ರ ಗೆಜೆಟ್ ಪ್ರಕಟಣೆಯಲ್ಲಿ ಭಾಗ-1, ಪುಟ 1019, ಸರ್ಕಾರಿ ಆದೇಶ ನಂ. (ಜಿ.ಓ.ನಂ.) ಎಸ್.ಡಬ್ಲ್ಯು.ಡಿ 225 ಬಿ.ಸಿ.ಎ 2000 ದಿನಾಂಕ 30 ಮಾರ್ಚ್ 2002, ಇಂದಿಗೂ ಇದೇ ಜಾರಿಯಲ್ಲಿದೆ ಎಂದು ತೋರಿಸುವ ಕರ್ನಾಟಕ ಸರ್ಕಾರದ ಹಿಂದುಳಿದವರ್ಗಗಳ ಇಲಾಖೆಯ ವೆಬ್ ತಾಣದಲ್ಲಿ ಲಭ್ಯವಿದ್ದು[1] ಇದರಲ್ಲಿ ಬೋವಿ (Bovi) ಜನಾಂಗವನ್ನು ಹಿಂದುಳಿದ (ಓ.ಬಿ.ಸಿ) ವರ್ಗಗಳ ಪಟ್ಟಿಯಲ್ಲಿ ಸೇರ್ಪಡೆ ಮಾಡಿದ್ದು, ಈಗಲೂ ಹಾಗೆ ಇದೆ. ಅಂದರೆ ಎಲ್ಲಾ ಬೋವಿ ಜನಾಂಗವನ್ನು ಎಸ್.ಸಿ ಪಟ್ಟಿಯಲ್ಲಿ ಸೇರಿಸಲಾಗಿಲ್ಲ.

ಭಾರತ ಸರ್ಕಾರದ ಗೆಜೆಟ್ ಪ್ರಕಟಣೆಯ, ಓ.ಬಿ.ಸಿ ಲಿಸ್ಟ್ ನಲ್ಲಿ ದಿನಾಂಕ 16-06-2011 ರಲ್ಲಿ ಎಂಟ್ರಿ ನಂಬರ್ 87 ರಲ್ಲಿ ಮೊದಲಬಾರಿಗೆ ಬೋವಿ (Bovi) ಜನಾಂಗವನ್ನು ಹಿಂದುಳಿದ (ಓ.ಬಿ.ಸಿ) ವರ್ಗಗಳ ಪಟ್ಟಿಯಲ್ಲಿ ಸೇರ್ಪಡೆ ಮಾಡಿದ್ದು, ಈ ಪಟ್ಟಿಯು ನ್ಯಾಷನಲ್ ಕಮೀಷನ್ ಫಾರ್ ಬ್ಯಾಕ್ವರ್ಡ್ ಕ್ಲಾಸಸ್ ಆಕ್ಟ್ 1993 ರಂತೆ ತಯಾರಿಸಲಾಗಿದೆ. ಇದು ಕೇಂದ್ರ ಸರ್ಕಾರದ

---

[1]http://www.backwardclasses.kar.nic.in/BCWDStaffGO.aspx?Name=direction-GO

ವೆಬ್ ತಾಣದಲ್ಲಿ ಲಭ್ಯವಿದೆ.[1] ದಿನಾಂಕ 27-05-2015 ಭಾರತ ಸರ್ಕಾರದ ಗೆಜೆಟ್ ಪ್ರಕಟಣೆಯಲ್ಲಿ ಬೋವಿ (ಬೆಸ್ತಾ ಅಲ್ಲದವರು), (Bovi (non-besta)) ಹೊರತುಪಡಿಸಿ ಬೋವಿ ಜನಾಂಗ ಓ.ಬಿ.ಸಿ ಲಿಸ್ಟ್ ನಲ್ಲಿ ಮುಂದುವರಿಸಲಾಗಿದೆ. ಇಲ್ಲಿ ಕಲ್ಲುವಡ್ಡಾರ್, ಮಣ್ಣುವಡ್ಡಾರ್" ಎಂಬ ಜಾತಿಗಳನ್ನು 2011 ರಲ್ಲಿ ಮೊದಲ ಭಾರಿಗೆ ಹಿಂದುಳಿದ (ಓ.ಬಿ.ಸಿ) ವರ್ಗಗಳ ಪಟ್ಟಿಯಲ್ಲಿ ಸೇರ್ಪಡೆ ಮಾಡಿದ್ದು, 2015 ರಿಂದ ಇವರನ್ನು ಎಸ್.ಸಿ ಪಟ್ಟಿಯಲ್ಲಿ ಸೇರ್ಪಡೆ ಮಾಡಿದ್ದು, ನಂತರ ಯಾವುದೇ ಆದೇಶವಿಲ್ಲ.

ಅನುಭಂದ-34 ರಲ್ಲಿ ಕರ್ನಾಟಕ ಸರ್ಕಾರದ ಸರ್ಕ್ಯುಲರ್ ಸ್ಪಷ್ಟವಾಗಿ 1971 ರ ಸೆನ್ಸಸ್ ಅನುಸರಿಸಿ ಜಾತಿ ಪತ್ರ ನೀಡಲು ಜಾಗ್ರತೆ ವಹಿಸುವಂತೆ 1956 ಮತ್ತು 1977 ರ ಲಿಸ್ಟ್ ಪರಿಶೀಲಿಸುವಂತೆ ತಿಳಿಸುತ್ತದೆ. ತಪ್ಪು ವ್ಯಾಖ್ಯಾನದಿಂದ 1956 ರ ಪ್ರಾಂತ್ಯಾವಾರು ಲಿಸ್ಟ್ ಮತ್ತು 1971 ರ ಸೆನ್ಸೆಸ್ ಮರೆತು ಜಾತಿ ಮತ್ತು ಪಂಗಡ ಪರಿಗಣಿಸುತ್ತಿರುವುದು ಬಹುದೊಡ್ಡ ಸಂವಿಧಾನಿಕ ಮೋಸ ಪ್ರಕ್ರಿಯೆಗಳಾಗಿವೆ.

ಇಂತಹ ವಿಚಾರದ ಪ್ರಕರಣವೊಂದು ಎಲೆಕ್ಷನ್ ವಿಚಾರವಾಗಿ 2018 ರಲ್ಲಿ ಕರ್ನಾಟಕ ಹೈಕೋರ್ಟಿನಲ್ಲಿ (ಬೆಂಗಳೂರು) ಚುನಾವಣಾ ಅರ್ಜಿ 4/2013, ತೀರ್ಪೊಂದು ಆಗಿದೆ.[2] ಇದರಲ್ಲಿ ಕೋಲಾರದ ವ್ಯಕ್ತಿಯೊಬ್ಬ ಬೇಡ (ಬುಡಗ) ಜಂಗಮ – ಪರಿಶಿಷ್ಟ ಜಾತಿ ಪ್ರಮಾಣಪತ್ರ ಪಡೆದು ಚುನಾವಣೆಗೆ ನಿಂತಿರುತ್ತಾರೆ. ಈ ಅರ್ಜಿಯನ್ನು ಸಲ್ಲಿಸಿದವರ ವಾದ ಬೇಡ (ಬುಡಗ) ಜಂಗಮ ಜಾತಿ 1956 (ಮಾಡಿಫಿಕೇಷನ್) ಆದೇಶ 1956 ರಲ್ಲಿ ಸೇರಿಸಲಾಗಿದೆ. ಇದು ಗುಲ್ಬರ್ಗ, ಬೀದರ್ ಮತ್ತು ರಾಯಚೂರ್ ಜಿಲ್ಲೆ ವ್ಯಾಪ್ತಿಗೆ ಮಾತ್ರ ಸೀಮಿತ ಜಾತಿಯಾಗಿರುತ್ತದೆ. ಕೋಲಾರಕ್ಕೆ ಅಲ್ಲ ಎಂಬ ವಾದದೊಂದಿಗೆ ಇದಕ್ಕೆ ಪೂರಕ ಸಾಕ್ಷಿ ದಾಖಲೆ ಹಾಜರುಪಡಿಸಲಾಗುತ್ತದೆ. ಆ ವ್ಯಕ್ತಿ ಬೈರಾಗಿ

---

[1] http://www.ncbc.nic.in/User-Panel/CentralListStateView.aspx

[2] ಮುನಿಆಂಜನಪ್ಪ ವಿ. ಮಂಜುನಾಥ- ಮನು/ಕೆ.ಎ/1571/2018

ಜಾತಿಗೆ ಸೇರಿದ್ದು ಅದು ಓ.ಬಿ.ಸಿ ಪಟ್ಟಿಯಲ್ಲಿ ಬರುತ್ತದೆ ಎಂಬುವ ಮೋಸದ ವಿಚಾರವನ್ನು ತೆರೆದಿಡುತ್ತಾರೆ.

ಇಂತಹ ವಿಚಾರದ ಪ್ರಕರಣವೊಂದು ಕರ್ನಾಟಕ ಹೈಕೋರ್ಟಿನ (ಬೆಂಗಳೂರು) ದ್ವಿಸದಸ್ಯ ಪೀಠದ ಮುಂದೆ (ರಿಟ್ ಅಪೀಲು ನಂ 2340-2341/2008) ಬಂದಂತಾ ಪ್ರಕರಣದಲ್ಲಿ,[1] ದಕ್ಷಿಣ ಕನ್ನಡದ ಗ್ರಾಂಟಿ ಹೆಸರು ಬಾಲು ನಾಯ್ಕ ಬಿನ್ ಕೊರಗು ನಾಯ್ಕ ಎಂದು ಇದ್ದು 1950 ರ ಅಧಿಸೂಚನೆಯಂತೆ ಮಡ್ರಾಸ್ ಪ್ರಾಂತ್ಯದ ನಮೂದು ನಂ. 37 ರಲ್ಲಿರುವ 'ಕೊರಗ' ಜಾತಿಗೆ ಸಮಾನಾಂತರವಾಗಿದೆ, 1950 ರಲ್ಲೇ ಮೈಸೂರು ಪ್ರಾಂತ್ಯಕ್ಕೆ ಕೊರಚ ಮತ್ತು ಕೊರಮ ಎಸ್.ಸಿ ಪಟ್ಟಿಯಲ್ಲಿದೆ ನಾಯ್ಕ ಪಂಗಡವನ್ನು ಎಸ್.ಟಿ ಪಟ್ಟಿಯಲ್ಲಿ 1991 ರಲ್ಲಿ ಸೇರಿಸಲಾಗಿದೆ, 1978 ರಲ್ಲಿ ಕ್ರಯ ಆಗಿದೆ ಎಂಬ ವಾದ ಸರಿಯಲ್ಲ, ಗ್ರಾಂಟಿ 1950 ರಲ್ಲೇ ಎಸ್.ಟಿ ಆಗಿದ್ದರು ಎಂದು ವ್ಯಾಖ್ಯಾನಿಸುತ್ತ, ಗ್ರಾಂಟಿ ಪರವಾಗಿ ತೀರ್ಪು ಆಗಿದೆ. – <u>ಆದರೆ ಇಲ್ಲಿ ಹೆಸರಿನ ಆಧಾರದಲ್ಲಿ ಜಾತಿಯನ್ನು ಹುಡುಕಿರುವುದು ಸಮಂಜಸವೇ.? ಕೊರಗು ಎಂಬುದು ಕೊರಗ ಎಂಬ ಹೆಸರಿನ ಸಮಾನಾಂತರ ಪದ ಎಂದು ನ್ಯಾಯಾಲಯಕ್ಕೆ ಆದೇಶ ನೀಡುವ ಹಕ್ಕು ಇದೆಯೇ.? 1950 ರ ಎಸ್.ಟಿ. ಪಟ್ಟಿಯಲ್ಲಿ ಮಡ್ರಾಸ್ ಪ್ರಾಂತ್ಯದಲ್ಲಿ ನಾಯ್ಕ ಜನಾಂಗ ಇರುವುದಿಲ್ಲ. ಬಾಂಬೆ ಪ್ರಾಂತ್ಯದ ನಾಯ್ಕಡ ಅಥವ ನಾಯಕ ಜನರನ್ನು ಗುರುತಿಸಲಾಗಿದೆ, ಮೈಸೂರು ಪ್ರಾಂತ್ಯದಲ್ಲಿ ನಾಯಕ/ನಾಯ್ಕ ಜನರನ್ನು ಗುರುತಿಸಿಲ್ಲ, ಕೂರ್ಗ್ ಪ್ರಾಂತ್ಯದಲ್ಲಿ ನಾಯಕ/ನಾಯ್ಕ/ಕೊರಗ ಜನರನ್ನ ಗುರುತಿಸಿಲ್ಲ. 1950 ರ ಎಸ್.ಸಿ ಪಟ್ಟಿಯಲ್ಲಿ ಮೇಲೆ ಹೇಳಿದಂತೆ ಕೊರಗ (ಮಡ್ರಾಸ್ ಪ್ರಾಂತ್ಯ) ಕೊರಚ, ಕೊರಮ (ಮೈಸೂರು ಪ್ರಾಂತ್ಯ), ಕೊಲ್ಚ, ಕೊಲ್ಗಾ (ಬಾಂಬೆ ಪ್ರಾಂತ್ಯ) ಇದೆ.[2] 1956 ರ ಎಸ್.ಟಿ ಪಟ್ಟಿಯಲ್ಲಿ ದಕ್ಷಿಣ ಕನ್ನಡದ ಪ್ರಾಂತ್ಯದಲ್ಲಿ ಕೊರಗ ಎಂಬ ಜಾತಿಯನ್ನು ಗುರುತಿಸಲಾಗಿದೆ. ನಾಯ್ಕ/ನಾಯಕ ಎಂಬ ಹೆಸರಿನ ಜಾತಿ ಇಲ್ಲ. ಇದು ಬೆಳಗಾಮ್, ಬಿಜಾಪುರ, ದಾರವಾರ ಮತ್ತು ಕನರಾ ಜಿಲ್ಲೆಗೆ</u>

---

[1] ಕುಸುಮಾವತಿ ವಿ. ಜಿಲ್ಲಾಧಿಕಾರಿಗಳು – ಮನು/ ಕೆ.ಎ/ 0960/2012 (ಡಿ.ಬಿ)

[2] 1950 ರ ಗೆಜೆಟ್ ಪ್ರತಿ ಅನುಭಂದ – 22 ನೋಡುವುದು.

ಸೀಮಿತವಾಗಿ ನಾಯ್ಕಡಾ ಅಥವ ನಾಯಕ ಇದರಲ್ಲಿ ಚೊಲಿವಲ ನಾಯಕ, ಕಪಾಡಿಯಾ ನಾಯಕ, ಮೋಟ ನಾಯಕ ಮತ್ತು ನಾನ ನಾಯಕ ಒಳಗೊಂಡಿದೆ ಎಂದು ನಮೂದು 13 ರಲ್ಲಿ ಹೇಳಲಾಗಿದೆ.[1] ಇಂತಹ ಕಾನೂನು ಅಂಶ ಮುಂದಾದರೂ ವಿಮರ್ಶೆಗೆ ಬರಲಿ.

ಇನ್ನೊಂದು ಕಡೆ 19-04-1991 ರಿಂದ ಜಾರಿಗೆ ಬರುವಂತೆ ಪರಿಶಿಷ್ಟ ಪಂಗಡದ ಪಟ್ಟಿಯನ್ನು ತಿದ್ದುಪಡಿ ಮಾಡಲಾಗಿದೆ, ಈ ಹಿಂದೆಯೇ ನಾಯಕ ಎಂಬ ಸಮುದಾಯ ಇದ್ದರೂ 'ನಾಯ್ಕ್',(Naik) 'ನಾಯಕ್',(Nayak) 'ಬೇಡ',(Beda) 'ಬೇಡರ್',(Bedar) ಮತ್ತು 'ವಾಲ್ಮೀಕಿ'(Valmiki) ಎಂಬ ಸಮುದಾಯಗಳನ್ನು ಪ್ರತ್ಯೇಕವಾಗಿ ಸೇರಿಸಲಾಗಿದೆ. ಈ ತಿದ್ದುಪಡಿಯ ಉದ್ದೇಶ ಮತ್ತು ಕಾರಣಗಳನ್ನು ಹೀಗೆ ಕೊಡಲಾಗಿದೆ, "ಕರ್ನಾಟಕ ರಾಜ್ಯದ ನಾಯ್ಕ್, ನಾಯಕ್, ಬೇಡ, ಬೇಡರ್ ಮತ್ತು ವಾಲ್ಮೀಕಿಯ ಬುಡಕಟ್ಟು ಸಮುದಾಯಗಳನ್ನು ಆ ರಾಜ್ಯದ ಪರಿಶಿಷ್ಟ ಪಂಗಡಗಳ ಪಟ್ಟಿಯಲ್ಲಿ ಸೇರಿಸಲಾಗಿಲ್ಲ ಮತ್ತು ಅದರ ಪ್ರಕಾರ ಈ ಬುಡಕಟ್ಟು ಸಮುದಾಯಗಳು ಪರಿಶಿಷ್ಟ ಪಂಗಡಗಳಿಗೆ ಒದಗಿಸಲಾದ ವಿವಿಧ ಸುರಕ್ಷತೆಗಳ ಪ್ರಯೋಜನಗಳನ್ನು ಸಂವಿಧಾನದಲ್ಲಿ ಪಡೆಯಲಾಗಿಲ್ಲ. ಇದಕ್ಕೆ ಸಂಬಂಧಿಸಿದಂತೆ ಈ ಸಮುದಾಯಗಳನ್ನು ಪರಿಶಿಷ್ಟ ಪಂಗಡಗಳ ಪಟ್ಟಿಯಲ್ಲಿ ಸೇರಿಸಲು ಕರ್ನಾಟಕ ರಾಜ್ಯ ಸರ್ಕಾರ ಶಿಫಾರಸು ಮಾಡಿತ್ತು. ಈ ಸಮುದಾಯಗಳನ್ನು ಆ ರಾಜ್ಯದ ಪರಿಶಿಷ್ಟ ಪಂಗಡಗಳ ಪಟ್ಟಿಗೆ ಸೇರಿಸಲು ನಿರಂತರ ಬೇಡಿಕೆ ಇತ್ತು. 1991 ರ ಏಪ್ರಿಲ್ 19 ರಂದು ಘೋಷಿಸಲ್ಪಟ್ಟ ಸಂವಿಧಾನ (ಪರಿಶಿಷ್ಟ ಪಂಗಡ) ಆದೇಶಗಳು (ತಿದ್ದುಪಡಿ) ಸುಗ್ರೀವಾಜ್ಞೆ, 1991 ಆ ಬುಡಕಟ್ಟು ಜನಾಂಗವನ್ನು ಸೇರಿಸಲಾಗಿದ್ದರಿಂದ, ಈ ಶಾಸನವನ್ನು ಆ ದಿನಾಂಕದಿಂದ ಜಾರಿಗೆ ತರಲು ಪ್ರಸ್ತಾಪಿಸಲಾಗಿದೆ." – ಈ ಮೇಲೆ ಹೇಳಲಾದ ಎಸ್.ಟಿ ಸಮುದಾಯಗಳನ್ನು ಸೇರಿಸಲಾಗಿದೆ ಎಂದು ಹೇಳಿದ್ದಾರೆ ಹೊರತು

[1] 1956 ರ ಗೆಜೆಟ್ ಪ್ರತಿ ಅನುಭಂದ -23 ನೋಡುವುದು

ಈಗಾಗಲೇ ಇರುವ ಸಮುದಾಯಗಳ ಪರ್ಯಾಯ ಜಾತಿಗಳಾಗಿವೆ ಎಂದು ಹೇಳಿರುವುದಿಲ್ಲ.

ಈ ಸೇರ್ಪಡೆಯು 1950 ರಿಂದ ಸೇರಿಸಲಾಗಿದೆ ಎಂದು ಬಾವಿಸಬೇಕೋ, ಕಾಯ್ದೆ ತಿದ್ದುಪಡಿ ತಾರೀಖಿನಿಂದ ಸೇರಿಸಲಾಗಿದೆ ಎಂದು ಬಾವಿಸಬೇಕೋ ಎಂಬ ಬಗ್ಗೆ ನ್ಯಾಯಾಲಯದ ವ್ಯಾಖ್ಯಾನಗಳನ್ನು ಗಮನಿಸಿ,

(1). ಅಧಿಸೂಚಿತ ಪರಿಶಿಷ್ಟ ಜಾತಿ ಅಥವಾ ಪರಿಶಿಷ್ಟ ಪಂಗಡಗಳ ಪಟ್ಟಿಯಲ್ಲಿ ಉಲ್ಲೇಖಿಸಲಾದ ಜಾತಿ ಅಥವಾ ಬುಡಕಟ್ಟು ಜನಾಂಗದ ಬಗ್ಗೆ, ಈ ನ್ಯಾಯಾಲಯವು, ಸಂಸತ್ತಿನ ಉದ್ದೇಶವನ್ನು ರದ್ದುಗೊಳಿಸುವ ಪರಿಣಾಮವನ್ನು ಹೊಂದಿರುವ, ಅಂತಹ ವ್ಯಾಖ್ಯಾನವನ್ನು ನೀಡಲು ಸಾಧ್ಯವಿಲ್ಲ. ಪ್ರಸ್ತುತ ಪ್ರಕರಣದಲ್ಲಿ, ಈ ಹಿಂದೆ ರಾಷ್ಟ್ರಪತಿ ಮತ್ತು ನಂತರದ ಸಂಸತ್ತು 'ಕುಲಿಸ್' ರನ್ನು ಪರಿಶಿಷ್ಟ ಪಂಗಡದ ಪಟ್ಟಿಯಲ್ಲಿ ಸೇರಿಸಿಕೊಂಡಿತ್ತು. ರಾಜ್ಯದಲ್ಲಿ ಕುಲಿಸ್ ಎಂಬ ಹೆಸರಿನ ಯಾವುದೇ ಸಮುದಾಯವಿಲ್ಲ ಎಂದು ಕಂಡುಬಂದಿದೆ. 'ಕುಲ' ಮಾತ್ರ ಸಮುದಾಯವಾಗಿತ್ತು. ಈ ನ್ಯಾಯಾಲಯವು ಕುಲಿಸ್ ನಲ್ಲಿ ಕುಲಿ ಯನ್ನು ಸೇರಿಸದಿದ್ದರೆ, ನಿವ್ವಳ ಫಲಿತಾಂಶವೆಂದರೆ ನಾವು ಪರಿಶಿಷ್ಟ ಪಂಗಡದ ಪಟ್ಟಿಯಿಂದ ಒಂದು ಬುಡಕಟ್ಟು ಜನಾಂಗವನ್ನು ಅಳಿಸುತ್ತಿದ್ದೇವೆ. ಇದು ಯಾವುದೇ ನ್ಯಾಯಾಲಯ ಅಥವಾ ನ್ಯಾಯಮಂಡಳಿ ಮಾಡುವಹಾಗಿಲ್ಲ. ಈ ನ್ಯಾಯಾಲಯವು ಪಟ್ಟಿಯಲ್ಲಿನ ನಮೂದುಗಳನ್ನು ಸಂಸತ್ತಿನ ಆಶಯಕ್ಕೆ ಅನುಗುಣವಾಗಿ ಓದಬೇಕಾಗಿರುತ್ತದೆ. ಹಿಂದಿನ ರಾಷ್ಟ್ರಪತಿ ಮತ್ತು ನಂತರದ ಸಂಸತ್ತು ಕುಲಿಸ್ ಎಂಬ ಪದವನ್ನು ಬಳಸುವಾಗ ಮಾತ್ರ ಇದನ್ನು ಕುಲಿ ಪದಕ್ಕೆ ಬಹುವಚನವಾಗಿ ಬಳಸಬೇಕೆಂದು ಉದ್ದೇಶಿಸಿತ್ತು. ಕುಲಿಸ್ ಬುಡಕಟ್ಟು ಜನಾಂಗಕ್ಕೆ ಸೇರಿದವರ ಲಾಭವನ್ನು ಯಾರೂ ಪಡೆಯಲು ಸಾಧ್ಯವಿಲ್ಲ ಎಂದು ಬೇರೆ ಯಾವುದೇ ವ್ಯಾಖ್ಯಾನವು ಅರ್ಥೈಸುತ್ತದೆ. ... ಆದ್ದರಿಂದ ಕುಲಿ ಪದದಲ್ಲಿ ಕುಲಿಸ್ ಒಳಗೊಂಡಿದೆ."[1]

[1] ಒರಿಸ್ಸಾರಾಜ್ಯ ವಿ. ದಾಸರತಿ – ಎ.ಐ.ಆರ್ 2018 ಎಸ್.ಸಿ 4998

(2). ಪ್ರತಿ ಶಾಸನ ಅಥವಾ ಶಾಸನಬದ್ಧ ನಿಯಮವು ಸ್ಪಷ್ಟವಾಗಿ ಅಥವಾ ಅಗತ್ಯ ಪರಿಣಾಮಗಳ ಮೂಲಕ ಹಿಂದಿನಿಂದ ಜಾರಿ (ರಿಟ್ರಾಸ್ಪೆಕ್ಟೀವ್) ಪರಿಣಾಮವನ್ನು ಬೀರದ ಹೊರತು ಅದು ಬರಲಿರುವ ವೇಳೆಯಿಂದ (ಪ್ರಾಸ್ಪೆಕ್ಟೀವ್) ಜಾರಿಯಾಗಲಿದೆ. ಹೊಸ ಅಂಗವೈಕಲ್ಯಗಳು ಅಥವಾ ಕಟ್ಟುಪಾಡುಗಳನ್ನು ಸೃಷ್ಟಿಸಲು ಅಥವಾ ತಿದ್ದುಪಡಿ ಕಾಯ್ದೆ ಜಾರಿಗೆ ಬಂದ ಸಮಯದಲ್ಲಿ ಪೂರ್ಣಗೊಂಡ ವಹಿವಾಟುಗಳಿಗೆ ಸಂಬಂಧಿಸಿದಂತೆ ಹೊಸ ಕರ್ತವ್ಯಗಳನ್ನು ವಿಧಿಸಲು ಶಾಸನಗಳನ್ನು ರೂಪಿಸಬಾರದು ಎಂಬ ತತ್ವವನ್ನು ಸಹ ಚೆನ್ನಾಗಿ ಇತ್ಯರ್ಥಪಡಿಸಲಾಗಿದೆ. ಶಾಸಕಾಂಗವು ಅಸ್ತಿತ್ವದಲ್ಲಿರುವ ನಿಬಂಧನೆಯನ್ನು ಶಾಸನವೊಂದರಲ್ಲಿ ಪರ್ಯಾಯವಾಗಿ ತಿದ್ದುಪಡಿ ಮಾಡಿದಾಗ, ಇದರ ಪರಿಣಾಮವೆಂದರೆ ಬದಲಿ ನಿಬಂಧನೆಯನ್ನು ರದ್ದುಪಡಿಸಲಾಗುತ್ತದೆ ಮತ್ತು ತಿದ್ದುಪಡಿ ಮಾಡಿದ ನಿಬಂಧನೆಯನ್ನು ಹಿಂದಿನ ಕಾಯ್ದೆಯ ಹಿಂದಿನ ನಿಬಂಧನೆಯ ಸ್ಥಳದಲ್ಲಿ ಬದಲಿಸಲಾಗುತ್ತದೆ, ಬದಲಿ ನಿಬಂಧನೆಯು ಮೊದಲಿನಂತೆ ಇದ್ದಂತೆ ಪ್ರಾರಂಭದಿಂದಲೂ ಕಾರ್ಯನಿರ್ವಹಿಸಿದಂತೆ ಇರುತ್ತದೆ. ಕರಾರುವಕ್ಕಾದ ನಿಬಂಧನೆಯ ಮೂಲಕ ಅಥವಾ ಅದು ಪ್ರಕೃತಿಯಲ್ಲಿ ಭವಿಷ್ಯದಿಂದ ಪ್ರಾರಂಬವಾಗಿದೆ (ಪ್ರಾಸ್ಪೆಕ್ಟೀವ್) ಎಂದು ಸ್ಪಷ್ಟಪಡಿಸದಿದ್ದರೆ ಸೂಚಿಸಿದ ತಿದ್ದುಪಡಿ ಮಾಡಿದ ನಿಬಂಧನೆಯು ಹಿಂದಿನ ಕಾಯ್ದೆಯ ದಿನಾಂಕದಿಂದ ಜಾರಿಗೆ ಬರುತ್ತದೆ. ಆದರೆ ಇದು ಬದಲಾಗದ ನಿಯಮವಲ್ಲ. ಅಂತಹ ವ್ಯಾಖ್ಯಾನವನ್ನು ನೀಡಿದರೆ, ಅದು ಅಸಹ್ಯ, ಸಾಮರಸ್ಯವಿಲ್ಲದಿರುವಿಕೆ ಅಥವಾ ಅಸಂಬದ್ಧತೆಗೆ ಕಾರಣವಾದರೆ, ಹೇಳಿದ ಸಾಮಾನ್ಯ ನಿಯಮವನ್ನು ಅನುಸರಿಸಲಾಗುವುದಿಲ್ಲ. ಕೆಲವು ಸಂದರ್ಭಗಳಲ್ಲಿ, ಶಾಸಕಾಂಗವು ಸಾಧಿಸಲು ಬಯಸಿದ ಉದ್ದೇಶ ಮತ್ತು ವಸ್ತುವನ್ನು ಪರಿಗಣಿಸುವ ನ್ಯಾಯಾಲಯವು "ಬದಲಿಸುವಿಕೆ" (ಸಬ್ಸಟಿಟ್ಯೂಷನ್ಸ್) ಎಂಬ ಪದವನ್ನು "ತಿದ್ದುಪಡಿ" (ಅಮೆಂಡ್ಮೆಂಟ್) ಆಗಿ ಭವಿಷ್ಯದಿಂದ ಜಾರಿ ಪರಿಣಾಮವನ್ನು ಬೀರುತ್ತದೆ. ತಿದ್ದುಪಡಿ ಕಾಯ್ದೆ ತಿದ್ದುಪಡಿ ಜಾರಿಗೆ ಬಂದ ದಿನಾಂಕದಿಂದ ಜಾರಿಗೆ ಬರಲಿದೆ ಎಂದು ಸ್ಪಷ್ಟವಾಗಿ ಹೇಳಿದರೆ, ಈ ನಿಬಂಧನೆಯು ಪ್ರಕೃತಿಯಲ್ಲಿ ಭವಿಷ್ಯದಿಂದ ಪ್ರಾರಂಬವಾಗಿದೆ

(ಪ್ರಾಸ್ಪೆಕ್ಟೀವ್). ಅಂತಹ ನಿಬಂಧನೆಗಳಿಗೆ ಹಿಂದಿನಿಂದ ಜಾರಿ (ರಿಟ್ರಾಸ್ಪೆಕ್ಟೀವ್) ಪರಿಣಾಮವನ್ನು ನೀಡಲು ವ್ಯಾಖ್ಯಾನದ ಮೂಲಕ ನ್ಯಾಯಾಲಯಕ್ಕೆ ಮುಕ್ತವಾಗಿಲ್ಲ. ಅಂತಿಮವಾಗಿ ಈ ನಿಬಂಧನೆಗಳು ಭವಿಷ್ಯದಿಂದ ಪ್ರಾರಂಭವಾಗಿದೆಯೇ (ಪ್ರಾಸ್ಪೆಕ್ಟೀವ್) ಅಥವಾ ಹಿಂದಿನಿಂದ ಜಾರಿಯಾಗಿದೆಯೇ (ರಿಟ್ರಾಸ್ಪೆಕ್ಟೀವ್) ಎಂದು ನಿರ್ಧರಿಸಲು, ಇದು ಶಾಸಕಾಂಗದ ಉದ್ದೇಶವು ಏಕೈಕ ಮಾರ್ಗದರ್ಶಿಯಾಗಿದೆ. ತಿದ್ದುಪಡಿಗಾಗಿ ಅಳವಡಿಸಲಾಗಿರುವ ಕಾರ್ಯವಿಧಾನವು ಬದಲಿಸುವುದಾಗಿದ್ದರೆ ಮತ್ತು ತಿದ್ದುಪಡಿ ಮಾಡಿದ ಕಾಯ್ದೆಯಲ್ಲಿ ತಿದ್ದುಪಡಿ ಮಾಡಿದ ನಿಯಮಗಳು ಅಥವಾ ಕಾಯ್ದೆ ಜಾರಿಗೆ ಬಂದ ದಿನಾಂಕದಿಂದ ಬದಲಿ ನಿಬಂಧನೆಗಳು ಜಾರಿಗೆ ಬರುತ್ತವೆ ಎಂದು ನಿರ್ದಿಷ್ಟವಾಗಿ ಹೇಳಿದ್ದರೆ, ಶಾಸಕಾಂಗದ ಉದ್ದೇಶ ಸ್ಪಷ್ಟವಾಗುತ್ತದೆ. ಇದು ಬದಲಿ ಪ್ರಕರಣ ಎಂಬ ನೆಪದಲ್ಲಿ, ಹಿಂದಿನ ಶಾಸನದ ದಿನಾಂಕದಿಂದ ಆ ಬದಲಿ ನಿಬಂಧನೆಗೆ ಪರಿಣಾಮವನ್ನು ನೀಡಲಾಗುವುದಿಲ್ಲ. ಇದು ತಿದ್ದುಪಡಿ ಮಾಡಿದ ನಿಯಮಗಳು ಜಾರಿಗೆ ಬಂದ ದಿನಾಂಕದಿಂದ ಜಾರಿಗೆ ಬರಬೇಕು..... ಇದು ಜಾತಿ ವಿವಾದದಲ್ಲಿ ಕರ್ನಾಟಕ ಹೈಕೋರ್ಟ್ ದ್ವಿಸದಸ್ಯ ಪೀಠದ ನ್ಯಾಯಮೂರ್ತಿಗಳಾದ ಜಸ್ಟೀಸ್ ಎನ್.ಕುಮಾರ್ ಮತ್ತು ಜಸ್ಟೀಸ್ ಹೆಚ್.ಎಸ್. ಕೆಂಪಣ್ಣ ನವರು ಹಲವಾರು ತೀರ್ಪುಗಳನ್ನು ಉಲ್ಲೇಖಿಸಿ ಕಂಡುಕೊಂಡ ರೀತಿ"[1]

(3). ಸರ್ಕಾರಿ ಸೇವೆಗೆ ಸಂಬಂಧಿಸಿದಂತಾ ಪ್ರಕರಣವೊಂದರಲ್ಲಿ ಸುಪ್ರೀಮ್ ಕೋರ್ಟ್ ಕಾಯ್ದೆಯ ಅಧಿಕಾರದ ಅಡಿಯಲ್ಲಿ ರೂಪಿಸಲಾದ ನಿಯಮಕ್ಕೆ ಪರ್ಯಾಯವಾಗಿ ಸರ್ಕಾರಿ ಆದೇಶಗಳು, ಅಧಿಸೂಚನೆಗಳು, ಸರ್ಕ್ಯುಲರ್ ಗಳು ಬದಲಿಸಲು ಆಗದು ಎಂದಿದ್ದಾರೆ. ನಿಯಮ ಅಥವ ಕಾಯ್ದೆ ತಿದ್ದುಪಡಿ ಮಾಡದೆ ಎರಡು ಸೇವಾ ವರ್ಗಗಳನ್ನು ಒಂದೇ ಎಂದು ಸರ್ಕಾರಿ ಆದೇಶಗಳು, ಅಧಿಸೂಚನೆಗಳು, ಸರ್ಕ್ಯುಲರ್ ಗಳ ಮುಖೇನ ಪರಿಗಣಿಸಲಾಗದು ಎಂಬುದೇ ಈ ಕೇಸಿನ ಸಾರಾಂಶವಾಗಿರುತ್ತದೆ.[2]

---

[1] ಗೋವರ್ಧನ್ ವಿ. ಕರ್ನಾಟಕ ರಾಜ್ಯ – 2013 (1) ಕರ್.ಎಲ್.ಜೆ 437 (ಡಿ.ಬಿ)

[2] ರಾಜಿಂದರ್ ಸಿಂಗ್ ವಿ ಪಂಜಾಬ್ ರಾಜ್ಯ – ಎ.ಐ.ಆರ್ 2001 ಎಸ್.ಸಿ 1769

(4). ಸುಪ್ರೀಮ್ ಕೋರ್ಟ್ ಮುಂದೆ ಬಂದಂತಾ[1] ಚುನಾವಣಾ ಅರ್ಹತೆ ವಿಚಾರದ ಕಾನೂನು ವ್ಯಾಖ್ಯಾನದ ಬಗ್ಗೆ ಅದು ಎಂದಿನಿಂದ ಜಾರಿಯಾಗಬೇಕು ಎಂಬ ಪ್ರಶ್ನೆಯನ್ನು ಒಳಗೊಂಡ ಸಂಧರ್ಬದಲ್ಲಿ ಮಾನ್ಯ ನ್ಯಾಯಾಲಯ ಹೀಗೆಂದಿದೆ, "ಮೊದಲೇ ಅಸ್ತಿತ್ವದಲ್ಲಿರುವ ಪಠ್ಯಕ್ಕೆ ಒಂದು ಪಠ್ಯವನ್ನು ಬದಲಿಸುವುದು ಶಾಸಕಾಂಗ ಕರಡು ರಚನೆಯಲ್ಲಿ ಬಳಸಲಾಗುವ ತಿಳಿದಿರುವ ಮತ್ತು ಉತ್ತಮವಾಗಿ ಗುರುತಿಸಲ್ಪಟ್ಟ ಅಭ್ಯಾಸಗಳಲ್ಲಿ ಒಂದಾಗಿದೆ. "ಬದಲಿ" ಯನ್ನು "ರದ್ದುಗೊಳಿಸು" ದಿಂದ ಪ್ರತ್ಯೇಕಿಸಬೇಕಾಗಿದೆ ಅಥವಾ ಅಸ್ತಿತ್ವದಲ್ಲಿರುವ ನಿಬಂಧನೆಯನ್ನು ರದ್ದುಪಡಿಸಬೇಕು ಎಂಬ ವಿಚಾರದಿಂದ ಪ್ರತ್ಯೇಕಿಸಿ ನೋಡಬೇಕಿದೆ. .. ಒಂದು ನಿಬಂಧನೆಯ ಬದಲಿಯು ಹಿಂದಿನ ನಿಬಂಧನೆಯನ್ನು ರದ್ದುಗೊಳಿಸುತ್ತದೆ ಮತ್ತು ಹೊಸ ನಿಬಂಧನೆಯಿಂದ ಅದನ್ನು ಬದಲಾಯಿಸುತ್ತದೆ... ಪ್ರತಿಪಾದನೆಯನ್ನು ಬೆಂಬಲಿಸಲು ಯಾವುದೇ ಅಧಿಕಾರ ಅಗತ್ಯವಿದ್ದರೆ, ಅದು[2] ಎಂದು ಉಲ್ಲೇಕಿಸುತ್ತ ಅದರಲ್ಲಿನ ತ್ರಿಸದಸ್ಯ ಪೀಠದ ಪ್ರಕರಣವಾದ ವೆಸ್ಟ್ ಯು.ಪಿ ಶುಗರ್ ರಲ್ಲಿ "ಹಳೆಯ ನಿಯಮದ ಬದಲಿಗೆ ಹೊಸ ನಿಯಮವನ್ನು ಬದಲಿಸುವ ಮೂಲಕ ರಾಜ್ಯ ಸರ್ಕಾರವು ಹಳೆಯ ನಿಯಮವನ್ನು ಜೀವಂತವಾಗಿಡಲು ಎಂದಿಗೂ ಉದ್ದೇಶಿಸಿರಲಿಲ್ಲ. ಸಮಸ್ಯೆಯ ಸುತ್ತ ಕೇಂದ್ರೀಕೃತವಾಗಿರುವ ಸನ್ನಿವೇಶಗಳ ಸಂಪೂರ್ಣತೆಯನ್ನು ಪರಿಗಣಿಸಿ, ಬದಲಿಸುವಿಕೆಯು ಹಳೆಯ ನಿಯಮವನ್ನು ಅಳಿಸಿಹಾಕುವುದು ಮತ್ತು ಹೊಸ ನಿಯಮವನ್ನು ಕಾರ್ಯರೂಪಕ್ಕೆ ತರುವ ಪರಿಣಾಮವನ್ನು ಹೊಂದಿದೆ" ಎಂದು ಕೋರ್ಟ್ ಅಭಿಪ್ರಾಯಪಟ್ಟಿದೆ."

(5). "ತಿದ್ದುಪಡಿಯು ಬದಲಿಸುವಿಕೆಯಿಂದ ಆಗಿರುವುದರಿಂದ, ಇದು ಹಿಂದಿನ ಅವಧಿಯಿಂದ ಜಾರಿಯಾಗಿದೆ ಎಂದು ನಿರ್ಣಯಿಸಬೇಕಾಗಿದೆ. ಅಸ್ತಿತ್ವದಲ್ಲಿರುವ ಪದಗಳ ಬದಲಿಗೆ ಹೊಸ ಪದಗಳನ್ನು ಬದಲಿಸಿದಾಗ

---

[1] ಜಿಲೇಸಿಂಗ್ ವಿ. ಹರ್ಯಾಣರಾಜ್ಯ – 2004 (8) ಎಸ್.ಸಿ.ಸಿ 1

[2] ವೆಸ್ಟ್ ಯು.ಪಿ. ಶುಗರ್ ಮಿಲ್ – 2002 (2) ಎಸ್.ಸಿ.ಸಿ 645, ರಾಜಸ್ಥಾನ ರಾಜ್ಯ ವಿ. ಮಾಂಗಿಲಾಲ್–1996 (5) ಎಸ್.ಸಿ.ಸಿ 60, ಕೋಟೇಶ್ವರ್ ವಿಟ್ಟಲ್ ಕಾಮತ್ – 1969 (1) ಎಸ್.ಸಿ.ಸಿ 255, ವೀರಪ್ಪಚೆಟ್ಟಿಯಾರ್–ಎ.ಐ.ಆರ್ 1963 ಎಸ್.ಸಿ 933,

ಕಾನೂನಿನ ನಿಬಂಧನೆ ಅಥವಾ ಪದಗಳ ಪದವನ್ನು ಹೊಸ ನಿಬಂಧನೆಯಿಂದ ಬದಲಾಯಿಸಲಾಗುತ್ತದೆ; ಆದ್ದರಿಂದ, ತಿದ್ದುಪಡಿ ಮಾಡಿದ ನಿಬಂಧನೆಯನ್ನು ಕಾಯ್ದೆಯ ಪ್ರಾರಂಭದಿಂದಲೂ ಅಸ್ತಿತ್ವದಲ್ಲಿದ್ದಂತೆ ಓದಬೇಕು."[1] ಈ ಪ್ರಕರಣ ಡಿ.ಆರ್.ಟಿ ಕೋರ್ಟ್ ಗೆ ಅನ್ವಯ ಆಗುವ ಅಪೀಲಿನ ಬಗ್ಗೆ ತಿದ್ದುಪಡಿಯಾಗಿರುವುದನ್ನು ವ್ಯಾಖ್ಯಾನಿಸಿದಾಗ ಅಳವಡಿಸಿದ ತೀರ್ಪಾಗಿದೆ.

(6). ಶಾಸನದ ಉದ್ದೇಶಗಳು ಮತ್ತು ಕಾರಣಗಳ ಹೇಳಿಕೆಯನ್ನು (ಸ್ಟೇಟ್ಮೆಂಟ್ ಆಫ್ ಆಬ್ಜೆಕ್ಟ್ಸ್ ಅಂಡ್ ರೀಸನ್ಸ್) ಅದರ ವಿವರಣೆಯ ಮೊದಲ ತತ್ವವು ನಿಸ್ಸಂದೇಹವಾಗಿ, (1) ಶಾಸನದ ಸರಳ ಅರ್ಥವನ್ನು ನಿರ್ಬಂಧಿಸಲು ಬಳಸಲಾಗುವುದಿಲ್ಲ (2) ನಿಬಂಧನೆ ಮಾನ್ಯವಾಗಿದೆಯೇ ಎಂದು ನಿರ್ಧರಿಸಲು ಸಾಧ್ಯವಿಲ್ಲ; ಮತ್ತು (3) ಅದನ್ನು ಅಂಗೀಕರಿಸಿದ ಸಂದರ್ಭಗಳ ಬಗ್ಗೆ ಖಚಿತವಾಗಿರಬೇಕೆಂದಿಲ್ಲ. ಕಾನೂನಿನ ಮುನ್ನುಡಿ (ಪ್ರೀಯಾಂಬಲ್) ಕಾನೂನು ಪರಿಹರಿಸಲು ಬಯಸುವ ಕಿಡಿಗೇಡಿತನವನ್ನು ಪರಿಗಣಿಸಲು ಶಾಸನಬದ್ಧ ಸಹಾಯವಾಗಿರಬಹುದು. ಕಾನೂನಿನ ನಿಬಂಧನೆಗಳ ಮೇಲೆ ಅದು ಮೇಲುಗೈ ಸಾಧಿಸಲು ಸಾಧ್ಯವಿಲ್ಲವಾದರೂ, ಅಸ್ಪಷ್ಟತೆಯನ್ನು ಪರಿಹರಿಸಲು ಇದು ಒಂದು ಸಹಾಯವಾಗಬಹುದು.[2]

(7). ಹಿಂದಿನ ಸಮಯದಿಂದ ಜಾರಿಯಾಗಬೇಕು ಎಂಬ ತಿದ್ದುಪಡಿಯು, ಅದಾಗಲೇ ಪ್ರಾಪ್ತವಾಗಿರುವ ಹಕ್ಕನ್ನು ಕಸಿದುಕೊಳ್ಳುವುದಾದರೆ, ಅದು ವಿಚಾರಹೀನ, ಸ್ವೇಚ್ಛಾನುಸಾರವಾದದ್ದು ಮತ್ತು ಸಂವಿಧಾನ ವಿಧಿ 14 ಅನ್ನು ಉಲ್ಲಂಘಿಸುವಂತದ್ದು ಎಂದಿದೆ ಸುಪ್ರೀಮ್ ಕೋರ್ಟ್.[3]

(8). ಹಿಂದಿನ ಅವಧಿಯ ಕಾರ್ಯಾಚರಣೆಯನ್ನು ಹೊಂದಿರುವ ಮತ್ತು ಪ್ರಾಪ್ತವಾದ ಹಕ್ಕುಗಳನ್ನು ಕಸಿದುಕೊಳ್ಳುವ ನಿಯಮಗಳಿಗೆ ತಿದ್ದುಪಡಿ

---

[1] ಗೋಪಿನಾಥ್ ವಿ. ಸಿಂಡಿಕೇಟ್ ಬ್ಯಾಂಕ್ – 2019 (1) ಕೆ.ಸಿ.ಸಿ.ಆರ್ 131 (ಡಿ.ಬಿ)

[2] ಪವಿತ್ರ ವಿ. ಯೂ.ಆಫ್.ಇಂಡಿಯಾ – ಎ.ಐ.ಆರ್ 2019 ಎಸ್.ಸಿ 2723

[3] ಯು.ಓ.ಐ ವಿ. ತುಷಾರ್ – 1994 (5) ಎಸ್.ಸಿ.ಸಿ 450

ಅನಿಯಂತ್ರಿತ ಮತ್ತು ಸಮಂಜಸವಲ್ಲ ಮತ್ತು ಅಂತಹ ಹಿಂದಿನಿಂದ ಜಾರಿಯಾಗುವ ತಿದ್ದುಪಡಿಗಳು ನ್ಯಾಯಾಂಗ ಪರಿಶೀಲನೆಗೆ ಒಳಪಟ್ಟಿರುತ್ತವೆ.[1]

(9). ಪ್ರಾಪ್ತವಾದ ಹಕ್ಕು ಯಾವುದೇ ಆಕಸ್ಮಿಕದಿಂದ ಸ್ವತಂತ್ರವಾದ ಹಕ್ಕು ಎಂದು ಗಮನಿಸಿದಾಗ, ಇದು (ಅಂತಹ ಆಕಸ್ಮಿಕ) ಒಪ್ಪಂದ, ಶಾಸನ ಅಥವಾ ಕಾನೂನಿನ ಜಾರಿಯಿಂದ ಉದ್ಭವಿಸಬಹುದು. ಅಂತಹ ಮಾರ್ಗವನ್ನು ಕಾನೂನು ನಿರ್ದಿಷ್ಟವಾಗಿ ಅಥವಾ ಅಗತ್ಯವಾದ ಸೂಚನೆಯಿಂದ ಒದಗಿಸಿದರೆ ಮಾತ್ರ ಪ್ರಾಪ್ತವಾದ ಹಕ್ಕನ್ನು ಕಸಿದುಕೊಳ್ಳಬಹುದು.[2]

(10). ತಿದ್ದುಪಡಿಯು ಕಳೆದ ಅವಧಿಗೆ ಯಥಾಸ್ಥಿತಿಯನ್ನು ಪುನಃಸ್ಥಾಪಿಸಲು ಉದ್ದೇಶಿಸಿದ್ದಲ್ಲಿ, ಈಗಾಗಲೇ ಲಭ್ಯವಿರುವ, ಸಂಪಾದಿಸಿದ ಮತ್ತು ಸ್ವಾಧೀನಪಡಿಸಿಕೊಂಡಿರುವ ಪ್ರಯೋಜನಗಳನ್ನು ತೆಗೆದುಹಾಕುವ, ಕಾನೂನು ಮಾನ್ಯವಾಗಿಲ್ಲದಿರಬಹುದು.[3]

(11). ಕಾಯ್ದೆಯಲ್ಲಿ ಯಾವುದೇ ಕರಾರುವಕ್ಕಾದ ಅಥವಾ ಅಗತ್ಯವಾಗಿ ಸೂಚಿಸಲಾದ ನಿಯಮದ ಅನುಪಸ್ಥಿತಿಯಲ್ಲಿ, ಸಾಮಾನ್ಯವಾಗಿ ಕಾಯ್ದೆಯು ಹಕ್ಕುಗಳ ಮೇಲೆ ಕಾಯ್ದೆ ಜಾರಿಯಾದ ತಾರೀಖಿನಿಂದ (ಪ್ರಾಸ್ಪೆಕ್ಟೀವ್) ಪರಿಣಾಮ ಬೀರುತ್ತದೆ. ಕಾಯ್ದೆಯು ಹಿಂದಿನಿಂದ ಜಾರಿಯಾಗಲು ಅದರಲ್ಲಿ ಕರಾರುವಕ್ಕಾದ ಪದಗಳಿಂದ ಘೋಷಿಸಲ್ಪಟ್ಟಾಗ ಅಥವಾ ಹಿಂದಿನ ಅವಧಿಯಿಂದ ಜಾರಿಯನ್ನು ಮಾಡುವ ಉದ್ದೇಶದ ಸಂಬಂಧಿತ ಪದಗಳು ಮತ್ತು ಅವು ಸಂಭವಿಸುವ ಸಂದರ್ಭದಿಂದ ಸ್ಪಷ್ಟವಾಗಿ ಅನುಸರಿಸುತ್ತದೆ. ...... ನಾಗರೀಕ ಸೇವೆಯಲ್ಲಿ ಯಾವುದೇ ವರ್ಗವನ್ನು ಸಂಘಟಿಸಲು, ಈ ಆದೇಶದ ಪ್ಯಾರಾ 3 ರ ಉಪ-ಪ್ಯಾರಾ (1) ರ ಅಡಿಯಲ್ಲಿ ರಾಜ್ಯ ಸರ್ಕಾರಕ್ಕೆ ಅಧಿಕಾರ ನೀಡುವ ಸಂವಿಧಾನದ 371-ಡಿ ವಿಧಿ (1) ಮತ್ತು (2) ರ ಅಡಿಯಲ್ಲಿ ಅಧಿಕಾರವನ್ನು ಚಲಾಯಿಸಲು ಅಧ್ಯಕ್ಷೀಯ ಆದೇಶ, 1975 ಅನ್ನು ಹೊರಡಿಸಲಾಯಿತು. ಈ ಆದೇಶದ ಪ್ರಾರಂಭದಿಂದ 27 ತಿಂಗಳೊಳಗೆ ರಾಜ್ಯದ ವಿವಿಧ ಭಾಗಗಳಲ್ಲಿ

---

[1] ಅಗರ್ವಾಲ್ ವಿ. ಯು.ಪಿ. ರಾಜ್ಯ – 1987 (3) ಎಸ್.ಸಿ.ಸಿ 622

[2] ಯಾದವ್ ವಿ. ಯು.ಪಿ. ರಾಜ್ಯ – 2011 (6) ಎಸ್.ಸಿ.ಸಿ 570

[3] ತುಳಸಿದಾಸ್ ವಿ. ಎ.ಪಿ. ಸರ್ಕಾರ – 2003 (1) ಎಸ್.ಸಿ.ಸಿ 364

ವಿವಿಧ ಸ್ಥಳೀಯ ಕಾರ್ಯಕರ್ತರಾಗಿ ರಾಜ್ಯದ ಅಡಿಯಲ್ಲಿರುವ ನಾಗರಿಕ ಸೇವೆಗಳಲ್ಲಿನ ಹುದ್ದೆಗಳ ಬಗ್ಗೆ ಆಗಿತ್ತು. ಉಪ–ಪ್ಯಾರಾ (1) ರ ನಿಬಂಧನೆಯ ಪ್ರಕಾರ, ಈ ಅವಧಿಯ ಮುಕ್ತಾಯದ ಹೊರತಾಗಿಯೂ, ರಾಷ್ಟ್ರಪತಿಗಳು ಆದೇಶದಂತೆ, ರಾಜ್ಯ ಸರ್ಕಾರವನ್ನು ನಾಗರಿಕ ಸೇವೆಗಳಲ್ಲಿ ಯಾವುದೇ ವರ್ಗದ ಹುದ್ದೆಗಳನ್ನು ಆಯೋಜಿಸಲು ಅದನ್ನು ಸೂಕ್ತವೆಂದು ಪರಿಗಣಿಸಿದಾಗಲೆಲ್ಲಾ ಅಗತ್ಯವಿರುತ್ತದೆ ಎಂದು ಹೇಳಲಾಗಿದೆ ಮತ್ತು ರಾಜ್ಯದ ಅಡಿಯಲ್ಲಿರುವ ಯಾವುದೇ ವರ್ಗದ ನಾಗರಿಕ ಹುದ್ದೆಗಳು ವಿವಿಧ ಸ್ಥಳೀಯ ಕಾರ್ಯಕರ್ತರು ಅಥವಾ ರಾಜ್ಯದ ವಿವಿಧ ಭಾಗಗಳಾಗಿರುತ್ತವೆ. 1975 ರ ಅಧ್ಯಕ್ಷೀಯ ಆದೇಶದ ಪ್ರಕಾರ, ಪ್ಯಾರಾ 3 ಅಥವಾ ಪ್ಯಾರಾ 8 ರ ಉಪ–ಪ್ಯಾರಾ (1) ರ ಅಡಿಯಲ್ಲಿ ಯಾವುದೇ ಆದೇಶವನ್ನು ಹಿಂದಿನಿಂದ ಜಾರಿ ಮಾಡುವಂತೆ ರಾಜ್ಯ ಸರ್ಕಾರಕ್ಕೆ ಅಧಿಕಾರ ನೀಡಿಲ್ಲ. 1975 ರ ಅಧ್ಯಕ್ಷೀಯ ಆದೇಶದಿಂದ ರಾಜ್ಯ ಸರ್ಕಾರಕ್ಕೆ ಯಾವುದೇ ಆದೇಶಗಳನ್ನು ಹಿಂದಿನ ದಿನಾಂಕದೊಂದಿಗೆ ರವಾನಿಸಲು ಅಧಿಕಾರವಿಲ್ಲ ಎಂಬ ಅಂಶವನ್ನು, ಯಾವುದೇ ನಿಯಮಗಳ ಅನುಪಸ್ಥಿತಿಯಲ್ಲಿ ಅಥವಾ ಅದನ್ನು ಹಿಂದಿನ ದಿನಾಂಕವನ್ನಾಗಿ ಮಾಡುವ ಉದ್ದೇಶದಿಂದ, ಜಿ.ಓ.ಎಂ ಸಂಖ್ಯೆ 124 ದಿನಾಂಕ: 7–3– 2002 ಅನ್ನು ಹಿಂದಿನ ಅವಧಿಯಿಂದ ಜಾರಿಗೆ ತರಲು ಸಾಧ್ಯವಿಲ್ಲ." ಎನ್ನುತ್ತದೆ ಸುಪ್ರೀಮ್ ಕೋರ್ಟ್.[1]

(12). ಮತ್ತೊಂದು ನೀತಿಯು ಉತ್ತಮ ಅಥವಾ ಬುದ್ಧಿವಂತಿಕೆಯದ್ದು ಅಥವಾ ಹೆಚ್ಚು ವೈಜ್ಞಾನಿಕ ಅಥವಾ ತಾರ್ಕಿಕ ಎಂದು ಭಾವಿಸಿದ್ದರಿಂದ ಸರ್ಕಾರವು ತೆಗೆದುಕೊಂಡ ನೀತಿ ನಿರ್ಧಾರವನ್ನು ನ್ಯಾಯಾಲಯವು ರದ್ದು ಮಾಡಲು ಸಾಧ್ಯವಿಲ್ಲ. ನೀತಿಯ ಸಾಧಕ–ಬಾಧಕಗಳನ್ನು ಅಳೆಯುವುದು ಅಥವಾ ಅದರ ಪ್ರಯೋಜನಕಾರಿ ಅಥವಾ ಸಮನಾದ ನಿಲುವಿನ ಮಟ್ಟವನ್ನು ಪರೀಕ್ಷಿಸುವುದು ನ್ಯಾಯಾಲಯದ ವ್ಯಾಪ್ತಿಯಲ್ಲಿಲ್ಲ.[2]

---

[1] ಸುರೇಂದ್ರರೆಡ್ಡಿ ವಿ. ಎ.ಪಿ. ರಾಜ್ಯ – 2015 (8) ಎಸ್.ಸಿ.ಸಿ 410

[2] ಬಾಲ್ಕೋ ಎಂಪ್ಲಾಯೀಸ್ ವಿ. ಯು.ಓ.ಐ – 2002 (2) ಎಸ್.ಸಿ.ಸಿ 333

(13). ಸುಪ್ರೀಮ್ ಕೋರ್ಟ್ ತೀರ್ಪೊಂದರಲ್ಲಿ[1] ಹೇಳಿರುವಂತೆ, ನ್ಯಾಯಾಲಯದ ತೀರ್ಪನ್ನು ಬದಿಗಿರಿಸಲು ಶಾಸಕಾಂಗಕ್ಕೆ ಯಾವುದೇ ಅಧಿಕಾರವಿಲ್ಲ ಎಂದು ಸ್ಪಷ್ಟವಾಗಿ ಘೋಷಿಸಲಾಗಿದೆ. ಹಿಂದಿನ ದಿನಾಂಕದಿಂದ ಜಾರಿ ಪರಿಣಾಮದೊಂದಿಗೆ ಕಾನೂನನ್ನು ರೂಪಿಸುವ ಶಾಸಕಾಂಗದ ಅಧಿಕಾರವು ಉತ್ತಮವಾಗಿ ಗುರುತಿಸಲ್ಪಟ್ಟಿದೆಯಾದರೂ, ನ್ಯಾಯಾಲಯದ ತೀರ್ಪಿನ ಮೇಲೆ ಕುಳಿತುಕೊಳ್ಳಲು ಅಥವಾ ನ್ಯಾಯಾಂಗ ಅಧಿಕಾರವನ್ನು ಕಸಿದುಕೊಳ್ಳಲು ಶಾಸಕಾಂಗಕ್ಕೆ ಯಾವುದೇ ಅಧಿಕಾರವಿಲ್ಲದಿದ್ದರೂ, ಅದು ನ್ಯಾಯಾಲಯದ ನಿರ್ಧಾರಕ್ಕೆ (ತೀರ್ಪಿಗೆ) ಕಾರಣವಾದ ಆಧಾರವನ್ನು ತೆಗೆದುಹಾಕುವ ಅಧಿಕಾರವನ್ನು ಅದರ ಸಾಮರ್ಥ್ಯಕ್ಕೆ ಒಳಪಡಿಸುತ್ತದೆ. ಆದಾಗ್ಯೂ, ನ್ಯಾಯಾಲಯದ ತೀರ್ಪನ್ನು ಹಿಂದಿನ ತಾರೀಖಿನಿಂದ ಅಥವಾ ಹಾಲಿ ತಾರೀಖಿನಿಂದ ಬದಲಾಯಿಸಲು ಶಾಸಕಾಂಗಕ್ಕೆ ಯಾವುದೇ ಅಧಿಕಾರವಿಲ್ಲ. ನ್ಯಾಯಾಂಗ ನಿರ್ಧಾರವನ್ನು ಹೆಚ್ಚು ನೇರವಾಗಿ ರದ್ದುಗೊಳಿಸಲು, ಹಿಮ್ಮುಖಗೊಳಿಸಲು ಅಥವಾ ರದ್ದುಗೊಳಿಸಲು ಶಾಸಕಾಂಗಕ್ಕೆ ಕೇವಲ ಘೋಷಣೆಯಿಂದ ಸಾಧ್ಯವಾಗುವುದಿಲ್ಲ.

(14). ಕಾಲಮಿತಿ, ಪ್ರಕ್ರಿಯಾ ಪ್ರಕೃತಿಯಲ್ಲಿರುವುದರಿಂದ, ಸಾಮಾನ್ಯವಾಗಿ ಹಿಂದಿನ ತಾರೀಖಿನಿಂದ ಅನ್ವಯಿಸಲಾಗುತ್ತದೆ, ಆದರೆ ಹೊಸ ಕಾಲಮಿತಿಯ ನಿಯಮವು ಸತ್ತ ಪರಿಹಾರವನ್ನು ಪುನರುಜ್ಜೀವನ ಗೊಳಿಸುವುದಿಲ್ಲ. ಈ ಮೊದಲು ನೀಡಲಾಗಿದ್ದಕ್ಕಿಂತ ಹೆಚ್ಚಿನ ಅವಧಿಯ ಮಿತಿಯನ್ನು ಒದಗಿಸುವ ಹೊಸ ಮಿತಿಯ ಕಾನೂನಿನ ಹಿನ್ನೆಲೆಯಲ್ಲಿ ಇದನ್ನು ಹೇಳಲಾಗಿದೆ.[2]

(15). ಕಾಯ್ದೆ ಸೌಲಭ್ಯವನ್ನು ನೀಡುವುದಾದರೆ, ಅಂತಹ ಕಾಯ್ದೆಯನ್ನು ಹಿಂದಿನಿಂದ ಜಾರಿ ಮಾಡಬಹುದಾದರೂ, ನ್ಯಾಯಸಮ್ಮತ ತತ್ವದ ಅನ್ವಯ, ಹಿಂದಿನ ತಾರೀಖಿನಿಂದ ಜಾರಿ ಮಾಡಲು ಬರದು, ಆದರಂತೆ, ಪ್ರಾಪ್ತವಾದ ಹಕ್ಕುಗಳನ್ನು ಮಾರ್ಪಡಿಸುವ ಅಥವಾ ಕಟ್ಟುಪಾಡುಗಳನ್ನು

---

[1] ವೀರೇಂದ್ರಸಿಂಗ್ ವಿ. ಹರ್ಯಾಣ ರಾಜ್ಯ – 2004 (12) ಎಸ್.ಸಿ.ಸಿ 588

[2] ಎಂ.ಪಿ. ಸ್ಟೀಲ್ ವಿ. ಸಿ.ಸಿ.ಇ – 2015 (7) ಎಸ್.ಸಿ.ಸಿ 58

ವಿಧಿಸುವ ಅಥವಾ ಹೊಸ ಕರ್ತವ್ಯಗಳನ್ನು ವಿಧಿಸುವ ಅಥವಾ ಹೊಸ ಅಂಗವೈಕಲ್ಯವನ್ನು ಜೋಡಿಸುವ ಶಾಸನಗಳನ್ನು ಹಾಲಿ ತಾರೀಖಿನಿಂದ ಜಾರಿ ಎಂದು ಪರಿಗಣಿಸಬೇಕಾಗುತ್ತದೆ. ಆದರೆ ಶಾಸಕಾಂಗದ ಉದ್ದೇಶವು ಕಾಯ್ದೆಯನ್ನು ಹಿಂದಿನ ಅವಧಿಯಿಂದ ಜಾರಿ ಪರಿಣಾಮವನ್ನು ನೀಡಿದರೆ; ಶಾಸನವು ಹಿಂದಿನ ಶಾಸನದಲ್ಲಿ ಸ್ಪಷ್ಟವಾದ ಲೋಪವನ್ನು ಪೂರೈಸುವ ಉದ್ದೇಶದಿಂದ ಅಥವಾ ಹಿಂದಿನ ಶಾಸನವನ್ನು ವಿವರಿಸುವ ಉದ್ದೇಶದಿಂದ ಆಗಿದ್ದರೆ ಅದು ಹಿಂದಿನಿಂದ ಜಾರಿಯಾಗುತ್ತದೆ.[1]

(16). ಶಾಸನ ನಿರ್ಮಾಣದ ಒಂದು ನೆಲೆಸಿದ ತತ್ವವಾಗಿದ್ದು, ಪ್ರತಿ ಶಾಸನವು ಮೇಲ್ನೋಟಕ್ಕೆ ಅಂದಿನಿಂದ ಜಾರಿಯೇ ಹೊರತು ಅದು ಸ್ಪಷ್ಟವಾಗಿ ಅಥವಾ ಹಿಂದಿನಿಂದ ಕಾರ್ಯಾಚರಣೆಗಳನ್ನು ಹೊಂದಲು ಅಗತ್ಯವಾದ ಪರಿಣಾಮಗಳಿಂದ ಕುಡಿದ್ದರೆ ಮಾತ್ರ ಹಿಂದಿನಿಂದ ಜಾರಿಯಾಗತಕ್ಕದ್ದು. ಕಾನೂನುಬದ್ಧ ಸೂತ್ರ (ಮ್ಯಾಕ್ಸಿಮ್) – "ನೋವಾ ಕಾನ್ಸ್ಟ್ಯೂಟಿಯೊ ಫ್ಯೂಚುರಿಸ್ ಫಾರ್ಮಾಮ್ ಇಂಪೋನೆರೆ ಡೆಬೆಟ್ ನಾನ್ ಪ್ರೆಟೆರಿಟಿಸ್" ಎಂದು ನ್ಯಾಯಾಲಯವು ಗಮನಿಸಿದೆ, ಅಂದರೆ ಹೊಸ ಕಾನೂನು ಅನುಸರಿಸಬೇಕಾದದ್ದನ್ನು ನಿಯಂತ್ರಿಸಬೇಕು, ಹಿಂದಿನದಲ್ಲ, ಶಾಸನ ಅಂದಿನಿಂದ ಜಾರಿಯ ಊಹೆಯ ತತ್ವವನ್ನು ಒಳಗೊಂಡಿರುತ್ತದೆ.[2]

(17). ರಿಟ್ರಾಸ್ಪೆಕ್ಟೀವ್ (ಹಿಂದಿನಿಂದ ಜಾರಿ) ಪದವನ್ನು ಸುಪ್ರೀಮ್ ಕೋರ್ಟಿನ ಪ್ರಕರಣವೊಂದರಲ್ಲಿ[3] ಈ ರೀತಿಯಾಗಿ ಹಲವಾರು ಗ್ರಂಥಗಳನ್ನು ಉಲ್ಲೇಕಿಸಿ ಹೀಗೆ ವ್ಯಾಖ್ಯಾನಿಸಲಾಗಿದೆ, – **ಕೆ.ಜೆ.ಅಯ್ಯರ್ ರವರ ಜುಡಿಷಿಯಲ್ ಡಿಕ್ಷನರಿ:–** ಕಾಯಿದೆಯ ಉಲ್ಲೇಖದೊಂದಿಗೆ ಬಳಸಿದಾಗ "ರೆಟ್ರೋಸ್ಪೆಕ್ಟಿವ್" ಎಂದರೆ (i) ಅಸ್ತಿತ್ವದಲ್ಲಿರುವ ಒಪ್ಪಂದದ ಮೇಲೆ ಪರಿಣಾಮ ಬೀರುತ್ತದೆ; ಅಥವಾ (ii) ಹಿಂದಿನ, ಮುಚ್ಚಿದ ಮತ್ತು ಪೂರ್ಣಗೊಂಡ ವಹಿವಾಟನ್ನು ಮತ್ತೆ ತೆರೆಯುವುದು; ಅಥವಾ (iii) ಪ್ರಾಪ್ತವಾದ ಹಕ್ಕುಗಳು

---

[1] ಕಮೀಷನರ್ ಆಫ್ ಟ್ಯಾಕ್ಸ್ ವಿ. ವಟಿಕಾ ಟೌನ್ ಶಿಪ್ – 2015 (1) ಎಸ್.ಸಿ.ಸಿ 1

[2] ಸಿ.ಐ.ಟಿ ವಿ. ಎಸ್ಸಾರ್ ಟೆಲಿಹೋಲ್ಡಿಂಗ್ಸ್ – 2018 (3) ಎಸ್.ಸಿ.ಸಿ 253

[3] ಸ್ಟೇಟ್ ಬ್ಯಾಂಕ್ ವಿ. ಯು.ಓ.ಐ – 2005 (7) ಎಸ್.ಸಿ.ಸಿ 584

ಮತ್ತು ಪರಿಹಾರಗಳ ಮೇಲೆ ಪರಿಣಾಮ ಬೀರುವುದು; ಅಥವಾ (iv) ಕಾರ್ಯವಿಧಾನದ ಮೇಲೆ ಪರಿಣಾಮ ಬೀರುತ್ತದೆ. **– ವರ್ಡ್ಸ್ ಅಂಡ್ ಫ್ರೇಸಸ್ –ಸಂಪುಟ 37–ಎ:–** ಅಸ್ತಿತ್ವದಲ್ಲಿರುವ ಕಾನೂನುಗಳ ಅಡಿಯಲ್ಲಿ ಸ್ವಾಧೀನಪಡಿಸಿಕೊಂಡಿರುವ ಪ್ರಾಪ್ತವಾದ ಅಥವಾ ವಶವಾದ ಹಕ್ಕುಗಳನ್ನು ಕಸಿದುಕೊಳ್ಳುವ ಅಥವಾ ದುರ್ಬಲಗೊಳಿಸುವಂತಹ "ರೆಟ್ರೋಸ್ಪೆಕ್ಟಿವ್ ಅಥವಾ ರೆಟ್ರೊಆಕ್ಟಿವ್ ಕಾನೂನು". ಈಗಾಗಲೇ ಹಿಂದಿನ ವ್ಯವಹಾರಗಳು ಅಥವಾ ಪರಿಗಣನೆಗಳಿಗೆ ಸಂಬಂಧಿಸಿದಂತೆ, ಹಿಂದಿನ ಕಾನೂನುಗಳು ಈಗಾಗಲೇ ಅಸ್ತಿತ್ವದಲ್ಲಿರುವ ಕಾನೂನುಗಳ ಅಡಿಯಲ್ಲಿ ಸ್ವಾಧೀನಪಡಿಸಿಕೊಂಡಿರುವ ಪ್ರಾಪ್ತವಾದ ಹಕ್ಕುಗಳನ್ನು ಕಸಿದುಕೊಳ್ಳುತ್ತವೆ ಅಥವಾ ದುರ್ಬಲಗೊಳಿಸುತ್ತವೆ, ಅಥವಾ ಹೊಸ ಬಾಧ್ಯತೆಯನ್ನು ಸೃಷ್ಟಿಸುತ್ತವೆ, ಹೊಸ ಕರ್ತವ್ಯವನ್ನು ವಿಧಿಸುತ್ತವೆ, ಅಥವಾ ಹೊಸ ಅಂಗವೈಕಲ್ಯವನ್ನು ಜೋಡಿಸುತ್ತವೆ. – **ರಾಮನಾಥ್ ಅಯ್ಯರ್ ರವರ ಲಾ ಲೆಕ್ಸಿಕಾನ್ 2005 ರ ಆವೃತ್ತಿ ಯಂತೆ** "ರಿಟ್ರೋಆಕ್ಟೀವ್ ಮತ್ತು ರಿಟ್ರಾಸ್ಪೆಕ್ಟೀವ್" ಎಂಬುದನ್ನು ಹೀಗೆ ಅರ್ಥೈಸಿದ್ದಾರೆ, "ರಿಟ್ರೋಆಕ್ಟೀವ್ ಹಿಂದುಳಿದಂತೆ (ಬ್ಯಾಕ್ವರ್ಡ್) ವರ್ತಿಸುವುದು; ಹಿಂದಿನದನ್ನು ಪರಿಣಾಮ ಬೀರುತ್ತದೆ. (ಒಂದು ಶಾಸನ, ತೀರ್ಪು, ಇತ್ಯಾದಿ) ಹಿಂದೆ ಸಂಭವಿಸಿದ ವಿಷಯಗಳಿಗೆ ವ್ಯಾಪ್ತಿ ಅಥವಾ ಪರಿಣಾಮವನ್ನು ವಿಸ್ತರಿಸುತ್ತದೆ. – ಇದನ್ನು ಹಿಂದಿನ ಅವಲೋಕನ (ರಿಟ್ರಾಸ್ಪೆಕ್ಟೀವ್) ಎಂದೂ ಕರೆಯಲಾಗುತ್ತದೆ. **ಬ್ಲಾಕ್ ಲಾ ಡಿಕ್ಷನರಿ ಪ್ರಕಾರ :–** "ರೆಟ್ರೊಆಕ್ಟಿವಿಟಿ" (ಹಿಮ್ಮೆಟ್ಟುವಿಕೆ) ಎನ್ನುವುದು ವಕೀಲರು ಹೆಚ್ಚಾಗಿ ಬಳಸುವ ಪದ ಆದರೆ ವಿರಳವಾಗಿ ವ್ಯಾಖ್ಯಾನಿಸಲಾಗಿದೆ. ವಿಶ್ಲೇಷಣೆಯಲ್ಲಿ ಅದು ಕನಿಷ್ಟ ಎರಡು ವಿಭಿನ್ನ ಪರಿಕಲ್ಪನೆಗಳನ್ನು ಒಳಗೊಳ್ಳಲು ಬಳಸಲಾಗುತ್ತದೆ ಎಂದು ಸ್ಪಷ್ಟವಾಗುತ್ತದೆ. ಮೊದಲನೆಯದನ್ನು "ನಿಜವಾದ ಹಿಮ್ಮೆಟ್ಟುವಿಕೆ" ಎಂದು ಕರೆಯಬಹುದು, ಇದು ನಿಯಮವನ್ನು ಪ್ರಕಟಿಸುವ ಮೊದಲು ಪೂರ್ಣಗೊಂಡ ಒಂದು ಕಾರ್ಯ ಅಥವಾ ವಹಿವಾಟಿಗೆ ಹೊಸ ಕಾನೂನಿನ ನಿಯಮವನ್ನು ಅನ್ವಯಿಸುತ್ತದೆ. ಎರಡನೆಯ ಪರಿಕಲ್ಪನೆಯನ್ನು "ಅರೆ–ಹಿಮ್ಮೆಟ್ಟುವಿಕೆ" ಎಂದು ಕರೆಯಲಾಗುತ್ತದೆ, ಇದು ಪೂರ್ಣಗೊಳ್ಳುವ ಪ್ರಕ್ರಿಯೆಯಲ್ಲಿ ಒಂದು ಕಾರ್ಯ

ಅಥವಾ ವಹಿವಾಟಿಗೆ ಹೊಸ ಕಾನೂನಿನ ನಿಯಮವನ್ನು ಅನ್ವಯಿಸಿದಾಗ ಸಂಭವಿಸುತ್ತದೆ ....' **ಹ್ಯಾಲ್ಸಬರಿ ಲಾಸ್ ಆಫ್ ಇಂಗ್ಲ್ಯಾಂಡ್ ಸಂಪುಟ-44:-** ಪುನರಾವಲೋಕನ (ರಿಟ್ರಾಸ್ಪೆಕ್ಟೀವ್) - ಹಿಂತಿರುಗಿ ನೋಡುವುದು; ಹಿಂದಿನದನ್ನು ಆಲೋಚಿಸುತ್ತಿದೆ. - ಹಿಂದಿನ ಸಮಯದಿಂದ ಕಾರ್ಯಾಚರಣೆ ನಡೆಸಲಾಗುತ್ತಿದೆ. - 'ರೆಟ್ರೋಸ್ಪೆಕ್ಟಿವ್' ಸ್ವಲ್ಪ ಅಸ್ಪಷ್ಟವಾಗಿದೆ ಮತ್ತು ಒಂದಕ್ಕಿಂತ ಹೆಚ್ಚು ಇಂದ್ರಿಯಗಳಲ್ಲಿ ಇದನ್ನು ಬಳಸುವುದರಿಂದ ಉತ್ತಮ ಗೊಂದಲ ಉಂಟಾಗಿದೆ. ಆದಾಗ್ಯೂ, ಸಾಮಾನ್ಯವಾಗಿ, ನ್ಯಾಯಾಲಯಗಳು ಅದರ ಪ್ರಾರಂಭದ ಮೊದಲು ಅಸ್ತಿತ್ವಕ್ಕೆ ಬರುವ ಪ್ರಕರಣಗಳು ಅಥವಾ ವಾಸ್ತವಗಳ ಮೇಲೆ ಕಾರ್ಯನಿರ್ವಹಿಸುವ ಯಾವುದೇ ಶಾಸನವನ್ನು ಪುನರಾವಲೋಕನವೆಂದು ಪರಿಗಣಿಸುತ್ತದೆ....' **ಥಾಮ್ಸ್ನ್ ಸ್ವೀಟ್ ಅಂಡ್ ಮ್ಯಾಕ್ಸ್ವೆಲ್ ಸೌತ್ ಏಷಿಯನ್ ಎಡಿಷನ್:-** "ಶಾಸನವು ಜಾರಿಗೆ ಬರುವ ಅಥವಾ ರಚಿಸುವ ಮೊದಲು ಉದ್ಭವಿಸುವ ವಿಷಯಕ್ಕೆ ಸಂಬಂಧಿಸಿದಂತೆ ಅದು ಪರಿಣಾಮ ಬೀರುತ್ತಿದ್ದರೆ ಅದು ಹಿಂದಿನ ಅವಧಿಯಾಗಿದೆ. ಈ ವ್ಯಾಖ್ಯಾನವು ಹೇಳುವುದು ಸುಲಭ, ಆದರೆ ಅನ್ವಯಿಸಲು ಯಾವಾಗಲೂ ಸುಲಭವಲ್ಲ. ಈ ಕೃತಿಯ ಕೊನೆಯ ಆವೃತ್ತಿಯಲ್ಲಿ ವಿವರಿಸಲಾದ ಹೆಚ್ಚು ಸಂಕೀರ್ಣವಾದ ವ್ಯಾಖ್ಯಾನವು ನ್ಯಾಯಾಂಗ ಅನುಮೋದನೆಯನ್ನು ಪಡೆಯಿತು. ವ್ಯಾಖ್ಯಾನವು "ಒಂದು ಶಾಸನವನ್ನು ಹಿಂದಿನ ಅವಧಿಯೆಂದು ಪರಿಗಣಿಸಲಾಗುತ್ತದೆ, ಇದು ಅಸ್ತಿತ್ವದಲ್ಲಿರುವ ಕಾನೂನುಗಳ ಅಡಿಯಲ್ಲಿ ಸ್ವಾಧೀನಪಡಿಸಿಕೊಂಡ ಯಾವುದೇ ಪ್ರಾಪ್ತವಾದ ಹಕ್ಕನ್ನು ಕಸಿದುಕೊಳ್ಳುತ್ತದೆ ಅಥವಾ ದುರ್ಬಲಗೊಳಿಸುತ್ತದೆ, ಅಥವಾ ಹೊಸ ಬಾಧ್ಯತೆಯನ್ನು ಸೃಷ್ಟಿಸುತ್ತದೆ, ಅಥವಾ ಹೊಸ ಕರ್ತವ್ಯವನ್ನು ವಿಧಿಸುತ್ತದೆ, ಅಥವಾ ಈಗಾಗಲೇ ಹಿಂದಿನ ವಹಿವಾಟುಗಳು ಅಥವಾ ಪರಿಗಣನೆಗಳಿಗೆ ಸಂಬಂಧಿಸಿದಂತೆ ಹೊಸ ಅಂಗವೈಕಲ್ಯವನ್ನು ಲಗತ್ತಿಸುತ್ತದೆ.

(18). "ವೆಸ್ಟೆಡ್ ರೈಟ್ಸ್" (ಪ್ರಾಪ್ತವಾದ ಹಕ್ಕುಗಳು) ಈ ಬಗ್ಗೆ ಸುಪ್ರೀಮ್ ಕೋರ್ಟಿನ ಅನೇಕ ತೀರ್ಪುಗಳಲ್ಲಿ ವ್ಯಾಖ್ಯಾನವಾಗಿದ್ದು ಅಂತಹ ಪ್ರಾಪ್ತವಾದ ಹಕ್ಕುಗಳನ್ನು ಕಾಯ್ದೆ ಹಿಂದಿನಿಂದ ಜಾರಿ ಮಾಡುವುದರಿಂದ ಅನೂರ್ಜಿತ ಗೊಳಿಸಲಾಗದು ಎಂದು ತೀರ್ಪುಗಳಾಗಿವೆ:- "ವೆಸ್ಟೆಡ್" ಎಂಬ ಪದವನ್ನು

ಬ್ಲ್ಯಾಕ್‌ನ ಕಾನೂನು ನಿಘಂಟಿನಲ್ಲಿ (6 ನೇ ಆವೃತ್ತಿ) ಪು. 1563, ಹೀಗೆ ವಿವರಿಸಲಾಗಿದೆ: ಸ್ಥಿರವಾದ; ಪ್ರಾಪ್ತವಾದ; ನೆಲೆಸಿರುವಿಕೆ; ಸಂಪೂರ್ಣ; ಪೂರ್ಣಗೊಂಡಿದೆ. ಈ ಪಾತ್ರವನ್ನು ಹೊಂದಿರುವ ಅಥವಾ ಸಂಪೂರ್ಣ ಮಾಲೀಕತ್ವದ ಹಕ್ಕುಗಳನ್ನು ನೀಡಲಾಗಿರುವಾಗ; ಅನಿಶ್ಚಿತತೆ ಇಲ್ಲದಿರುವಾಗ; ಷರತ್ತು ಪೂರ್ವನಿದರ್ಶನದ ಮೂಲಕ ಸೋಲಿಸಲಾಗುವುದಿಲ್ಲ. ಅನುಭವದ ಹಕ್ಕು, ಪ್ರಸ್ತುತ ಅಥವಾ ನಿರೀಕ್ಷಿತ (ಪ್ರಾಸ್ಪೆಕ್ಟೀವ್), ಕೆಲವು ನಿರ್ದಿಷ್ಟ ವ್ಯಕ್ತಿ ಅಥವಾ ವ್ಯಕ್ತಿಗಳ ಆಸ್ತಿಯಾಗಿ ಪ್ರಸ್ತುತ ಆಸಕ್ತಿಯಾಗಿರುವಾಗ ಹಕ್ಕುಗಳನ್ನು "ವೆಸ್ಟೆಡ್" ಮಾಡಲಾಗುತ್ತದೆ; ಭವಿಷ್ಯದ ಪ್ರಯೋಜನಗಳ ನಿರೀಕ್ಷೆ, ಅಥವಾ ಅಸ್ತಿತ್ವದಲ್ಲಿರುವ ಕಾನೂನುಗಳ ನಿರೀಕ್ಷಿತ ಮುಂದುವರಿಕೆಯ ಮೇಲೆ ಸ್ಥಾಪಿಸಲಾದ ಆಸ್ತಿಯಲ್ಲಿನ ಅನಿಶ್ಚಿತ ಆಸಕ್ತಿ, "ವೆಸ್ಟೆಡ್" ಹಕ್ಕುಗಳನ್ನು ರೂಪಿಸುವುದಿಲ್ಲ. ... ಆದ್ದರಿಂದ, "ವೆಸ್ಟೆಡ್ ರೈಟ್ಸ್" ಯಾವುದೇ ಆಕಸ್ಮಿಕದಿಂದ ಸ್ವತಂತ್ರವಾದ ಹಕ್ಕು. ಅಂತಹ ಹಕ್ಕು ಒಪ್ಪಂದ, ಕಾನೂನು ಅಥವಾ ಕಾನೂನಿನ ಕಾರ್ಯಾಚರಣೆಯಿಂದ ಉದ್ಭವಿಸಬಹುದು. ಅಂತಹ ಮಾರ್ಗವನ್ನು ಕಾನೂನು ನಿರ್ದಿಷ್ಟವಾಗಿ ಅಥವಾ ಅಗತ್ಯವಾದ ಸೂಚನೆಯಿಂದ ಒದಗಿಸಿದರೆ ಮಾತ್ರ ಪ್ರಾಪ್ತವಾದ ಹಕ್ಕನ್ನು ಕಸಿದುಕೊಳ್ಳಬಹುದು"[1]

**ಹಾಗಾದರೆ ಸುಪ್ರೀಮ್ ಕೋರ್ಟ್ ತೀರ್ಪುಗಳ ಪರಿಣಾಮವೇನು.**

(1). ಸುಪ್ರೀಮ್ ಕೋರ್ಟ್ ಪ್ರಕರಣವೊಂದರಲ್ಲಿ ಹೀಗೆಂದಿದೆ "..... ಆದಾಗ್ಯೂ, ಸಂವಿಧಾನದ 142 ನೇ ವಿಧಿಯಿಂದ ನ್ಯಾಯಾಲಯಕ್ಕೆ ನೀಡಲಾಗಿರುವ ಅಧಿಕಾರವನ್ನು ಗುಣಪಡಿಸುವ ಪ್ರಕೃತಿಯಾಗಿ ಪರಿಗಣಿಸಲಾಗುವುದಿಲ್ಲ ಎಂದು ನೆನಪಿಡುವ ಅಗತ್ಯವಿರುತ್ತದೆ, ಅದು ತನ್ನ ಮುಂದೆ ಬಾಕಿ ಇರುವ ಕೇಸಿನ ವಿಚಾರವಾಗಿ ವ್ಯವಹರಿಸುವಾಗ ದಾವೆ ಹೂಡುವವನ ಮೂಲ ಹಕ್ಕುಗಳನ್ನು ನಿರ್ಲಕ್ಷಿಸಲು ನ್ಯಾಯಾಲಯಕ್ಕೆ ಅಧಿಕಾರ ನೀಡುವುದಿಲ್ಲ. ಈ ಅಧಿಕಾರವನ್ನು ಪ್ರಕರಣಕ್ಕೆ ಅಥವ ವ್ಯಾಜ್ಯಕಾರಣಕ್ಕೆ ಅನ್ವಯವಾಗುವ ಮೂಲ ಕಾನೂನನ್ನು "ತುಳಿದು ಹಾಕುವುದು" (ನಾಶಮಾಡುವುದು/ ಅದೀನಗೊಳಿಸುವುದು)

---

[1] ಯಾದವ್ ವಿ. ಯು.ಪಿ. ರಾಜ್ಯ – 2011 (6) ಎಸ್.ಸಿ.ಸಿ 570

(ಸಪ್ಲಾಂಟ್) ಮಾಡಲು, ನ್ಯಾಯಾಲಯದ ಪರಿಗಣನೆಯಲ್ಲಿ ಬಳಸಲಾಗುವುದಿಲ್ಲ. ವಿಧಿ 142, ಅದು ವೈಶಾಲ್ಯದ ಅಗಲವನ್ನು ಹೊಂದಿದ್ದರೂ ಸಹ, ಒಂದು ವಿಷಯದೊಂದಿಗೆ ವ್ಯವಹರಿಸುವ ಕರಾರುವಕ್ಕಾದ ಶಾಸನಬದ್ಧ ನಿಬಂಧನೆಗಳನ್ನು ನಿರ್ಲಕ್ಷಿಸಿ ಮತ್ತು ಆ ಮೂಲಕ ನೇರವಾಗಿ ಸಾಧಿಸಲಾಗದ ಯಾವುದನ್ನಾದರೂ ಪರೋಕ್ಷವಾಗಿ ಸಾಧಿಸಲು, ಹಿಂದೆ ಯಾವುದೂ ಅಸ್ತಿತ್ವದಲ್ಲಿಲ್ಲದ, ಹೊಸ ಕಟ್ಟಡವನ್ನು ನಿರ್ಮಿಸಲು ಬರದು. ..... ವಾಸ್ತವವಾಗಿ, ಈ ಸಾಂವಿಧಾನಿಕ ಅಧಿಕಾರಗಳನ್ನು ಯಾವುದೇ ರೀತಿಯಲ್ಲಿ ಯಾವುದೇ ಶಾಸನಬದ್ಧ ನಿಬಂಧನೆಗಳಿಂದ ನಿಯಂತ್ರಿಸಲಾಗುವುದಿಲ್ಲ, ಆದರೆ ವಿಷಯದೊಂದಿಗೆ ಸ್ಪಷ್ಟವಾಗಿ ವ್ಯವಹರಿಸಲು ಶಾಸನದಲ್ಲಿ ಒದಗಿಸಲಾಗಿದ್ದರೆ, ಅದೇ ಸಮಯದಲ್ಲಿ ಈ ಅಧಿಕಾರಗಳು ತಮ್ಮ ಪ್ರಯೋಗದಲ್ಲಿ ನೇರವಾಗಿ ಕಾಯ್ದೆಯಲ್ಲಿ ವ್ಯಕ್ತಪಡಿಸಿದ ಸಂಗತಿಗಳೊಂದಿಗೆ ನೇರವಾಗಿ ಸಂಘರ್ಷಕ್ಕೆ ಬಂದಾಗ ಅವುಗಳನ್ನು ಚಲಾಯಿಸಲು ಉದ್ದೇಶಿಸಿರುವುದಿಲ್ಲ."[1]

(2). ಸುಪ್ರೀಮ್ ಕೋರ್ಟ್ ಹೇಳಿರುವಂತೆ ಅದಕ್ಕೆ ಸಂವಿಧಾನ ವಿಧಿ 32 ರಲ್ಲಿರುವ ಅಧಿಕಾರದಲ್ಲಿ ಮೂಲಭೂತ ಹಕ್ಕುಗಳನ್ನು ಮೊಟಕುಗೊಳಿಸುವ ಅಧಿಕಾರ ಇಲ್ಲ ಎಂದಿದೆ.[2]

(3). ಸುಪ್ರೀಂ ಕೋರ್ಟ್ ಸಂವಿಧಾನದ 142 ನೇ ವಿಧಿ ಅಡಿಯಲ್ಲಿ ಒಂದು ಶಾಸನದ ಮೂಲ ನಿಬಂಧನೆಗಳನ್ನು ನಿರ್ಲಕ್ಷಿಸಿ ಸಮಸ್ಯೆಗೆ ಸಂಬಂಧಿಸಿದ ಆದೇಶಗಳನ್ನು ರವಾನಿಸಲು ಸಾಧ್ಯವಿಲ್ಲ, ಇದನ್ನು ಮತ್ತೊಂದು ಶಾಸನದಲ್ಲಿ ಸೂಚಿಸಲಾದ ಯಾಂತ್ರಿಕ ವ್ಯವಸ್ಥೆಯ ಮೂಲಕ ಮಾತ್ರ ಇತ್ಯರ್ಥ ಪಡಿಸಬಹುದು.[3]

(4). ವಿಧಿ 142 ರ ಭಾಷೆ ವ್ಯಾಪಕ ಮತ್ತು ಸಮಗ್ರವಾಗಿದ್ದರೂ, ನ್ಯಾಯಾಲಯವು ನೀಡುವ ನಿರ್ದೇಶನಗಳು ಯಾವುದೇ ಶಾಸನದ ನಿರ್ದಿಷ್ಟ

---

[1] ಸುಪ್ರೀಮ್ ಕೋ.ಬಾರ್ ಅಸೋ. ವಿ. ಯು.ಓ.ಐ – 1998 (4) ಎಸ್.ಸಿ.ಸಿ 409

[2] ಪ್ರೇಮ್ ಚಂದ್ ವಿ. ಎಕ್ಸೈಜ್ ಕ. – ಎ.ಐ.ಆರ್ 1963 ಎಸ್.ಸಿ 996

[3] ರಾಜಾರಾಮ್ ವಿ. ಯು.ಓ.ಐ – 2001 (2) ಎಸ್.ಸಿ.ಸಿ 186

ನಿಬಂಧನೆಗಳಿಗೆ ವಿರುದ್ಧವಾಗಿರಬಾರದು, ಅಸಂಮಜಸವಾಗಿರಬಾರದು ಅಥವಾ ಉಲ್ಲಂಘಿಸಬಾರದು ಎಂದು ಗಮನಿಸಲಾಗಿದೆ.[1]

(5). ವಿಧಿ 142 ರಲ್ಲಿ ಪಾರ್ಟಿಗಳ ಮಧ್ಯೆ ನ್ಯಾಯ ಪ್ರಧಾನ ಮಾಡಬೇಕೆ ಹೊರತು ಅದು ಸಂಬಂದಿಸಿದ ಶಾಸನದ ನಿಯಮಗಳನ್ನು ಕಡೆಗಣಿಸಬಾರದು.[2]

(6). ಅನ್ವಯವಾಗುವ ಮೂಲ ಕಾನೂನನ್ನು ಬದಲಿಸುವುದಕ್ಕೆ ಅಥವಾ ವಿಷಯದೊಂದಿಗೆ ವ್ಯವಹರಿಸುವ ಕರಾರುವಕ್ಕಾದ ಶಾಸನಬದ್ಧ ನಿಬಂಧನೆಗಳನ್ನು ನಿರ್ಲಕ್ಷಿಸುವುದಕ್ಕೆ, ಸಂವಿಧಾನದ 142 ನೇ ವಿಧಿ ಅನ್ವಯ ಸುಪ್ರೀಂ ಕೋರ್ಟ್ ಯಾವುದೇ ಆದೇಶವನ್ನು ರವಾನಿಸುವುದಿಲ್ಲ, ಅದೇ ಸಮಯದಲ್ಲಿ ಈ ಸಾಂವಿಧಾನಿಕ ಅಧಿಕಾರಗಳನ್ನು ಯಾವುದೇ ರೀತಿಯಲ್ಲಿ ಯಾವುದೇ ಶಾಸನಬದ್ಧ ನಿಬಂಧನೆಗಳಿಂದ ನಿಯಂತ್ರಿಸಲಾಗುವುದಿಲ್ಲ.[3]

(7). ಸಂವಿಧಾನದ 142 ನೇ ವಿಧಿಯನ್ನು ಸಹಾನುಭೂತಿಯ ಆಧಾರದ ಮೇಲೆ ಮತ್ತು ಶಾಸನದೊಂದಿಗೆ ಸಂಘರ್ಷದಲ್ಲಿ ಇದನ್ನು ಬಳಸಲಾಗುವುದಿಲ್ಲ.[4]

(8). ಸಂವಿಧಾನದ 142 ನೇ ವಿಧಿ, ".......ಇದು ಕಾನೂನಿನ ಮೇಲೆ ಸಮಾನತೆಗೆ ಆದ್ಯತೆ ನೀಡುವ ಶಕ್ತಿ. ಇದು ಕಾನೂನಿನ ಕಟ್ಟುನಿಟ್ಟಿನ ಕಠಿಣತೆಗೆ ವಿರುದ್ಧವಾಗಿ ನ್ಯಾಯ–ಆಧಾರಿತ ವಿಧಾನವಾಗಿದೆ. ನ್ಯಾಯಾಲಯವು ಹೊರಡಿಸಿದ ನಿರ್ದೇಶನಗಳನ್ನು ಸಾಮಾನ್ಯವಾಗಿ, ಪರಿಹಾರವನ್ನು ರೂಪಿಸುವ ಸ್ವರೂಪದಲ್ಲಿ ಒಂದಾದರೆ ಮತ್ತು ಇನ್ನೊಂದನ್ನು ಕಾನೂನಿನ ಘೋಷಣೆಯಾಗಿ ವರ್ಗೀಕರಿಸಬಹುದು. ಸಂವಿಧಾನದ 141 ನೇ ವಿಧಿಯಲ್ಲಿ ಆಲೋಚಿಸಿದಂತೆ "ಕಾನೂನಿನ ಘೋಷಣೆ": ಮಾತಿನಿಂದ ತಿಳಿಯಪಡಿಸುವುದು ಅಥವಾ ಅವಶ್ಯವಾಗಿ ಅರ್ಥವಾಗಿಸುವಿಕೆಯಿಂದ ನೆಲದ ಅತ್ಯುನ್ನತ ನ್ಯಾಯಾಲಯದಿಂದ ಸೂಚಿಸಲ್ಪಟ್ಟಿದೆ ..... ಈ ನ್ಯಾಯಾಲಯವು ಸಂವಿಧಾನದ

---

[1] ಎ.ಆರ್.ಅಂತುಳೆ ವಿ. ಆರ್.ಎಸ್.ನಾಯಕ್ – 1988(2) ಎಸ್.ಸಿ.ಸಿ 602

[2] ಬೊಂಕ್ಯ ವಿ. ಮಹಾರಾಷ್ಟ್ರ ರಾಜ್ಯ – 1995 (6) ಎಸ್.ಸಿ.ಸಿ 447

[3] ಲಕ್ಷ್ಮೀದಾಸ್ ವಿ. ಬೆಹ್ರೋಸ್ – 2009 (10) ಎಸ್.ಸಿ.ಸಿ 425

[4] ಭಾಸ್ಕರರಾವ್ ವಿ. ಸಿಬಿ.ಐ – 2011 (10) ಎಸ್.ಸಿ.ಸಿ 259

142 ನೇ ವಿಧಿ ಪರಿಧಿಯನ್ನು ವಿಸ್ತರಿಸಿದೆ ಇದನ್ನು ಸಂವಿಧಾನದ 141 ನೇ ವಿಧಿ ವ್ಯಾಪ್ತಿಯಿಂದ ಪ್ರಶ್ನಿಸುವುದನ್ನು ಹೊರಗಿಡುವುದು ಮತ್ತು ಅದನ್ನು ನ್ಯಾಯಾಲಯದ ನಿರ್ದೇಶನ ಎಂದು ಘೋಷಿಸುವ ಮೂಲಕ ಪ್ರಕರಣದ ಸಂಗತಿಗಳು ಮತ್ತು ಸನ್ನಿವೇಶಗಳಲ್ಲಿನ ವಿಶಿಷ್ಟತೆಯೊಂದಿಗೆ ಅದರ ಮೈಬಣ್ಣವನ್ನು ಬದಲಾಯಿಸುತ್ತದೆ.[1]

(9). ನ್ಯಾಯಾಲಯಗಳ ಪ್ರಾಥಮಿಕ ಕಾರ್ಯವೆಂದರೆ ಕಾನೂನುಗಳನ್ನು ರಚಿಸಿದವರ ಇಚ್ಛೆಯ ಅನುಗುಣವಾಗಿ ವ್ಯಾಖ್ಯಾನಿಸುವುದು ಮತ್ತು ಅನ್ವಯಿಸುವುದು ಮತ್ತು ನೀತಿ ನಿರೂಪಣೆಯ ಶಾಸಕಾಂಗ ಕ್ಷೇತ್ರಕ್ಕೆ ಅತಿಕ್ರಮಿಸದಿರುವುದು.[2]

(10). ಕಾನೂನಿನೊಂದಿಗೆ ನೇರವಾಗಿ ಸಂಘರ್ಷದಲ್ಲಿರುವ ಯಾವುದೇ ನಿರ್ದೇಶನಗಳನ್ನು ನೀಡಲಾಗುವುದಿಲ್ಲ ಎಂದು ನ್ಯಾಯಾಲಯವು ಅಭಿಪ್ರಾಯಪಟ್ಟಿದೆ.[3]

(11). "ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡದ ಸದಸ್ಯರನ್ನು ಇತರರಿಗೆ ಮತ್ತು ನಿರ್ದಿಷ್ಟವಾಗಿ ಮೇಲ್ಜಾತಿ / ಸಾಮಾನ್ಯ ವರ್ಗ ಎಂದು ಕರೆಯಲ್ಪಡುವವರಿಗೆ ಅನಾನುಕೂಲಕರ ಸ್ಥಾನದಲ್ಲಿ ಇಡುವುದು ಶಾಸಕಾಂಗಕ್ಕೆ ಮುಕ್ತವಾಗಿಲ್ಲ. ಹೀಗಾಗಿ, ನಾವು ಹಿನ್ನೆಲೆ ದೃಷ್ಟಿಕೋನಕ್ಕೆ ಇಣುಕಿದಾಗ ಅವರನ್ನು ಹೆಚ್ಚು ತಾರತಮ್ಯ ಮಾಡಲಾಗುವುದಿಲ್ಲ. ಯಾವ ಶಾಸಕಾಂಗವು ನ್ಯಾಯಸಮ್ಮತವಾಗಿ ಮಾಡಲು ಸಾಧ್ಯವಿಲ್ಲವೋ, ಅಂತದ್ದನ್ನು ನ್ಯಾಯಾಲಯಗಳಿಂದ ವ್ಯಾಖ್ಯಾನಿಸುವ ಪ್ರಕ್ರಿಯೆಯಿಂದ ಮಾಡಲಾಗುವುದಿಲ್ಲ."[4]

**ಜಾತಿ ಜಾತಿಯ ಪದನಾಮಗಳಲ್ಲೇ ವ್ಯತ್ಯಾಸವಿದೆ ಅದನ್ನು ಗಮನಿಸಬೇಕು**

---

[1] ಪಂಜಾಬ್ ರಾಜ್ಯ ವಿ. ರಫೀಕ್ – 2014 (8) ಎಸ್.ಸಿ.ಸಿ 883

[2] ಬಚ್ಚನ್ ಸಿಂಗ್ ವಿ. ಪಂಜಾಬ್ ರಾಜ್ಯ – 1980 (2) ಎಸ್.ಸಿ.ಸಿ 684

[3] ಸುಭಾಷ್ ವಿ. ಮಹಾರಾಷ್ಟ್ರ ರಾಜ್ಯ – 2018 (6) ಎಸ್.ಸಿ.ಸಿ 454

[4] ಯು.ಓ.ಐ ವಿ. ಮಹಾರಾಷ್ಟ್ರ ರಾಜ್ಯ – ಮನು/ ಎಸ್.ಸಿ/ 1351/ 2019

ಸುಪ್ರೀಮ್ ಕೋರ್ಟ್ ಮುಂದೆ ಬಂದ ಪ್ರಕರಣದಲ್ಲಿ ಈ ಬಗ್ಗೆ ಸ್ಪಷ್ಟ ವ್ಯಾಖ್ಯಾನವಿದೆ. "ಈ ಸಂದರ್ಭದಲ್ಲಿ "ಲೋಹರಾ / ಲೋಹ್ರಾ" ಎಂಬ ಜಾತಿಯನ್ನು ಬಿಹಾರ ರಾಜ್ಯದಲ್ಲಿ ಪರಿಶಿಷ್ಟ ಪಂಗಡ ಎಂದು ಉಲ್ಲೇಖಿಸಲಾಗಿದೆ. ಹಿಂದಿ ಭಾಷಾಂತರವು ಹೇಳಿದ ಜಾತಿಯನ್ನು "ಲೋಹರ್" ಎಂದು ಬಣ್ಣಿಸಿದೆ. ಬಿಹಾರ ರಾಜ್ಯದ ಇತರ ಹಿಂದುಳಿದ ಜಾತಿ ಎಂದು ಪರಿಗಣಿಸಲ್ಪಟ್ಟ "ಲೋಹರ್" ಸಮುದಾಯಕ್ಕೆ (ಕಮ್ಮಾರ) ಸೇರಿದ ಆ ರಿಟ್ ಅರ್ಜಿಯ ಅರ್ಜಿದಾರರು ಹಿಂದಿಯಲ್ಲಿ ಅಧಿಕೃತ ಅನುವಾದದ ಆಧಾರದ ಮೇಲೆ ಪರಿಶಿಷ್ಟ ಪಂಗಡದ ಪ್ರಯೋಜನವನ್ನು ಪಡೆಯಲು ಕ್ಲೇಮು ಮಾಡಿದ್ದರು. ಶ್ರೀ ಎಚ್.ಎಸ್. ಹಿಸ್ಲೆ ರವರ ಬಂಗಾಳದ ಬುಡಕಟ್ಟು ಮತ್ತು ಜಾತಿಯ ಪುಸ್ತಕವನ್ನು ಉಲ್ಲೇಖಿಸಿ, 10 ಮತ್ತು 11 ಪ್ಯಾರಾಗಳಲ್ಲಿ ಈ ಕೆಳಗಿನವುಗಳನ್ನು ಹೇಳಲಾಗಿದೆ: – "10. ಪ್ರಖ್ಯಾತ ಸಮಾಜಶಾಸ್ತ್ರಜ್ಞ ಎಚ್.ಎಸ್. ಹಿಸ್ಲೆ ಅವರು ಸಂಪುಟ II ರಲ್ಲಿ ಬರೆದ ಬಂಗಾಳದ ಬುಡಕಟ್ಟು ಮತ್ತು ಜಾತಿಗಳು ದ್ದರಲ್ಲಿ, ಲೋಹರ್ ಅವರನ್ನು ಬಿಹಾರ, ಚೋಟಾ ನಾಗ್ಪುರ ಮತ್ತು ಪಶ್ಚಿಮ ಬಂಗಾಳದ ಕಮ್ಮಾರ ಎಂದು ವಿವರಿಸಲಾಗಿದೆ. ಅವರು ಹೀಗೆ ಹೀಗೆ ಉಲ್ಲೇಖಿಸಿದ್ದಾರೆ: "ಲೋಹಾರ್, ಬಿಹಾರದ ಬಾರ್ಹಿಯ ಉಪಜಾತಿಗಳಂತೆ, ಕಬ್ಬಿಣದಲ್ಲಿ ಮಾತ್ರ ಕೆಲಸ ಮಾಡುತ್ತಾರೆ. ಆದಾಗ್ಯೂ, ಅವರು ಭಿನ್ನರಾಗಿದ್ದಾರೆ ಮತ್ತು ಲೋಹ್ರಾ ಜಾತಿಯೊಂದಿಗೆ ವಿವಾಹವಾಗುವುದಿಲ್ಲ. ನಂತರದವರು ಬಹುಶಃ ದ್ರಾವಿಡ ಮೂಲದವರಾಗಿದ್ದರೆ, ಮೊದಲಿಗರು ಔದ್ಯೋಗಿಕ ಗುಂಪಾಗಿ ಕಂಡುಬರುತ್ತಾರೆ ಲೋಹಾರ್, ಬೆಹಾರ್‌ನಲ್ಲಿ ಕಮರ್‌ಗೆ ಸಮಾನಾರ್ಥಕ; ಬಿಹಾರ್‌ನ ಗೋಲಾಸ್‌ನ ನಾಮುಲಿಯಾ ಅಥವಾ ಮಜ್ರಾತ್ ಉಪಜಾತಿಯ ಮುಲ್ ಅಥವಾ ವಿಭಾಗ; ಡಾರ್ಜಿಲಿಂಗ್‌ನಲ್ಲಿ ಕಮಿಸ್‌ನ ಒಂದು ವಿಭಾಗ." "ಲೋಹರ್ಸ್ ಆಫ್ ಬಿಹಾರ್" ಗೆ ಸಂಬಂಧಿಸಿದಂತೆ, ಲೇಖಕ ಹೇಳುತ್ತಾರೆ: – "ಬಿಹಾರಿನಲ್ಲಿ ಜಾತಿ ಕಮ್ಮಾರರು ಮತ್ತು ಬಡಗಿಗಳಾಗಿ ಕೆಲಸ ಮಾಡುತ್ತಾರೆ, ಆದರೆ ಅನೇಕರು ಕೃಷಿಗೆ ತೆಗೆದುಕೊಂಡಿದ್ದಾರೆ. ಅವರು ತಮ್ಮ ವಸ್ತುಗಳನ್ನು ಹಂದಿಗಳು ಅಥವಾ ಕಬ್ಬಿಣದ ಸರಳುಗಳ ರೂಪದಲ್ಲಿ ಖರೀದಿಸುತ್ತಾರೆ. ಕಬ್ಬಿಣದ ಕರಗಿಸುವಿಕೆಯು ಚೋಟಾ ನಾಗ್ಪುರದ ಲೋಹರ್‌ಗಳಿಗೆ ಸೀಮಿತವಾಗಿದೆ ಮತ್ತು ಇದು ಕಡಿಮೆ

ಗೌರವಯುತವಾಗಿದೆ ಇತರ ಜನರು ಕರಗಿದ ಕಬ್ಬಿಣವನ್ನು ಕೆಲಸ ಮಾಡುವುದಕ್ಕಿಂತ ಉದ್ಯಮದ ರೂಪ. ಕರಗಿದ. ಸಂತಾಲ್ ಪರ್ಗನಾಸ್ ಲೋಹಾರ್ಸ್ ಆಗಾಗ್ಗೆ ತಮ್ಮಲ್ಲೇ ವ್ಯವಸಾಯ ನಿರತರಾಗಿರುತ್ತಾರೆ, ಆದರೆ ಮಹಿಳೆಯರು ಮನೆ ಕೆಲಸದಲ್ಲಿ ನಿರತರಾಗಿರುತ್ತಾರೆ......" 'ಲೋಹ್ರಾ' ಮತ್ತು 'ಲೋಹರಸ್' ನ ಇತರ ಉಪಜಾತಿಗಳನ್ನು ಲೇಖಕರು ಈ ಕೆಳಗಿನಂತೆ ಹೇಳಿದ್ದಾರೆ: – "ಲೋಹರಾ, ಚೋಟಾ ನಾಗ್ಪುರದ ಮುಂಡಾಸ್ನ ಒಂದು ಭಾಗ. ಲೋಹಾರ್ ಅಗಾರಿಯಾ, ಚೋಟಾ ನಾಗ್ಪುರದ ಅಗಾರಿಯಸ್ನ ಉಪ-ಬುಡಕಟ್ಟು. ಲೋಹರತೇಂಗಿ, ಪಶ್ಚಿಮ, ಬಂಗಾಳದ ರಾಜ್ವಾರ್ಗಳ ವಿಭಾಗ. ಲೋಹಾರ್ಬನ್ಸ್ ............. ಚೋಟಾ ನಾಗ್ಪುರದ ಗಾಸಿಸ್ ನ ಒಂದು ಭಾಗ ... ಲೋಹ್ರಾ, ಅಸುರ ಮತ್ತು ಲೋಹರ್‌ಗೆ ಸಮಾನಾರ್ಥಕ. .....ಲೋಹ್ರಾ, ಅಸುರ್, ಚೋಟಾ ನಾಗ್ಪುರದ ಅಸುರರ ಉಪ-ಬುಡಕಟ್ಟು." 11. `ಲೋಹ್ರಾ 'ಅಥವಾ' ಲೋಹರಸ್ 'ಬಿಹಾರದ' ಲೋಹರ್ 'ನಿಂದ' ಲೋಹರ್ಸ್ 'ಎಂದು ಭಿನ್ನವಾಗಿದೆ, ಇಲ್ಲಿ ಗಮನಿಸಿದಂತೆ' ಕೊಯರಿಸ್ 'ಮತ್ತು' ಕುರ್ಮಿಸ್ 'ಗಳೊಂದಿಗೆ ಸ್ಥಾನ ಪಡೆದಿದ್ದರೆ,' ಲೋಹ್ರಾ 'ಅಥವಾ' ಲೋಹರಾಸ್ 'ಕೇವಲ ಉಪಜಾತಿಗಳು, ಚೋಟಾ ನಾಗ್ಪುರದ ಮುಂಡಾಸ್ ಅಥವಾ ಪರಿಶಿಷ್ಟ ಪಂಗಡದ ಅಸುರರ ಉಪ-ಬುಡಕಟ್ಟು ಜನಾಂಗದವರು." ........... ಈ ಪ್ರಕರಣದಲ್ಲಿ ಸುಪ್ರೀಮ್ ಕೋರ್ಟ್ "ಲೋಹರ್" ಜಾತಿಯನ್ನು ಪರಿಶಿಷ್ಟ ಪಂಗಡ ಎಂದು ಸೇರಿಸಲಾಗಿಲ್ಲ ಮತ್ತು ಅನುವಾದಿತ ಆವೃತ್ತಿಯಲ್ಲಿ ಮಾತ್ರ ಇದನ್ನು "ಲೋಹರ್" ಎಂದು ತಪ್ಪಾಗಿ ಉಲ್ಲೇಖಿಸಲಾಗಿದೆ. ಸಂಸತ್ತು ಇಂಗ್ಲಿಷ್ ಭಾಷೆಯಲ್ಲಿ ಜಾರಿಗೆ ತಂದಿರುವ ಕಾಯ್ದೆ ಮತ್ತು ಷೆಡ್ಯೂಲ್ ಅಧಿಕೃತ ಪಠ್ಯವಾಗಿದೆ ಎಂದು ಅಪೆಕ್ಸ್ ಕೋರ್ಟ್ ಮತ್ತಷ್ಟು ಅಭಿಪ್ರಾಯಪಟ್ಟಿದೆ.[1]

**ಕರ್ನಾಟಕದಲ್ಲಿ ಜಾತಿ ಪಟ್ಟಿಯ ಚರಿತ್ರೆ ಸುಪ್ರೀಮ್ ವಿವರಿಸಿದಂತೆ**

ಕರ್ನಾಟಕದಲ್ಲಿ ಜಾತಿ ವ್ಯವಸ್ಥೆಯ ಚರಿತ್ರೆಯ ಬಗ್ಗೆ ಸಂಕ್ಷಿಪ್ತವಾಗಿ ಬೆಳಕನ್ನು ಚೆಲ್ಲಿರುವ ಸುಪ್ರೀಮ್ ಕೋರ್ಟ್ ಸಂವಿಧಾನ ಪೀಠದ ತೀರ್ಪಿನ

---

[1] ನಿತ್ಯಾನಂದ ಶರ್ಮ ವಿ. ಬಿಹಾರ ರಾಜ್ಯ – 1996 (3) ಎಸ್.ಸಿ.ಸಿ 576

ಪ್ಯಾರಾ 95 ರಿಂದ ಹೀಗೆ ವಿವರಿಸಲಾಗಿದೆ.[1] ಹಾಲಿ ಕರ್ನಾಟಕ ರಾಜ್ಯದಲ್ಲಿನ ಹಿಂದಿನ ಮೈಸೂರು ಸಂಸ್ಥಾನ ಬಹಳ ಹಿಂದೆಯೇ ಬ್ಯಾಕ್ವರ್ಡ್ ಕ್ಲಾಸಸ್ ರವರಿಗೆ (ಹಿಂದುಳಿದ ವರ್ಗಗಳಿಗೆ) ಸಾರ್ವಜನಿಕ ಸೇವೆಯಲ್ಲಿ ಮೀಸಲಾತಿಯನ್ನು ಅಳವಡಿಸಲಾಗಿತ್ತು. 1918 ರಲ್ಲಿ ಮೈಸೂರು ಮಹಾರಾಜರು, ಮೈಸೂರು ಹೈಕೋರ್ಟಿನ ಅಂದಿನ ಮುಖ್ಯ ನ್ಯಾಯಮೂರ್ತಿ ಸರ್ ಲೆಸ್ಲೀ ಸಿ. ಮಿಲ್ಲರ್ ರವರ ಅಧ್ಯಕ್ಷತೆಯಲ್ಲಿ ಕಮಿಟಿಯೊಂದನ್ನು ನೇಮಿಸಿತು. ಸಂವಿಧಾನ 335 ನೇ ವಿಧಿ ಜಾರಿ ಮಾಡುವ ಮೂರು ದಶಕಗಳ ಮುಂಚೆ ಅಂತಹ ಮಾರ್ಗದರ್ಶನ (ಆಡಳಿತ ದಕ್ಷತೆಯನ್ನು ಕಾಪಾಡಿಕೊಂಡು ಬರುವುದಕ್ಕೆ ಸುಸಂಗತವಾಗಿರುವಂತೆ) ಮೈಸೂರು ರಾಜ್ಯದಲ್ಲಿ ಅಳವಡಿಸಲಾಗಿತ್ತು. ಸದರಿ ಸಮಿತಿ 1921 ರಲ್ಲಿ ವರದಿಯನ್ನು ಸಲ್ಲಿಸಿ ಬ್ರಾಹ್ಮಣರನ್ನು ಹೊರತುಪಡಿಸಿ ಮಿಕ್ಕ ಎಲ್ಲಾ ಸಮುದಾಯದವರನ್ನು ಹಿಂದುಳಿದ ಸಮುದಾಯಗಳೆಂದು ಪರಿಗಣಿಸಿ ಸೂಕ್ತ ಶಿಫಾರಸ್ಸುಗಳನ್ನು ಮಾಡಿತ್ತು. ಆಗ ಸಮಿತಿ ವರದಿಯಂತೆ ಮಾಡಲಾಗಿದ್ದ ಸರ್ಕಾರಿ ಆದೇಶ 1956 ರವರೆಗೆ ಜಾರಿಯಲ್ಲಿ ಇತ್ತು. ರಾಜ್ಯ ಏಕೀಕರಣವಾಗುವವರೆಗೆ ಜಾರಿಯಲ್ಲಿ ಇತ್ತು. ಆಗ ಐದು ವಿವಿದ ಪ್ರಾಂತ್ಯಗಳಲ್ಲಿ ಹಿಂದುಳಿದ ಸಮುದಾಯಗಳ ವಿವಿದ ಪಟ್ಟಿ ಚಾಲ್ತಿಯಲ್ಲಿ ಇದದ್ದು ರಾಜ್ಯ ಏಕೀಕರಣದ ನಂತರವೂ ಜಾರಿಯಲ್ಲಿ ಇತ್ತು. ಸಂವಿಧಾನ ವಿಧಿ 15 (4) ರಲ್ಲಿ ರಾಜ್ಯ ಸರ್ಕಾರಕ್ಕೆ ಪ್ರದತ್ತವಾಗಿರುವ ಅಧಿಕಾರವಾದ ಸಾಮಾಜಿಕ ಮತ್ತು ಶೈಕ್ಷಣಿಕವಾಗಿ ಹಿಂದುಳಿದ ವರ್ಗಗಳ ನಾಗರೀಕರಿಗೆ ಅಥವ ಎಸ್.ಸಿ ಮತ್ತು ಎಸ್.ಟಿ ರವರಿಗೆ ರಾಜ್ಯವು ವಿಶೇಷವಾಗಿ ಅವರ ಅಭಿವೃದ್ಧಿಗೆ ಒದಗಿಸುವುದನ್ನು ಮಾಡುವ ನಿಟ್ಟಿನಲ್ಲಿ ವಿಧಿ 15(4) ರಲ್ಲಿ ಹಿಂದುಳಿದ ವರ್ಗಗಳ ಪಟ್ಟಿಯನ್ನು 1959 ರಲ್ಲಿ ಹೊರಡಿಸಲಾಗಿತ್ತು. ಇದರಲ್ಲಿ ಬ್ರಾಹ್ಮಣರು, ಬನಿಯಾಸ್ ಮತ್ತು ಕಾಯಸ್ತಾಸ್ ರವರನ್ನು ಹೊರತುಪಡಿಸಿ ಬೇರೆ ಎಲ್ಲಾ ಜಾತಿಯವರನ್ನು ಹಿಂದುಳಿದ ವರ್ಗಗಳ ಪಟ್ಟಿಯಲ್ಲಿ ಸೇರಿಸಲಾಗಿತ್ತು. ಆಗ ಇದನ್ನು ಮೈಸೂರು ಹೈಕೋರ್ಟಿನಲ್ಲಿ[2] ಪ್ರಶ್ನಿಸಲಾಗಿತ್ತು. ಇಂತಹ ಪಟ್ಟಿಯನ್ನು ಕೋರ್ಟ್ ರದ್ದು

---

[1] ವಸಂತ್ ಕುಮಾರ್ ವಿ. ಕರ್ನಾಟಕ ರಾಜ್ಯ – ಎ.ಐ.ಆರ್ 1985 ಎಸ್.ಸಿ 1495

[2] ರಾಮಕೃಷ್ಣಸಿಂಗ್ ವಿ. ಮೈಸೂರು ರಾಜ್ಯ – ಎ.ಐ.ಆರ್ 1960 ಮೈಸೂರು 338

ಪಡಿಸಿತ್ತು. 95% ಹಿಂದುಗಳನ್ನು ಒಳಗೊಂಡ ಈ ಪಟ್ಟಿಯನ್ನು ಮತ್ತು ಪಾರ್ಸಿ ಹಾಗೂ ಆಂಗ್ಲೋ ಇಂಡಿಯನ್ಸ್ ಹೊರತು ಪಡಿಸಿ ಹಿಂದುಯೇತರನ್ನು ಹಿಂದುಳಿದ ವರ್ಗದ ಪಟ್ಟಿಯಲ್ಲಿ ಸೇರಿಸಲಾಗಿತ್ತು. ಜಾತಿ ಆಧಾರದಲ್ಲಿ ಹಿಂದುಳಿದಿರುವಿಕೆಯನ್ನು ಗುರುತಿಸಲಾಗದು ಎಂಬ ವಾದವನ್ನು ತಳ್ಳಿಹಾಕಲಾಗಿತ್ತು. ಈ ತೀರ್ಪಿನ ನಂತರ 1960 ರಲ್ಲಿ ರಾಜ್ಯ ಸರ್ಕಾರ ಡಾ. ಆರ್. ನಾಗನ್ ಗೌಡ ಅಧ್ಯಕ್ಷತೆಯಲ್ಲಿ ಸಮಿತಿಯನ್ನು ರಚಿಸಿತು. ಸಮಿತಿಯ ವರದಿಯ ನಂತರ ಸಂವಿಧಾನ ವಿಧಿ 15(4) ರಲ್ಲಿ 81 ವರ್ಗಗಳನ್ನು ಹಿಂದುಳಿದ ವರ್ಗವೆಂದು 135 ವರ್ಗಗಳನ್ನು ಅತೀ ಹಿಂದುಳಿದವರೆಂದು ಗುರುತಿಸಲಾಗಿತ್ತು. ಹಿಂದುಳಿದ ವರ್ಗ, ಅತೀ ಹಿಂದುಳಿದ ವರ್ಗ, ಎಸ್.ಸಿ, ಎಸ್.ಟಿ ರವರಿಗೆ ಪ್ರತ್ಯೇಕ ಅನುಪಾತದಲ್ಲಿ ಒಟ್ಟು 48% ಮೀಸಲಾತಿ ನಿಗದಿಪಡಿಸಲಾಗಿತ್ತು. 1962 ರಲ್ಲಿ ಪ್ರತ್ಯೇಕ ಆದೇಶ ಹೊರಡಿಸಿ 68% ಮೀಸಲಾತಿ ನೀಡಲಾಗಿತ್ತು.

ಇದನ್ನು ಸುಪ್ರೀಮ್ ಕೋರ್ಟಿನ ಮುಂದೆ ಪ್ರಶ್ನಿಸಲಾಗಿತ್ತು.[1] ಆ ಕೇಸಿನ ತೀರ್ಪಿನಲ್ಲಿ ಸಂವಿಧಾನ ವಿಧಿ 15(4) ರಲ್ಲಿ ಸಾಮಾಜಿಕ ಮತ್ತು ಶೈಕ್ಷಣಿಕ ಹಿಂದುಳಿದಿರುವಿಕೆಯನ್ನು ಎರಡರಲ್ಲೂ ಹಿಂದುಳಿದಿರುವಿಕೆ ಎಂದೂ, ಸಾಮಾಜಿಕ ಅಥವ ಶೈಕ್ಷಣಿಕ ರೀತಿಯಲ್ಲಿ ಅಲ್ಲವೆಂದು ವ್ಯಾಖ್ಯಾನಿಸಲಾಗಿತ್ತು, ವಿಧಿ 15 (4) ಅನ್ವಯಿಸುವ ನಾಗರೀಕರನ್ನು ವರ್ಗವನ್ನಾಗಿ ಗುರುತಿಸಲಾಗಿದೆ ಹೊರತು ನಾಗರೀಕರ ಜಾತಿಯಿಂದಾಗಿ ಅಲ್ಲ ಎಂದು ವ್ಯಾಖ್ಯಾನಿಸಲಾಗಿತ್ತು. ನಿಘಂಟು ವ್ಯಾಖ್ಯಾನದಂತೆ 'ವರ್ಗ' ಎಂದರೆ ಸಮಾಜವನ್ನು ಸ್ಥಿತಿ, ಶ್ರೇಣಿ ಅಥವ ಜಾತಿ ಆಧಾರದಲ್ಲಿ ವಿಭಾಗಿಸುವುದು ಎಂದು ತೋರುತ್ತದೆ. ಹಿಂದೂ ಸಾಮಾಜಿಕ ರಚನೆಯಲ್ಲಿ ಜಾತಿಯು, ದುರದೃಷ್ಟವಶಾತ್ ಪ್ರಜೆಯ ಸ್ಥಿತಿ ನಿಶ್ಚಯಿಸಲು ಮುಖ್ಯವಾದ ಪಾತ್ರವನ್ನು ವಹಿಸುತ್ತದೆ. ಆದರೂ ಸಮಾಜಶಾಸ್ತ್ರಜ್ಞರು ಮತ್ತು ವೈದಿಕವಿದ್ವಾಂಸರ ಪ್ರಕಾರ, ಜಾತಿ ವ್ಯವಸ್ಥೆಯಲ್ಲಿ ಮೂಲತಃ, ಔದ್ಯೋಗಿಕ ಅಥವಾ ಕ್ರಿಯಾತ್ಮಕ ಆಧಾರದಲ್ಲಿ ಆರಂಭವಾಯಿತು

[1] ಬಾಲಾಜಿ ವಿ. ಮೈಸೂರು ರಾಜ್ಯ – ಮನು/ಎಸ್.ಸಿ/0080/1962

ಎಂದು ಮೂಡಬಹುದು, ಕಾಲಕ್ರಮೇಣ, ಇದು ಗಡುಸಾದ ಮತ್ತು ಜಗ್ಗದಂತಾಯಿತು. ಇತಿಹಾಸದ ಬೆಳವಣಿಗೆಯಲ್ಲಿ ಜಾತಿಯ ಮೂಲ ಕ್ರಿಯಾತ್ಮಕ ಮತ್ತು ಔದ್ಯೋಗಿಕ ಆಧಾರದ ನಂತರ ಧಾರ್ಮಿಕ ಪರಿಕಲ್ಪನೆಯ ಆಧಾರಿತವಾಗಿ ಶುದ್ಧತೆಯ ಪರಿಗಣನೆಗಳ ಹೊರೆಯಿಂದ ಮತ್ತು ಆ ಹಟಮಾರಿ ಧೋರಣೆಯ ಮತ್ತು ಬಿಗಿತ ಪರಿಚಯಿಸಿದ ಅದರಲ್ಲಿನ ಶಾಖೋಪಶಾಖೆಗಳಾಗುವುದಕ್ಕೆ ಕಾರಣವಾಯಿತು ಜಾತಿ ವ್ಯವಸ್ಥೆ. ಈ ಕೃತಕ ಬೆಳವಣಿಗೆಯು ಅನಿವಾರ್ಯವಾಗಿ ಶ್ರೇಷ್ಠತೆಯ ಮತ್ತು ಕೀಳರಿಮೆಯ ಭಾವನೆ ರಚಿಸಲು ಮತ್ತು ಕಿರಿದಾದ ಜಾತಿ ನಿಷ್ಠೆಯ ಪ್ರವೃತ್ತಿಯನ್ನು ಬೆಳೆಸಿತು. ಆದ್ದರಿಂದ ಯಾವುದೇ ವರ್ಗದ ನಾಗರೀಕರು ಹಿಂದುಳಿದಿದ್ದಾರೆ ಇಲ್ಲವೆ ಎಂಬ ಪ್ರಶ್ನೆ ಬಗ್ಗೆ ವ್ಯವಹರಿಸುವಾಗ ಅಂತಹ ಗುಂಪಿನ ನಾಗರೀಕರ ಜಾತಿಯನ್ನು ಪರಿಗಣಿಸುವುದು ಅಸಂಬದ್ಧವಾಗದೆ ಇರಬಹುದು. ಯಾವುದಾದರೂ ಸೌಲಭ್ಯವನ್ನು ನಾಗರೀಕರ ವರ್ಗಕ್ಕೆ ನೀಡಲಾಗಿದೆ ಎಂದರೆ ಅದು ವ್ಯಕ್ತಿಗೆ ನೀಡಲಾಗಿದೆ ಎಂದಲ್ಲ. ಗುಂಪಿನ ಜಾತಿಯು ಮುಖ್ಯವಾದರೂ ಅದನ್ನು ವೈಭವಿಕರಿಸಬಾರದು. ನಾಗರೀಕರ ವರ್ಗಗಳನ್ನು ಹಿಂದುಳಿದಿರುವಿಕೆ ಗುರುತಿಸಲು ನಾಗರೀಕನ ಜಾತಿ ಮೂಲ ಆಧಾರವಾದರೆ, ಅದು ಬಹುಷಃ ಯಾವಾಗಲೂ ತಾರ್ಕಿಕವಾಗದು ಮತ್ತು ಜಾತಿಗಳನ್ನು ಮುಂದುವರಿಸುವಂತಹ ಘೋರತೆಯನ್ನು ಅದು ಒಳಗೊಂಡಿರಬಹುದು.

ಜಾತಿಯನ್ನು ಆಧಾರವಾಗಿಸಲು ಎಲ್ಲಾ ವರ್ಗಗಳಿಗೂ ಸಾಧ್ಯವಾಗದು, ಮುಸ್ಲಿಮರು, ಕ್ರೈಸ್ತರು, ಜೈನರು, ಲಿಂಗಾಯಿತರೂ ಕೂಡ ಜಾತಿ ಪದ್ಧತಿಯನ್ನು ಒಪ್ಪರು, ಅದರ ಆಧಾರದಲ್ಲಿ ಅವರ ಹಿಂದುಳಿದಿರುವಿಕೆ ಪರಿಗಣಿಸಲಾಗದು. ಸಾಮಾಜಿಕ ಹಿಂದುಳಿದಿರುವಿಕೆಯು ಬಡತನದಿಂದ ಆಗಿರುವುದಾಗಿರುತ್ತದೆ. ಜಾತಿ ಮತ್ತು ಬಡತನ ಎರಡೂ ನಾಗರೀಕನ ಹಿಂದುಳಿದಿರುವಿಕೆ ನಿರ್ದರಿಸುವಲ್ಲಿ ಪ್ರಾಮುಖ್ಯತೆ ವಹಿಸುತ್ತದೆ. ಇದರಲ್ಲಿ ನಾಗರೀಕ ವರ್ಗಗಳ ವೃತ್ತಿಯೂ ಸಾಮಾಜಿಕ ಹಿಂದುಳಿದಿರುವಿಕೆಗೆ ಪ್ರಾಮುಖ್ಯತೆ ವಹಿಸುತ್ತದೆ. ಕೆಲವು ವೃತ್ತಿಗಳನ್ನು ಕೀಳರಿಮೆಯಿಂದ ನೋಡಲಾಗುತ್ತದೆ ಅಂತಹ ವೃತ್ತಿಯನ್ನು ಪಾಲಿಸುವವರು ಸಾಮಾಜಿಕವಾಗಿ

ಹಿಂದುಳಿದವರಾಗುತ್ತಾರೆ. ಇದರ ಜೊತೆಯಲ್ಲಿ ವಾಸ ಮಾಡುವ ಸ್ಥಳಗಳನ್ನು ಆಧರಿಸಿ ಸಾಮಾಜಿಕ ಹಿಂದುಳಿದಿರುವಿಕೆ ಪರಿಗಣಿಸಲು ಹೆಚ್ಚಿನ ಪ್ರಾಮುಖ್ಯತೆ ವಹಿಸುತ್ತದೆ. ಗ್ರಾಮೀಣ ಬಾಗದಲ್ಲಿ ಸಾಮಾಜಿಕ ಹಿಂದುಳಿದಿರುವಿಕೆ ಒಂದು ಸಮಸ್ಯೆಯಾಗಿ ಉಳಿದಿದೆ. ಹಿಂದುಳಿದಿರುವಿಕೆ ನಿರ್ದರಿಸುವುದು ಬಹಳ ಕಷ್ಟಕರ ಕೆಲಸವಾಗಿದ್ದು, ಇದಕ್ಕೆ ಅನೇಕ ಅಂಕಿ ಅಂಶಗಳ ಕಲೆಹಾಕುವಿಕೆ ಅವಶ್ಯವಾಗಿರುತ್ತದೆ, ಅಂತಹ ಅಂಕಿ ಅಂಶವನ್ನು ವೈಜ್ಞಾನಿಕವಾಗಿ ಮತ್ತು ವಿವೇಕಯುಕ್ತವಾಗಿ ವಿಸ್ತಾರವಾದ ತನಿಖೆಗೆ ಒಳಪಡಿಸಬೇಕಿರುತ್ತದೆ, ವಿಧಿ 15(4) ರಲ್ಲಿ ಹಾಗೆ ಮಾಡುವುದೇ ರಾಜ್ಯದ ಕರ್ತವ್ಯವಾಗಿರುತ್ತದೆ.

ಶೈಕ್ಷಣಿಕ ಹಿಂದುಳಿದಿರುವಿಕೆಯನ್ನು ನಿರ್ಧರಿಸುವಲ್ಲಿ ನಾಗರೀಕ ವರ್ಗಗಳ ಸಾಕ್ಷರತೆ ಪರೀಕ್ಷೆಯನ್ನು ಪೂರೈಸಿದ ಜನಗಣತಿ ವರದಿಗಳು ಅರ್ಹವಾದುದಲ್ಲ; ಕಳೆದ ಮೂರು ಹೈಸ್ಕೂಲ್ ತರಗತಿಗಳಲ್ಲಿ ವಿದ್ಯಾರ್ಥಿ ಜನಸಂಖ್ಯೆಯ ಸರಾಸರಿ ಪರೀಕ್ಷೆಯನ್ನು ಶೈಕ್ಷಣಿಕ ಹಿಂದುಳಿದಿರುವಿಕೆಯನ್ನು ನಿರ್ಧರಿಸುವಲ್ಲಿ ಸೂಕ್ತವಾಗಿದೆ ಎಂಬುದೂ ಖಚಿತವಾಗಿಲ್ಲ. ...... ಆದ್ದರಿಂದ, ನಮ್ಮ ಅಭಿಪ್ರಾಯದಲ್ಲಿ, ರಾಜ್ಯ ಹಿಂದುಳಿದ ವರ್ಗಗಳ, ಜಾತಿಗಳು ಅಥವಾ ಅವರ ಪ್ರತಿ ಸಾವಿರ ವಿದ್ಯಾರ್ಥಿ ಜನಸಂಖ್ಯೆಯ ಸರಾಸರಿ ಸ್ವಲ್ಪ ಮೇಲೆ ಅಥವಾ ಬಹಳ ಹತ್ತಿರ, ಅಥವಾ ಕೇವಲ ರಾಜ್ಯ ಸರಾಸರಿಗಿಂತಲೂ ಕಡಿಮೆ ಇರುವ ಸಮುದಾಯಗಳನ್ನು ಪಟ್ಟಿಯಲ್ಲಿ ಸೇರಿಸುವಂತೆ ಸಮರ್ಥಿಸಲ್ಪಡುತ್ತದೆ. .......... ಕೋರ್ಟ್ ಹಿಂದುಳಿದ ವರ್ಗಗಳ ಪಟ್ಟಿಯಲ್ಲಿ ಲಿಂಗಾಯತ ಸಮುದಾಯದ ಸದಸ್ಯರ ಸೇರ್ಪಡೆ ತಪ್ಪು ಎಂದಿದೆ. ಮೀಸಲಾತಿ ಶೇಖಡ 50 ರ ಒಳಗೆ ಇರಬೇಕು ಎಂದಿದೆ."

1963 ರಲ್ಲಿ ಸರ್ಕಾರ ಇನ್ನೊಂದು ಆದೇಶವನ್ನು ಮಾಡಿತು, ಇದರಡಿ ಸಾಮಾಜಿಕ ಮತ್ತು ಶೈಕ್ಷಣಿಕ ಹಿಂದುಳಿದಿರುವಿಕೆಯನ್ನು ನಿರ್ದರಿಸಲು ಎರಡು ಮಾನದಂಡಗಳನ್ನು ನಿಗದಿ ಮಾಡಿತು ಅದು ಆಧಾಯ ಮತ್ತು ವೃತ್ತಿ. ಹಿಂದುಳಿದವರಿಗೆ 30% ಮೀಸಲಾತಿ. ಎಸ್.ಸಿ / ಎಸ್.ಟಿ ರವರಿಗೆ 18% ಮೀಸಲಾತಿ ಪ್ರಕಟಿಸಿತು. ಯಾರು ವ್ಯವಸಾಯ ವೃತ್ತಿ, ಸಣ್ಣ ವ್ಯಾಪಾರ, ಕೆಳದರ್ಜೆ ಸೇವೆ, ಕರಕುಶಲತೆ ಅಥವ ಇತರೆ ವೃತ್ತಿಗಳು ಯಾವುದು ಕೈಯಿಂದ

ಮಾಡುವ ಕಾರ್ಮಿಕತ್ವದಿಂದ ಕೂಡಿರುತ್ತದೋ ಅಂತಹ ವೃತ್ತಿಗಳಲ್ಲಿ ವಾರ್ಷಿಕ 1200-00 ರೂ ಕೌಟುಂಬಿಕ ಆಧಾಯದ ಒಳಗೆ ಇರುತ್ತಾರೋ ಅವರನ್ನು ಹಿಂದುಳಿದ ವರ್ಗಗಳೆಂದು ಪರಿಗಣಿಸಲಾಗಿತ್ತು. ಇದನ್ನು ಹೈಕೋರ್ಟಿನಲ್ಲಿ ಪ್ರಶ್ನಿಸಲಾಗಿತ್ತು.[1] ಅಲ್ಲಿ ಅರ್ಜಿಯನ್ನು ವಜಾ ಮಾಡಿ ಜಾತಿಯನ್ನು ಆದರಿಸದೆ ನೀಡಿರುವ ಮೀಸಲಾತಿ ಸರಿಯಲ್ಲವೆಂದು ಈ ಬಗ್ಗೆ ರಾಜ್ಯ ಪರಿಗಣಿಸುವಂತೆ ತೀರ್ಪು ನೀಡಲಾಗಿತ್ತು. ಇದರ ವಿರುದ್ಧ ಅಪೀಲು ಸುಪ್ರೀಮ್ ಕೋರ್ಟ್ ತಲುಪಿತು.[2] ಇದಕ್ಕೆ ಉತ್ತರಿಸಿದ ಸುಪ್ರೀಮ್ ಕೋರ್ಟ್ ಜಾತಿಯನ್ನು ಪರಿಗಣಿಸಿ ನಿರ್ದರಿಸಬಹುದು ಆದರೆ ಜಾತಿಯೆ ಮಾನದಂಡವಾಗಬಾರದು. ಜಾತಿಯನ್ನು ಪರಿಗಣಿಸಿದ ಮಾತ್ರಕ್ಕೆ ಅದು ಕೆಟ್ಟದಾಗದು. ಸಂವಿಧಾನ ವಿಧಿ 15(4)[3] ರಲ್ಲಿ ಹಿಂದುಳಿದ ವರ್ಗಗಳು ಎಂದಿದೆಯೇ ಹೊರತು ಹಿಂದುಳಿದ ಜಾತಿ ಎಂದು ಇಲ್ಲ. ಜಾತಿಯನ್ನು ಆಧರಿಸಿ ನಿರ್ದರಿಸಬೇಕಿದ್ದರೆ ಶಾಸಕಾಂಗ ಈ ಬಗ್ಗೆ ಉಲ್ಲೇಕಿಸುತ್ತಿತ್ತು. ಜಾತಿಗಳಲ್ಲಿ ಹಿಂದುಳಿದವರು ಮುಂದುವರಿದವರು ಇರುತ್ತಾರೆ. ಜಾತಿಗಳಲ್ಲಿ ಕೆಲವು ಉಪಜಾತಿಗಳು ಹಿಂದುಳಿದಿರಬಹುದು ಅವರನ್ನು ನಿಯಮ ಪಾಲಿಸಿ ಎಸ್.ಸಿ ಪಟ್ಟಿಯಲ್ಲಿ ಸೇರಿಸಬಹುದು. ವರ್ಗಗಳನ್ನು ಜಾತಿ ಎಂದು ಪರಿಗಣಿಸಿದರೆ ಸಂವಿಧಾನದ ಆಶಯಗಳಿಗೆ ಬೆಲೆ ಇಲ್ಲದಂತಾಗುತ್ತದೆ.

1972 ರಲ್ಲಿ ಎಲ್.ಜಿ. ಹಾವನೂರು ರವರನ್ನು ಕರ್ನಾಟಕ ಹಿಂದುಳಿದ ವರ್ಗಗಳ ಆಯೋಗದ ಅಧ್ಯಕ್ಷರನ್ನಾಗಿ ನೇಮಿಸಿತು ರಾಜ್ಯ ಸರ್ಕಾರ. 1975 ರಲ್ಲಿ ವರದಿಯನ್ನು ನೀಡಿತು ಆಯೋಗ. ಈ ಆಯೋಗ ನಡೆಸಿದ ತನಿಖೆ ಮತ್ತು ಸಂಶೋಧನೆ ಭಾರತದಲ್ಲಿಯೇ ಮೊದಲಿನದು ಮತ್ತು ಬಹಳ ವಿಸ್ತಾರವಾದುದ್ದು.

---

[1] ವಿಶ್ವನಾಥ್ ವಿ. ಮೈಸೂರು ಸರ್ಕಾರ - ಎ.ಐ.ಆರ್ 1964 ಮೈಸೂರು 132

[2] ಚಿತ್ರಲೇಖ ವಿ. ಮೈಸೂರು ರಾಜ್ಯ - 1964 (6) ಎಸ್.ಸಿ.ಆರ್ 368

[3] ಈ ವಿಧಿಯಡಿ ರಾಜ್ಯವು ಸಾಮಾಜಿಕ ಮತ್ತು ಶಿಕ್ಷಣಿಕ ಹಿಂದುಳಿದ ವರ್ಗಗಳ ನಾಗರೀಕರಿಗೆ ಅಥವ ಎಸ್.ಸಿ ಮತ್ತು ಎಸ್.ಟಿ ರವರಿಗೆ ವಿಶೇಷ ಬೇಡಿಕೆಗಳನ್ನು ಒದಗಿಸುವುದಕ್ಕೆ ಅಧಿಕಾರವಿದೆ.

ಆಯೋಗದ ಶಿಫಾರಸ್ಸಿನಂತೆ ಹಿಂದುಳಿದ ವರ್ಗಗಳನ್ನು ಸಂವಿಧಾನ ವಿಧಿ 15 (4) ಕ್ಕೆ ಹಿಂದುಳಿದ ವರ್ಗಗಳನ್ನು ಮೂರು ಭಾಗವನ್ನಾಗಿ ಮಾಡಿ (1) ಹಿಂದುಳಿದ ಸಮುದಾಯದಲ್ಲಿ 15 ಜಾತಿಗಳನ್ನು (2) ಹಿಂದುಳಿದ ಜಾತಿಗಳಲ್ಲಿ 128 ಜಾತಿಗಳನ್ನು (3) ಹಿಂದುಳಿದ ಬುಡಕಟ್ಟು (ಟ್ರೈಬ್ಸ್) 62 ಬುಡಕಟ್ಟು ಜನಾಂಗವನ್ನು ಸೇರಿಸಿ ಪಟ್ಟಿ ಮಾಡಿತ್ತು ಮತ್ತು ಸಂವಿಧಾನ ವಿಧಿ 16(4) ಕ್ಕೆ[1] ಹಿಂದುಳಿದ ವರ್ಗಗಳನ್ನು ಮೂರು ಭಾಗವನ್ನಾಗಿ ಮಾಡಿ (1) ಹಿಂದುಳಿದ ಸಮುದಾಯದಲ್ಲಿ 9 ಜಾತಿಗಳನ್ನು (2) ಹಿಂದುಳಿದ ಜಾತಿಗಳಲ್ಲಿ 115 ಜಾತಿಗಳನ್ನು (3) ಹಿಂದುಳಿದ ಬುಡಕಟ್ಟು (ಟ್ರೈಬ್ಸ್) 61 ಬುಡಕಟ್ಟು ಜನಾಂಗವನ್ನು ಸೇರಿಸಿ ಪಟ್ಟಿ ಮಾಡಿತ್ತು. ಆಯೋಗದ ಪ್ರಕಾರ 1972 ರ ಎಸ್.ಎಸ್.ಎಲ್.ಸಿ ಪರೀಕ್ಷೆಯಲ್ಲಿ ಯಾವ ಜಾತಿಯವರ ವಿಧ್ಯಾರ್ಥಿಗಳು ರಾಜ್ಯ ಸರಾಸರಿಗಿಂತ 50% ಮೇಲೆ ಇದ್ದಲ್ಲಿ ಅವರನ್ನು ಹಿಂದುಳಿದ ಸಮುದಾಯ ಎಂದು ಶೇಖಡ 50% ಗಿಂತ ಕಡಿಮೆ ಇದ್ದಲ್ಲಿ ಹಿಂದುಳಿದ ಜಾತಿಗಳಲ್ಲಿ ಮತ್ತು ಹಿಂದುಳಿದ ಬುಡಕಟ್ಟು ರವರನ್ನು ಸೇರಿಸಲಾಗಿದೆ ಎಂದು, ಇದರಲ್ಲಿ ದೊಂಬರು, ವಡ್ಡರು ಮತ್ತು ಅಧಿಸೂಚನೆಯಿಂದ ತೆಗೆದುಹಾಕಲ್ಪಟ್ಟ ಅಲೆಮಾರಿ ಬುಡಕಟ್ಟು ಜನರಿಗೆ ಈ ಮಾನದಂಡ ಅನ್ವಯಿಸಿಲ್ಲವೆಂತಲೂ, ಎಸ್.ಸಿ ಮತ್ತು ಎಸ್.ಟಿ ಹೊರತುಪಡಿಸಿ ಈ ಹಿಂದುಳಿದ ವರ್ಗಗಳು ಶೇಖಡ 45% ಒಟ್ಟು ರಾಜ್ಯ ಜನಸಂಖ್ಯೆಯಲ್ಲಿ ಇದ್ದಾರೆಂತಲೂ, ಈ ಮೂರು ವರ್ಗಕ್ಕೆ ವಿವಿದತೆಯಲ್ಲಿ ಒಟ್ಟು 32% ಮೀಸಲಾತಿ ನಿಗದಿಪಡಿಸಿತು. ಎಸ್.ಸಿ ಮತ್ತು ಎಸ್.ಟಿ ರವರಿಗೆ  ಶೇಖಡ 18% ಮೀಸಲಾತಿ ಸೇರಿ ಒಟ್ಟು 50% ಮೀಸಲಾತಿಯನ್ನು ಆಯೋಗ ಶಿಫಾರಸ್ಸು ಮಾಡಿತು. ಈ ಆಯೋಗವು ಮಾಡಿದ ಶಿಫಾರಸ್ಸಿನಲ್ಲಿ ಹಿಂದುಳಿದ ವರ್ಗದ ಮೂರು ವರ್ಗಗಳಲ್ಲಿ ಉಳಿದ ಮೀಸಲು ಸೀಟು/ಹುದ್ದೆಯನ್ನು ಇತರೆ ವರ್ಗದ ಹ್ಂದುಳಿದವರಿಗೆ ಹಂಚಬೇಕೆಂದು, ಈ ಎಲ್ಲಾ ಹಿಂದುಳ್ದವರಲ್ಲ್ ಉಳಿದಿದ್ದು ಎಸ್.ಸಿ ಮತ್ತು

---

[1] ಈ ವಿಧಿಯ ಅಡಿಯಲ್ಲಿ ರಾಜ್ಯದ ಸೇವೆಗಳಲ್ಲಿ ಹಿಂದುಳಿದ ವರ್ಗಗಳ ಜನರಿಗೆ ಸರಿಯಾದ ಪ್ರಾತಿನಿಧ್ಯ ದೊರೆತಿಲ್ಲ ಎಂಬ ಅಭಿಪ್ರಾಯಕ್ಕೆ ರಾಜ್ಯ ಬಂದರೆ ಅಂತಹ ನೇಮಕಾತಿಗಳಲ್ಲಿ ಮೀಸಲಾತಿಯನ್ನು ಒದಗಿಸುವುದಕ್ಕೆ ರಾಜ್ಯಕ್ಕೆ ಅಧಿಕಾರವಿದೆ.

ಎಸ್.ಟಿ ರವರಿಗೆ ಹಂಚಬೇಕೆಂದು. ಈ ಎಲ್ಲಾ ವರ್ಗಗಳಲ್ಲಿ ಭರ್ತಿಯಾಗದ ಸೀಟು/ಹುದ್ದೆಯನ್ನು ಸಾಮಾನ್ಯ ಕ್ಷೇತ್ರಕ್ಕೆ ಹಂಚಬೇಕೆಂದು ಶಿಫಾರಸ್ಸು ಮಾಡಲಾಗಿತ್ತು. 1977 ರಲ್ಲಿ ಮತ್ತು 1979 ರಲ್ಲಿ ಸರ್ಕಾರ ಆದೇಶಿಸಿ ಸದರಿ ಹಿಂದುಳಿದವರ ಪಟ್ಟಿಯಲ್ಲಿ ವಿಶೇಷ ಗುಂಪು ಎಂದ್ ಸೇರಿಸಿ ಮುಸ್ಲಿಮರನ್ನು ಮತ್ತು ಎಸ್.ಸಿ/ಎಸ್.ಟಿ ಯಿಂದ ಪರಿವರ್ತನೆ ಗೊಂಡವರನ್ನು ಹಿಂಡುಳಿದರ ಪಟ್ಟಿಯಲ್ಲಿ ಸೇರಿಸಿತು. ನಂತರ ಹೈಕೋರ್ಟ್ ಮೊರೆ ಹೋದ ಪರಿಣಾಮ ಕೆಲವು ಜಾತಿಗಳನ್ನು ಹಿಂದುಳಿದ ವರ್ಗದಿಂದ ತೆಗೆದುಹಾಕಲು ಆದೇಶವಾಯಿತು.

1977 ಮತ್ತು 1979 ರ ಆದೇಶವನ್ನು ಸುಪ್ರೀಮ್ ಕೋರ್ಟನಲ್ಲಿ ಪ್ರಶ್ನಿಸಲಾಗಿತ್ತು. ನಂತರ ರಾಜ್ಯ ಸರ್ಕಾರ 1983 ರಲ್ಲಿ ವೆಂಕಟಸ್ವಾಮಿ ಆಯೋಗವನ್ನು ರಚಿಸಿತ್ತು. ಸಾಮಾಜಿಕ ಮತ್ತು ಶೈಕ್ಷಣಿಕ ಹಿಂದುಳಿದಿರುವಿಕೆಗೆ ಆರ್ಥಿಕ ಮಾನದಂಡ ಉಪಯೋಗಿಸಿ ಬೃಹತ್ ಅಂಕಿ ಅಂಶ ಕಲೆ ಹಾಕಿ ವರದಿ ಸಲ್ಲಿಸಲಾಗಿತ್ತಾದರೂ ಅದು ಸರ್ಕಾರದಿಂದ ಅಂಗೀಕಾರವಾಗಲಿಲ್ಲ. ಆಯೋಗದಿಂದ 35 ಜಾತಿ/ಸಮುದಾಯವನ್ನು ಸಾಮಾಜಿಕ ಮತ್ತು ಶೈಕ್ಷಣಿಕ ಹಿಂದುಳಿದವರು ಸಂವಿಧಾನ ವಿಧಿ 15(4) ಕಾರಣಕ್ಕಾಗಿ ಎಂದು ಗುರುತಿಸಲಾಗಿತ್ತು. ಆದಾಯ ಮಿತಿ ಮತ್ತು ಮೀಸಲಾತಿ ಒಂದು ತಲೆಮಾರಿಗೆ ಮಿತಿಯಾಗಿಸಲು ಶಿಫಾರಸ್ಸು ಆಗಿತ್ತು. ವರದಿಗೆ ವಿರೋದವಾಗಿ ಅನೇಕ ಜಾತಿಗಳನ್ನು ಸೇರಿಸಲಾಯಿತು. ಎ, ಬಿ, ಸಿ, ಡಿ, ಇ ಎಂದು ಗುಂಪುಗಳಾಗಿ ಜಾತಿಗಳನ್ನು ವಿಂಗಡಿಸಲಾಯಿತು. ನಂತರ 1990 ರಲ್ಲಿ ಚಿನ್ನಪ್ಪ ರೆಡ್ಡಿ ಆಯೋಗವನ್ನು ರಚಿಸಲಾಗಿತ್ತು ಅದೂ ಫಲಪ್ರದವಾಗಲಿಲ್ಲ. ಆಯೋಗ 72 ಜಾತಿ, ಸಮುದಾಯ, ಟ್ರೈಬ್, ಧರ್ಮದವರನ್ನು ಮತ್ತು ಕಸುಬಿನ ಗುಂಪುಗಳು ಮತ್ತು ಉಪ ಗುಂಪುಗಳನ್ನು ಗುರುತಿಸಿತ್ತು. ಮೂರು ವರ್ಗವಾಗಿ ವಿಂಗಡಿಸಲಾಗಿತ್ತು. ರಾಷ್ಟ್ರೀಯ ಮಟ್ಟದಲ್ಲಿ ಹಿಂದುಳಿದವರನ್ನು ಗುರುತಿಸಲು ಮೊದಲ ಭಾರಿಗೆ ಕಕಾ ಕಾಲೇಲ್ಕರ್ ಅಧ್ಯಕ್ಷತೆಯಲ್ಲಿ 1953 ರಲ್ಲಿ ಆಯೋಗ ರಚನೆ ಆಗಿತ್ತು. ಅದರ ಶಿಫಾರಸ್ಸು ಜಾರಿಯಾಗಲಿಲ್ಲ. ಜನತಾಪಕ್ಷ 1979 ರಲ್ಲಿ ಬಿ.ಪಿ. ಮಂಡಲ್ ಆಯೋಗವನ್ನು ರಚಿಸಿತು ಅದರ ವರದು 1980-90 ರವರೆಗೆ ಜಾರಿಯಾಗಲಿಲ್ಲ. 1990 ರಲ್ಲಿ ಜಾರಿ ಆಯಿತು. 1992 ರಲ್ಲಿ ಇಂದಿರಾ

ಸಾವ್ಹನಿ ಪ್ರಕರಣದಲ್ಲಿ ರಾಜ್ಯ ಸರ್ಕಾರವು ಹಿಂದುಳಿದವರ್ಗವನ್ನು ಮತ್ತೆ ವರ್ಗೀಕರಣ ಮಾಡುವುದಕ್ಕೆ ಕಾನೂನಿನಲ್ಲಿ ಅವಕಾಶವಿದೆ ಎಂದು ತೀರ್ಪು ನೀಡಿತ್ತು. ಅದರಂತೆ 9 ರಾಜ್ಯಗಳ ಪೈಕಿ ಕರ್ನಾಟಕದಲ್ಲೂ ಪ್ರತ್ಯೇಕ ವರ್ಗೀಕರಣದ ಪಟ್ಟಿ ಜಾರಿಯಲ್ಲಿ ಇದೆ. ವಿಪರ್ಯಾಸವೆಂದರೆ ಜಾತಿ ಮೀಸಲಾತಿ ನೀಡುತ್ತಿರುವ ನಮ್ಮ ಆಡಳಿತಗಾರರಿಗೆ ಜಾತಿ ಸೆನ್ಸಸ್ ಮಾಡಿಸಬೇಕು ಎಂದು ಇಲ್ಲಿವರೆಗೆ ಪ್ರಾಮಾಣಿಕ ಪ್ರಯತ್ನ ನಡೆದಿಲ್ಲ. ಹಾಗೆ ನಡೆಯದೆ ಅಂದಾಜಿನಲ್ಲಿ ಅಂಕಿ ಅಂಶ ತಯಾರಿಸಲಾಗುತ್ತಿದೆ. ಇದಕ್ಕೆ 1931 ರ ಜಾತಿ ಸೆನ್ಸಸ್ ಆಧಾರ ಮಾಡಿಕೊಳ್ಳಲಾಗಿದೆ. ಇದು ಎಷ್ಟು ಸರಿ.?[1]

## ಹೇಗೆ ಬಸವಲಿಂಗಪ್ಪ ಮತ್ತು ಜಯಣ್ಣ ಪ್ರಕರಣ ಪರ್-ಇನ್ಕ್ಯೂರಿಯಮ್

ಬಸವಲಿಂಗಪ್ಪ ಪ್ರಕರಣವು 1964 ರಲ್ಲಿ ಸುಪ್ರೀಮ್ ಕೋರ್ಟಿನ ಸಂವಿಧಾನ ಪೀಠ ನೀಡಿದ ತೀರ್ಪಾಗಿದ್ದು. ಇದರಲ್ಲಿ ಚುನಾವಣೆಗೆ ಸಂಬಂಧಿಸಿದ ವಿಚಾರಣೆ ನಡೆದಿರುತ್ತದೆ. ಇದರಲ್ಲಿ ಪರಿಶಿಷ್ಟ ಜಾತಿಯ ಪಟ್ಟಿಯಲ್ಲಿ ಇರುವ "ಭೋವಿ" ಜಾತಿಯ ಬಗ್ಗೆ ಚರ್ಚೆ ಆಗಿರುತ್ತದೆ. ಭೋವಿ (Bhovi) ಎಂಬ ಯಾವುದೇ ಜಾತಿ ಮೈಸೂರಿನಲ್ಲಿ ಇಲ್ಲವೆಂದು ಅದು ವಡ್ಡರ ಕುರಿತಾಗಿಯೇ ಸೇರಿಸಲಾಗಿದೆ ಎಂದು ಸುಪ್ರೀಮ್ ಕೋರ್ಟ್ ತೀರ್ಮಾನಕ್ಕೆ ಬರುತ್ತದೆ. ಇದರ ತೀರ್ಮಾನದ ಆಧಾರವಾಗಿ ಮೈಸೂರು ಮಹಾರಾಜರು 1944 ರಲ್ಲಿ ವಡ್ಡ ಜರನ್ನು "ಬೋಯಿ" (Boyi) ಎಂದು ಸರ್ಕಾರದ ಎಲ್ಲಾ ದಾಖಲೆ ಮತ್ತು ಪತ್ರಗಳಲ್ಲಿ ಇನ್ನು ಮುಂದೆ ಉಪಯೋಗಿಸುವಂತೆ ಆದೇಶಿಸಿರುವುದನ್ನು ಪರಿಗಣಿಸಿ ಮಾನ್ಯ ಸುಪ್ರೀಮ್ ಕೋರ್ಟ್ ಭೋವಿ ಎಂದರೆ ಯಾರೂ ಅಲ್ಲ ಅದು ವಡ್ಡರು ಜನರನ್ನು ಹೇಳಿದ್ದಾಗ್ದೆ ಎಂದು ತೀರ್ಮಾನಿಸಿ, ಬೋವಿ,(Bovi) ಬೋಯಿ(Boyi) ಮತ್ತು ಭೋವಿ(Bhovi) ಸಮಾನಾಂತರ ಒಂದೇ ಶಬ್ದಗಳೆಂದು ತೀರ್ಪು ಇತ್ತಿದೆ. ಈ ತೀರ್ಪಿನಲ್ಲಿ ಜಾತಿಗಳ ಬಗ್ಗೆ ಅಧ್ಯಯನ ನಡೆಸಿ ಬರೆದಿರುವ ಪುಸ್ತಕವನ್ನು

---

[1] ಲೇಖಕರ ಅಭಿಪ್ರಾಯ ಮತ್ತು ಸಂಗ್ರಹ

ಪರಿವೀಕ್ಷಿಸಿರುವುದಿಲ್ಲ. 1909 ರಲ್ಲಿ ಮದ್ರಾಸ್ ಸರ್ಕಾರದ ಮುದ್ರಣಾಲಯದಲ್ಲಿ ಮುದ್ರಣವಾದ ಎಡ್ಗರ್ ಥರ್ಸ್ಟನ್ ರಚಿಸಿರುವ ಕೆ. ರಂಗಾಚಾರಿ ಸಹಾಯ ಮಾಡಿರುವ ಗ್ರಂಥವಾದ "ಕ್ಯಾಸ್ಟ್ಸ್ ಅಂಡ್ ಟ್ರೈಬ್ಸ್ ಆಫ್ ಸದರನ್ ಇಂಡಿಯಾ" ಗ್ರಂಥದಲ್ಲಿ "ಬೋವಿ(Bovi) ಯಾರು, ಬೋಯಿ(Boyi) ಯಾರು, ಬೋಯ ಯಾರು, ಬೋಯನ್ ಯಾರು, ವಡ್ಡರನ್ನು ಹೇಗೆ ಬೋಯ (Boya) ಮತ್ತು ಬೋಯನ್ (Boyan) ಎಂದು ಕೂಗಲಾಗುತಿತ್ತು. ಬೆಸ್ತ ಬೋವಿ ಯಾರು, ಅವರು ಹೇಗೆ ನಂಬಿಕಸ್ಥ ಸೇವಕರಾಗಿ ನೌಕರಿಯಲ್ಲಿ ಇದ್ದರು. ಬೇಡರ ಜಾತಿಯಲ್ಲಿ ಹೇಗೆ ಬೋಯ ಎಂದು ಕರೆಯುತ್ತಿದ್ದರು, ಮೋಗರ್ ಜನರಲ್ಲಿ ಪಲ್ಲಕ್ಕಿ ಹೊರುವವರು ಬೋವಿ ಎಂದು ಕರೆಸಿಕೊಳ್ಳುತ್ತಿದ್ದರು, ವಡ್ಡರಲ್ಲಿ ಗ್ರಾಮದ ಮುಖ್ಯಸ್ಥರನ್ನು ಹೇಗೆ ಪೆದ್ದಬೋಯಡು ಚಿನ್ನ ಬೋಯಡು ಎಂದು ಕರೆಯುತ್ತಿದ್ದರು ಎಂಬ ವಿಸ್ತಾರವಾದ ವಿವರಣೆ ಇದೆ. ಸುಪ್ರೀಮ್ ಕೋರ್ಟ್ ತೀರ್ಪು ತಪ್ಪಾಗಿದೆ ಎಂದು ನಮ್ಮ ವಾದವಲ್ಲ. ಅಂದು ಬೇಡರು, ಬೆಸ್ತರು, ಮೋಗರು, ವಡ್ಡರು ಇವರಲ್ಲಿ ವಿವಿದತೆಯಲ್ಲಿ ಬೋವಿ, ಬೋಯ, ಬೋಯಿ, ಬೋಯನ್, ಪದ್ದಬೋಯುಡು, ಚಿನ್ನ ಬೋಯುಡು ಎಂಬ ಪದಬಳಕೆ ಇತ್ತು ಎಂದು ಪುಸ್ತಕದ ಅಂಶಗಳನ್ನು ಅವಲೋಕಿಸಿದಾಗ ಆ ಸಮಯದಲ್ಲಿ (1950) ಈ ಬಗ್ಗೆ ಹೆಚ್ಚಿನ ಚಿಂತನೆ ಇಲ್ಲದೆ ಅಂದು ಬಹುಷಃ ಸರ್ಕಾರಿ ಸೇವೆಯಲ್ಲಿ ಇದ್ದ ನಂಬಿಕಸ್ಥ ಬೆಸ್ತ ಬೋಯಿ ಜನರು ತಮ್ಮ ಜಾತಿ ಭೋವಿ ಎಂದು ಹೇಳಿ ತಮ್ಮ ರಾಜಕೀಯ ಅಧಿಕಾರಸ್ಥರ ಅಥವ ಅಧಿಕಾರಿಗಳ ಮುಖೇನ ಸೇರಿಸಿರಬಹುದಾದ ಸಾಧ್ಯತೆಯೂ ಕಂಡು ಬರುತ್ತದೆ. 1979 ಮತ್ತು 2002 ರ ಕರ್ನಾಟಕ ಹಿಂದುಳಿದ ವರ್ಗಗಳ ಪಟ್ಟಿಯಲ್ಲಿ ಬ್ಯಾಡ ಜಾತಿಯ ಜೊತೆಯಲ್ಲಿ ಬೋಯ ಜಾತಿಯನ್ನು ಗುರುತಿಸಲಾಗಿದೆ, ಬೋವಿ, ಬೋಯಿ, ಭೋಯ್ ಎಂಬ ಜಾತಿಗಳನ್ನು ಪ್ರತ್ಯೇಕ ಹಿಂದುಳಿದ ಜಾತಿಗಳಾಗಿ ಗುರುತಿಸಲಾಗಿದೆ. ಬೆಸ್ತರ ಮತ್ತು ಮೋಗರ್ ಜಾತಿ ಜೊತೆಯಲ್ಲಿ ಭೋಯಿ ಜಾತಿಯನ್ನು ಹಿಂದುಳಿದ ಜಾತಿಗಳಾಗಿ ಗುರುತಿಸಲಾಗಿದೆ. ಲಿಂಗಾಯಿತರಲ್ಲೂ ಉಪ ಗುಂಪುಗಳಾದ ಭೋಯಿ ಜನರನ್ನು ಹಿಂದುಳಿದ ಜಾತಿಗಳಾಗಿ

ಗುರುತಿಸಲಾಗಿದೆ.[1] ಹೀಗೆ ಬಸವಲಿಂಗಪ್ಪ ಕೇಸಿನ ಹಿಂದೆ ಇದ್ದ ಅಧಿಕೃತ ದಾಖಲೆ ಮತ್ತು ಆ ನಂತರ ಸರ್ಕಾರದ ಹಿಂದುಳಿದ ವರ್ಗದ ಆದೇಶಗಳನ್ನು ಗಮನಿಸಿದಾಗ ಬಸವಲಿಂಗಪ್ಪ ಪ್ರಕರಣದಲ್ಲಿ ಘೋಷಿತ ಸಮಾನಾಂತರ ಜಾತಿಗಳು ಎಂಬ ವಿಚಾರ ಒಪ್ಪಿಕೊಳ್ಳಲಾಗದಕ್ಕೆ ಅಧಿಕೃತ ಸಾಕ್ಷ್ಯಗಳು ಇರುವುದರಿಂದ ಅಂತಹ ಸಾಕ್ಷ್ಯಗಳ ಬಗ್ಗೆ ಅಂದು ಕೋರ್ಟ್ ಗಮನ ಹರಿಸದೇ ಇರುವುದರಿಂದ ಸದರಿ ತೀರ್ಪು ಪರ್ ಇನ್ಕ್ಯೂರಿಯಮ್ ಆಗುತ್ತದೆ. ಸದರಿ ಪುಸ್ತಕ ಅಂದು ಲಭ್ಯ ವಿತ್ತೋ ಇಲ್ಲವೋ ತಿಳಿಯದು, ಇಂದು ಅನ್ಲೈನ್ ನಲ್ಲಿ ಲಭ್ಯವಿರುವ ವೆಬ್ ತಾಣವಾದ ಆರ್ಚೀವ್ ಡಾಟ್ ಆರ್ಗ್ ಇದರಲ್ಲಿ ಮೈಕ್ರೋ ಸಾಫ್ಟ್ ರವರು ಕ್ಯಾಲಿಫೋರ್ನಿಯಾ ಯೂನಿವರ್ಸಿಟಿ ಡಿಜಿಟೈಜ್ ಮಾಡಿರುವುದು ಗೊತ್ತಾಗುತ್ತದೆ.

ಇನ್ನೊಂದು ಪ್ರಕರಣ ಕರ್ನಾಟಕ ಹೈಕೋರ್ಟಿನ ಪೂರ್ಣ ಪೀಠದ ತೀರ್ಪು ಜಯಣ್ಣ ಪ್ರಕರಣ, ಇದರಲ್ಲಿ ನಾಯಕ ಜನರು ಅಂದಿನಿಂದಲೂ ಎಸ್.ಟಿ ಪಟ್ಟಿಯಲ್ಲಿ ಇದ್ದರೆಂದು ಚಿತ್ರದುರ್ಗ ಜಿಲ್ಲೆಯ ಪ್ರಕರಣದಲ್ಲಿ ಕಾನೂನು ವ್ಯಾಖ್ಯಾನಿತ ಘೋಷಣೆಯಾಗುತ್ತದೆ. ಅದರಲ್ಲಿ 1991 ರ ತಿದ್ದುಪಡಿಯಲ್ಲಿ ನಾಯಕ ಜನರನ್ನು ಸೇರಿಸಲಾಗಿದೆ, ಗ್ರಾಂಟ್ ವೇಳೆ ಅವರು ಪರಿಶಿಷ್ಟ ವರ್ಗದವರಾಗಿರಲಿಲ್ಲ ಎಂಬ ವಾದವನ್ನು ತಳ್ಳಿ ಹಾಕಿ ಇಲ್ಲ ಅವರು ಮೊದಲಿಂದಲೂ ಪರಿಶಿಷ್ಟ ವರ್ಗದವರಾಗಿರುವುದರಿಂದ ಅದು 1950 ರಿಂದ ಅನ್ವಯಿಸುತ್ತದೆ ಎಂಬ ತೀರ್ಪು 2–1 ಅನುಪಾತದಲ್ಲಿ ಬರೆದಿದ್ದಾರೆ. ಇಲ್ಲಿ ಬಹು ಮುಖ್ಯ ಅಂಶ ಚರ್ಚೆ ಆಗಿಲ್ಲ. ಮನುಪಾತ್ರ ಅನ್ಲೈನ್ ಮಾಹಿತಿಯಲ್ಲಿ 1991 ರ ತಿದ್ದುಪಡಿ ಕಾಯ್ದೆಯ ಅಬ್ಜೆಕ್ಟ್ ಅಂಡ್ ರೀಸನ್ಸ್ ಲಭ್ಯವಿರುತ್ತದೆ. ಇಲ್ಲಿ ಕಾಯ್ದೆಯನ್ನು 19–04–1991 ರ ದಿನಾಂಕದಿಂದ ಜಾರಿಗೆ ತಂದಿರುವ ಬಗ್ಗೆ ಉಲ್ಲೇಕ ಮಾಡಿ ಚರ್ಚೆ ನಡೆದಿಲ್ಲ. 1950 ರಲ್ಲಿ ಮತ್ತು 1956 ರಲ್ಲಿ ಬೆಳಗಾಮ್, ಬಿಜಾಪುರ, ಧಾರವಾರ ಮತ್ತು ಕೆನರಾ ಜಿಲ್ಲೆಗಳಿಗೆ ಅನ್ವಯಿಸುವಂತೆ ಮಾತ್ರ

---

[1] ಈ ವಿಚಾರವಾಗಿ ದಾಖಲೆ ಸಮೇತ ಮಾಹಿತಿ ಈ ಲಿಂಕ್ ನಲ್ಲಿ ದೊರೆಯುತ್ತದೆ.
https://docs.google.com/document/d/16E7V9TOOltlkh-oAAUfNa0ACfawJhI3wzYkuy-2GoGE/edit?usp=sharing

ನಾಯಕ್ಡ ಅಥವ ನಾಯಕ ಮತ್ತು ಇತರೆ ನಾಯಕ ಬುಡಕಟ್ಟು ಜನರನ್ನು ಮಾತ್ರ ಪರಿಗಣಿಸಲಾಗಿದೆ. ಚಿತಲ್ ದ್ರುಗ್ (ಇಂದಿನ ಚಿತ್ರದುರ್ಗ) ಮೈಸೂರು ಜಿಲ್ಲೆಯಾಗಿದ್ದು ಇಲ್ಲಿ ನಾಯಕರನ್ನು ಬುಡಕಟ್ಟು ಜನರೆಂದು 1950, 1956 ರಲ್ಲಿ ಪರಿಗಣಿಸಿರುವುದಿಲ್ಲ. ಈಗಾಗಲೇ ಚರ್ಚಿಸಿರುವಂತೆ 1976 ತಿದ್ದುಪಡಿಕಾಯ್ದೆಯಲ್ಲಿ ಇರುವ ಮಾರ್ಗದರ್ಶನದಂತೆ ಜಿಲ್ಲಾವಾರು ಪ್ರಾಂತ್ಯಾವಾರು ಹೊಸದಾಗ 1971 ರಲ್ಲಿ ಇದ್ದ ಎಸ್.ಸಿ ಮತ್ತು ಎಸ್.ಟಿ ಪಟ್ಟಿಯನ್ನು ತಯಾರಿಸಬೇಕಿರುತ್ತದೆ, ಅದರಂತೆ ಹೋದರೆ ಇಂದು ಇರುವ ಪಟ್ಟಿ ಸಂವಿಧಾನ ಬದ್ದತೆ ಇಲ್ಲವಾಗುತ್ತದೆ. ಆದರೆ ಜಯಣ್ಣ ಪ್ರಕರಣದ ಆಧಾರದಲ್ಲಿ ಕೆಲವು ಅಧಿಕೃತ ವಿಚಾರಗಳು ಚರ್ಚೆ ಆಗದೆ ಇರುವುದರಿಂದ ಮತ್ತು ಸುಪ್ರೀಮ್ ಕೋರ್ಟಿನ ತೀರ್ಪುಗಳು ಯಾವುದೇ ಕಾಯ್ದೆ ನಿರ್ದಿಷ್ಟವಾಗಿ ಘೋಷಿತ ಹೊರತು ಹಿಂದಿನಿಂದ ಜಾರಿಯಾಗದು ಮತ್ತು ನಿರ್ದಿಷ್ಟವಾಗಿ ಘೋಷಿತ ಹೊರತು ಪ್ರಾಪ್ತವಾಗಿರುವ ಹಕ್ಕುಗಳನ್ನು ಅನೂರ್ಜಿತ ಗೊಳಿಸಲಾಗದು ಎಂಬ ವಿಚಾರಗಳು ಚರ್ಚೆ ಆಗದೆ ಇರುವುದರಿಂದ ಸದರಿ ಪ್ರಕರಣವೂ ಪರ್ ಇನ್ಕ್ಯೂರಿಯಮ್ ಆಗುತ್ತದೆ.[1]

## ಅಧಿಕೃತ ಪುಸ್ತಕಗಳಲ್ಲೇ ದಾರಿ ತಪ್ಪಿಸುವ ಸುತ್ತೋಲೆ ಮತ್ತು ಆದೇಶಗಳು

ಈ ಪುಸ್ತಕದ ಅನುಭಂದ–27 ರಲ್ಲಿ ನೀಡಿರುವಂತೆ ಕೆ.ಎಲ್.ಜೆ ಪಬ್ಲಿಕೇಷನ್ ರವರು ಕರ್ನಾಟಕ ಸರ್ಕಾರದ ಸಮಾಜ ಕಲ್ಯಾಣ ಇಲಾಖೆಗೆ ಅಧಿಕೃತವಾಗಿ ಅವರಿಗಾಗಿ ಎಂದು ಒಂದು ಪುಸ್ತಕವನ್ನು 2017 ರಲ್ಲಿ ಹೊರತರುತ್ತಾರೆ. ಅದರಲ್ಲಿ 1977 ರಲ್ಲಿ ಎಸ್.ಸಿ ಮತ್ತು ಎಸ್.ಟಿ ಪಟ್ಟಿ ಎಂದು ಮುದ್ರಿಸಿ ಅಂದು ಇರದೇ ಇದ್ದ ಕೆಲವು ಜಾತಿಗಳನ್ನು ಸೇರಿಸಿರುವುದೂ ಅಲ್ಲದೆ ಕೆಲವು ಜಾತಿಗಳನ್ನು ಸಮಾನಾಂತರ ಜಾತಿ ಎಂದು ಸೇರಿಸಲಾಗಿದೆ. ಈ ಬಗ್ಗೆ 2002 ರಲ್ಲಿ ಮಾತ್ರ ಕೆಲವು ಜಾತಿಗಳನ್ನು ಸಮಾನಾಂತರ ಜಾತಿಗಳು ಎಂದು

---

[1] ಇದು ಲೇಖಕರ ವಾದವಷ್ಟೆ – ಅಧಿಕೃತವಾಗಿ ಸೂಕ್ತ ನ್ಯಾಯಾಲಯದಿಂದ ಘೋಷಣೆ ಆಗಬೇಕಿದೆ.

ಪರಿಗಣಿಸಿರುವ ತಿದ್ದುಪಡಿ ಕಾಯ್ದೆ ಬಿಟ್ಟರೆ ಬೇರೆ ಯಾವುದೇ ತಿದ್ದುಪಡಿಗಳಲ್ಲಿ ಸಮಾನಾಂತರ ಎಂದು ಪರಿಗಣಿಸಿರುವುದಿಲ್ಲ. ಹಿಂದುಳಿದ ವರ್ಗಗಳ ಪಟ್ಟಿಯನ್ನು ಅವಲೋಕಿಸಿದರೆ ಹಾಗೆ ಪರಿಗಣಿಸಲೂ ಬರುವುದಿಲ್ಲ. ಹಾಗಿದ್ದರೂ ಕೆಲವು ಜಾತಿಗಳಿಗೆ ಸುಳ್ಳು ಜಾತಿ ಪತ್ರಗಳನ್ನು ಕೊಡಿಸುವ ಹುನ್ನಾರದಿಂದ 2014 ಮತ್ತು 2017 ರಲ್ಲಿ ಎರಡು ಸುತ್ತೋಲೆಗಳನ್ನು ಹೊರಡಿಸಲಾಗಿದೆ. ಅದರಲ್ಲಿ 1977 ರ ತಿದ್ದುಪಡಿ ಕಾಯ್ದೆಯನ್ನು ತಪ್ಪಾಗಿ ಅರ್ಥೈಸಲಾಗಿದೆ. ಅದಕ್ಕೆ ಅಧಿಕೃತ ಇಂಬು ಕೊಡಲು ಅಧಿಕೃತ ಪುಸ್ತಕವನ್ನು ಖಾಸಗಿಯವರಿಂದ ಮುದ್ರಿಸಲಾಗಿದೆ. ಇದರ ಪರಿಣಾಮ ನ್ಯಾಯಾಂಗದ ಮೇಲೂ ಆಗಿದೆ. ಪಿ.ಟಿ.ಸಿ.ಎಲ್ ಪ್ರಕರಣವೊಂದರಲ್ಲಿ 1977 ರಿಂದ ಬೇಡ ಜನಾಂಗವನ್ನು ಎಸ್.ಟಿ ಪಟ್ಟಿಯಲ್ಲಿ ಸೇರಿಸಲಾಗಿದೆ ಎಂದು ಇಂತಹ ದಾಖಲೆ ನೀಡಲಾಗುತ್ತದೆ. ಆದರೆ ಅಧಿಕೃತವಾಗಿ ತಿದ್ದುಪಡಿ ಕಾಯ್ದೆ ಆಗಿರುವುದು 1991 ರಲ್ಲಿ ಎಸ್.ಟಿ ಪಟ್ಟಿಯಲ್ಲಿ ಸೇರಿಸಲಾಗಿದ್ದರೂ ಈ ಅಧಿಕೃತ ಬುಕ್ಕಿನ ಪ್ರತಿಯನ್ನು ಅವಲೋಕಿಸಿ ಮಾನ್ಯ ಕರ್ನಾಟಕ ಹೈಕೋರ್ಟ್ ರಿಟ್ ಅರ್ಜಿ. ನಂ. 21764/2012 ರಲ್ಲಿ 18-10-2019 ರಲ್ಲಿ ತೀರ್ಪು ಬರೆದು ಅದರ ಆಧಾರದಲ್ಲಿ ಮರು ವಿಚಾರಣೆಗೆ ರಿಮ್ಯಾಂಡ್ ಮಾಡುತ್ತದೆ. ಹೀಗೆ ಜಾತಿ ವಿಚಾರದಲ್ಲಿ ಇಲಾಖೆಗಳು ಸರ್ಕಾರಗಳು ಸೌಲಭ್ಯ ನೀಡಿ ಮತಬ್ಯಾಂಕ್ ಬದ್ರವಾಗಿಸುವ ಬರದಲ್ಲಿ ಪಿ.ಟಿ.ಸಿ.ಎಲ್ ಪ್ರಕರಣಗಳ ವ್ಯಾಜ್ಯಗಳಲ್ಲಿ ನ್ಯಾಯಾಂಗದ ದಿಕ್ಕು ತಪ್ಪಿಸುತ್ತಿದ್ದಾರೆ.

## ಅಧ್ಯಾಯ-8

## ಗ್ರಾಂಟ್/ಭೂಮಿ ವಿವಿದತೆಯಲ್ಲಿ ಕಾಯ್ದೆ ಅನ್ವಯತೆ

### ಗ್ರೋ ಮೋರ್ ಫುಡ್ ಸ್ಕೀಮ್ ನಲ್ಲಿ ಗ್ರಾಂಟ್ ಹೇಗೆ ?

ಕೆಲವು ಕೇಸಿನಲ್ಲಿ ಹೆಚ್ಚುವರಿ ಆಹಾರ ಬೆಳೆಯುವ ಉದ್ದೇಶದಿಂದ (ಗ್ರೋ ಮೋರ್ ಫುಡ್ ಸ್ಕೀಂ) ಅಡಿಯಲ್ಲಿ ಗ್ರಾಂಟ್ ಆಗಿರುವ ಜಮೀನು

ಪಿ.ಟಿ.ಸಿ.ಎಲ್ ವ್ಯಾಪ್ತಿಗೆ ಬರುವುದಿಲ್ಲ ಎಂಬ ತೀರ್ಪು ಆಗಿದ್ದರೆ, ಇನ್ನೊಂದು ಕೇಸಿನಲ್ಲಿ ಪ್ರಾಜೆಕ್ಟ್ ಡಿಸ್ಪ್ಲೇಸ್ ಮೆಂಟ್ ಅರ್ಥಾತ್ ಯಾವುದಾದರೂ ಘಟಕ ಸ್ಥಾಪನೆಯಿಂದ ಉಂಟಾಗುವ ಜಮೀನು ಕಳೆದುಕೊಳ್ಳುವಿಕೆಯಲ್ಲಿ ಬೇರೆ ಜಮೀನು ಕೊಟ್ಟರೆ ಅದು ಪಿ.ಟಿ.ಸಿ.ಎಲ್ ವ್ಯಾಪ್ತಿಗೆ ಬರುವುದಿಲ್ಲ ಎಂದು ತೀರ್ಪು ನೀಡಿರುವ ಜಸ್ಟೀಸ್ ಎಸ್.ಆರ್. ಬಾನೂರ್ ಮಠ್ ರವರು (2002) ಮುಂದುವರಿದು ಸರ್ಕಾರದಿಂದ ಭೂಮಿಯನ್ನು ಮಂಜೂರು ಪಡೆದಿರುವ ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡದ ಗ್ರಾಂಟಿಯು ತಾನು ಪರಿಶಿಷ್ಟನು ಎಂಬ ಕಾರಣಕ್ಕೆ ಸದರಿ ಜಮೀನು ಮಂಜೂರಿಯಾಗಿದೆ ಎನ್ನುವುದು ಮುಖ್ಯವಾಗಿರುತ್ತದೆ ಎಂದು ಹೇಳುತ್ತಾರೆ. ಅಂತಹ ಜಮೀನು ಗ್ರಾಂಟ್ ಮಾತ್ರ ಪಿ.ಟಿ.ಸಿ.ಎಲ್ ವ್ಯಾಪ್ತಿಗೆ ಬರುತ್ತದೆ ಎಂದು ಹೇಳಿರುತ್ತಾರೆ.

ಗ್ರೋ ಮೋರ್ ಫುಡ್ (ಹೆಚ್ಚುವರಿ ಆಹಾರ ಉತ್ಪಾದಿಸುವಿಕೆ) ಸ್ಕೀಮ್ ಅಡಿಯಲ್ಲಿ ಗ್ರಾಂಟ್ ಮಾಡಲಾದ ಜಮೀನು ಪಿ.ಟಿ.ಸಿ.ಎಲ್ ಕಾಯ್ದೆಯಲ್ಲಿ ಗ್ರಾಂಟ್ ಜಮೀನು ಅಲ್ಲ ಎಂಬ ತೀರ್ಪನ್ನು ಹೈಕೋರ್ಟ್ ನೀಡಿದೆ. "11.4.1942 ರಂದು ಬಿಡುಗಡೆಯಾದ ಮೊದಲ ಅಧಿಸೂಚನೆಗೆ ಕಳಪೆ ಪ್ರತಿಕ್ರಿಯೆಯನ್ನು ಪಡೆಯಿತು, ಇದು ಅನುಕ್ರಮವಾಗಿ ಎರಡನೇ ಅಧಿಸೂಚನೆಯನ್ನು ಹೊರಡಿಸಲು ಸರ್ಕಾರವನ್ನು ಪ್ರೇರೇಪಿಸಿತು. ಜಿ.ಓ ಸಂಖ್ಯೆ ಆರ್.7955-70-ಆರ್.ಎಂ.65-41-10, ದಿನಾಂಕ 13.6.1942. ಎರಡನೆಯ ಅಧಿಸೂಚನೆಯಲ್ಲಿ, 3 ಮತ್ತು 4 ನೇ ಪ್ಯಾರಾಗ್ರಾಫ್‌ಗಳಲ್ಲಿ, ಚರ್ಚಿಸಿರುವಂತೆ, ಸಾಮಾನ್ಯ ಜನರು ಸಾಗುವಳಿ ಭೂಮಿಯನ್ನು ಗುತ್ತಿಗೆಗೆ ತೆಗೆದುಕೊಳ್ಳಲು ಮುಂದಾಗಿರುವುದಿಲ್ಲ ಎಂಬ ಆತಂಕದಲ್ಲಿ, ಅವರು ಭೂಮಿಯನ್ನು ಅಭಿವೃದ್ಧಿ ಮಾಡಿದಲ್ಲಿ ಅದು ಸ್ವಯಂಚಾಲಿತವಾಗಿ ಅಂತಹ ಭೂಮಿಯ ಮೌಲ್ಯವನ್ನು ಹೆಚ್ಚಿಸುತ್ತದೆ. ಮೊದಲ ಅಧಿಸೂಚನೆಯಡಿಯಲ್ಲಿ ಗುತ್ತಿಗೆ ಪಡೆದ ಆರಂಭಿಕ ಗುತ್ತಿಗೆ ಅವಧಿಯ ಕೊನೆಯಲ್ಲಿ ಅವರು ಹೇಳಿದ ಭೂಮಿಯನ್ನು ಖರೀದಿಸುವ ವಿಧಾನದಲ್ಲೂ ಇದು ಬರುತ್ತದೆ. ಅಂತೆಯೇ, 13.6.1942 ರ ಎರಡನೇ ಅಧಿಸೂಚನೆಯಲ್ಲಿ, ಮುಂಗಡವಾಗಿ ಗುತ್ತಿಗೆ ನೀಡಬೇಕಾದ ಜಮೀನುಗಳಿಗೆ ಸಂಬಂಧಿಸಿದಂತೆ ಅಸಮಾಧಾನಗೊಂಡ

(ಅಪ್ಸೆಟ್) ಬೆಲೆಯನ್ನು ನಿಗದಿಪಡಿಸಲು ಸರ್ಕಾರ ಸ್ಪಷ್ಟಪಡಿಸಿದೆ, ಅಂದರೆ, ಆ ಜಮೀನುಗಳಿಗೆ ಅಭಿವೃದ್ಧಿಯನ್ನು ನೀಡುವ ಮೊದಲು ಅದನ್ನು ಯಾರಿಗೆ ನೀಡಲಾಗುವುದು? ಕೃಷಿಗಾಗಿ ಗುತ್ತಿಗೆ / ದೀರ್ಘಾವಧಿಯ ಗುತ್ತಿಗೆಗೆ, ನಂತರ ಅದನ್ನು ಖರೀದಿಸಲು ಅನುಕೂಲವಾಗುವಂತೆ. ಹಾಗೆ ಮಾಡುವಾಗ, ಅಸಮಾಧಾನಗೊಂಡ ಬೆಲೆಯನ್ನು ನಿಗದಿಪಡಿಸುವ ಬಗ್ಗೆಯೂ ಸರ್ಕಾರ ನಿರ್ಧರಿಸಿತು. ಆ ಸಮಯದಲ್ಲಿ, ನಿರ್ಧರಿಸಿದ ಅಸಮಾಧಾನ ಬೆಲೆ ಅಸೆಸ್ಮೆಂಟ್ ಮೌಲ್ಯಕ್ಕಿಂತ ಮೂರು ಪಟ್ಟು ಹೆಚ್ಚು. ಮೊದಲ ಎರಡು ವರ್ಷಗಳ ಮೌಲ್ಯಮಾಪನ ಮಾದರಿಯು ಅದು ಅಸೆಸ್ಮೆಂಟ್ ನಿಂದ ಮುಕ್ತವಾಗಿರುತ್ತದೆ; ಮೂರನೇ ಮತ್ತು ನಾಲ್ಕನೇ ವರ್ಷಗಳವರೆಗೆ, ಇದು ಅರ್ಧದಷ್ಟು ಅಸೆಸ್ಮೆಂಟ್ ಆಗಿರುತ್ತದೆ; ಮತ್ತು ಐದನೇ ವರ್ಷ ಅದು ಪೂರ್ಣ ಅಸೆಸ್ಮೆಂಟ್ ಆಗಿರುತ್ತದೆ. 11.4.1942 ರಲ್ಲಿ ಹಿಂದಿನ ಅಧಿಸೂಚನೆಯಲ್ಲಿ ಚರ್ಚಿಸಿದಂತೆ ಈ ಭೂಮಿಯನ್ನು ಮಾರಾಟ ಮಾಡಲು ಉದ್ದೇಶಿಸಲಾಗಿದ್ದ ಮಾರುಕಟ್ಟೆ ಬೆಲೆ ಎಂದು ಪರಿಗಣಿಸಲು ಆದೇಶಿಸಲಾಗಿದೆ. ಗುತ್ತಿಗೆ ದಿನಾಂಕದಂದು ಚಾಲ್ತಿಯಲ್ಲಿರುವ ಭೂಮಿಯ ಮಾರುಕಟ್ಟೆ ಮೌಲ್ಯಕ್ಕಿಂತ ಅಸಮಾಧಾನದ ಮೌಲ್ಯವು ಹೆಚ್ಚಿರಬಾರದು ಎಂದು ಸಹ ಗಮನಿಸಲಾಗಿದೆ. ....... ಅದರ ನಂತರ, 1953 ರಲ್ಲಿ ಸರ್ಕಾರವು ಅಭಿಪ್ರಾಯಿಸಿದಂತೆ ಮೊದಲ ಬಾರಿಗೆ 1942 ರಲ್ಲಿ ಎರಡು ಪ್ರತ್ಯೇಕ ಅಧಿಸೂಚನೆಗಳ ಅಡಿಯಲ್ಲಿ ಜಾರಿಗೆ ಬಂದಿದ್ದ, ಹೆಚ್ಚಿನ ಆಹಾರವನ್ನು ಬೆಳೆಯುವ ಉದ್ದೇಶದಿಂದ ಇದನ್ನು ಹೆಚ್ಚು ಆಹಾರ ಯೋಜನೆ ಎಂದು ಗುರುತಿಸಬೇಕು ಮತ್ತು ಮತ್ತಷ್ಟು ಉದ್ದೇಶಿಸಲಾಗಿದೆ ಜಿ.ಓ ಸಂಖ್ಯೆ ಆರ್.7892-901 -ಎಲ್.ಆರ್. 266.-53-3, ದಿನಾಂಕ 10.8.1953, ರಲ್ಲಿನ ಅಧಿಸೂಚನೆಯಲ್ಲಿ ಹೇಳಿದ ಯೋಜನೆಯನ್ನು ಕೊನೆಗೊಳಿಸಿ ಇದರಲ್ಲಿ ಜನರು ಪಾಳುಭೂಮಿಯಿಂದ ಕೃಷಿ ಭೂಮಿಗೆ ಅಭಿವೃದ್ಧಿಪಡಿಸಿದ ಜಮೀನುಗಳು, ಅವರು ಈಗಾಗಲೇ ಮಾರುಕಟ್ಟೆ ಬೆಲೆಯನ್ನು ಪಾವತಿಸಿ ಖರೀದಿಸಿದ್ದರೆ, ಅವರು ಹೇಳಿದ ಜಮೀನುಗಳ ಮಾಲೀಕರಾಗಿ ಮುಂದುವರಿಯಲು ಅರ್ಹರಾಗಿರುತ್ತಾರೆ ಮತ್ತು ಮಾರುಕಟ್ಟೆ ಬೆಲೆ ಮತ್ತು ಖರೀದಿಯನ್ನು ಪಾವತಿಸುವ ಸ್ಥಿತಿಯಲ್ಲಿಲ್ಲದವರು, ಪ್ರತಿಯೊಬ್ಬರಿಗೂ 3 ರಿಂದ

5 ಅಥವಾ 10 ಎಕರೆಗಳನ್ನು ಪಡೆಯುವುದನ್ನು ಖಚಿತಪಡಿಸಿಕೊಳ್ಳಲು ಸರ್ಕಾರವು ನಿಗದಿಪಡಿಸಿದ ರೀತಿಯಲ್ಲಿ ಹೇಳಿದ ಭೂಮಿಯನ್ನು ತಮ್ಮ ಪರವಾಗಿ ನೀಡಲು ಒಂದು ವಿಧಾನವನ್ನು ವಿಕಸಿಸಬೇಕು. ಕೃಷಿ ಪ್ರಾಧಿಕಾರವು ಅಂಗೀಕರಿಸಬೇಕಾದ ಆದೇಶಗಳ ಆಧಾರದ ಮೇಲೆ ಕಡಿಮೆ ಅಸಮಾಧಾನಗೊಂಡ (ಅಪ್ಸೆಟ್) ಮಾರುಕಟ್ಟೆ ಬೆಲೆಯಲ್ಲಿ ಅಥವಾ ಉಚಿತವಾಗಿ ಕೃಷಿ ಮಾಡುವುದು. ಅದರಂತೆ, 10.8.1953 ರ ಸರ್ಕಾರಿ ಆದೇಶದಡಿಯಲ್ಲಿ ಹಿಂದಿನ ಅಧಿಸೂಚನೆಗಳನ್ನು ರದ್ದುಪಡಿಸಲಾಗಿದೆ.[1] ಇದನ್ನು ಇತೀಚಿನ ಪ್ರಕರಣದಲ್ಲಿ ಉಲ್ಲೇಕಿಸಿ ಅದರಂತೆ ತೀರ್ಮಾನಿಸಲಾಗಿದೆ.[2]

'ಗ್ರೋ ಮೋರ್ ಫುಡ್ ಸ್ಕೀಮ್' ಅಡಿಯಲ್ಲಿ ಭೂಮಿಯನ್ನು ತೆಗೆದುಕೊಂಡಾಗ, ಗುತ್ತಿಗೆದಾರನು ಮೊದಲ ವರ್ಷ ಬಾಡಿಗೆ ಅಥವಾ ಗುತ್ತಿಗೆ ಪಾವತಿಸುವ ಅಗತ್ಯವಿಲ್ಲ ಮತ್ತು ನಂತರದ ವರ್ಷಗಳವರೆಗೆ ಭೂಮಿಯ ಮೌಲ್ಯಮಾಪನದ ಅರ್ಧದಷ್ಟು ಹಣವನ್ನು ಅವನು ಪಾವತಿಸಬೇಕಾಗಿತ್ತು. ಸನ್ನಿವೇಶಗಳಲ್ಲಿ, ಮರಪ್ಪಾರವರಿಗೆ (ಗ್ರಾಂಟಿ) 'ಗ್ರೋ ಮೋರ್ ಫುಡ್ ಸ್ಕೀಮ್' ಅಡಿಯಲ್ಲಿ ಗುತ್ತಿಗೆಗೆ ಭೂಮಿಯನ್ನು ಮಂಜೂರು ಮಾಡಿದರೆ ಮತ್ತು ನಂತರ ಅದನ್ನು ಅವನಿಗೆ ದೃಡೀಕರಿಸಿದರೆ, ಅವನು ಪರಿಶಿಷ್ಟ ಜಾತಿ ಅಥವ ಡಿಪ್ರೆಸ್ಡ್ ಕ್ಲಾಸ್ ಎಂದು ಪರಿಗಣಿಸಿ ಅವನಿಗೆ ನೀಡಲಾಗಿರುವ ಜಮೀನು ಗ್ರಾಂಟ್ ಜಮೀನು ಎಂದು ಪರಿಗಣಿಸಲಾಗುವುದಿಲ್ಲ. ಇದಲ್ಲದೆ, 'ಗ್ರೋ ಮೋರ್ ಫುಡ್ ಸ್ಕೀಮ್' ಅಡಿಯಲ್ಲಿ ಮರಪ್ಪಾರವರಿಗೆ ಪ್ರಶ್ನಾರ್ಹವಾದ ಭೂಮಿಯನ್ನು ನೀಡಲಾಗಿದೆ ಎಂದು ತೋರಿಸಲು ಮೇಲ್ಮನವಿದಾರ ಯಾವುದೇ ವಿಚಾರವನ್ನು ಇರಿಸಿಲ್ಲ. ಮೇಲ್ಮನವಿದಾರರು ಇದು ಮಂಜೂರು ಮಾಡಿದ ಭೂಮಿ ಎಂಬ ವಾದವನ್ನು ದೃಡೀಕರಿಸಲು ಆರ್‌ಟಿಸಿ ಸಾರಗಳನ್ನು ಮಾತ್ರ ಅವಲಂಬಿಸಿದ್ದಾರೆ. ಆದರೆ ಆರ್‌ಟಿಸಿ ನಮೂದುಗಳ ಆಧಾರದ ಮೇಲೆ, ಪಿಟಿಸಿಎಲ್ ಕಾಯ್ದೆಯ ನಿಬಂಧನೆಗಳನ್ನು ಆಕರ್ಷಿಸುವ ಸಲುವಾಗಿ ಮರಪ್ಪ ಅವರು ಡಿಪ್ರೆಸ್ಡ್ ಕ್ಲಾಸ್

---

[1] ಬಾಬುರೆಡ್ಡಿ ವಿ. ವೆಂಕಟಮ್ಮ – 2018 (3) ಕೆ.ಸಿ.ಸಿ.ಆರ್ 2206

[2] ಮಲ್ಲಿಕಾರ್ಜುನ ರೆಡ್ಡಿ ವಿ. ಕರ್ನಾಟಕ ರಾಜ್ಯ – ಮನು/ ಕೆ.ಎ/ 2559/ 2019

ಅಥವಾ ಪರಿಶಿಷ್ಟ ಜಾತಿಗೆ ಸೇರಿದವರಾಗಿರುವುದರಿಂದ ಯಾವುದೇ ಭೂಮಿಯನ್ನು ನೀಡಲಾಗಿದೆ ಎಂದು ಯಾವುದೇ ನ್ಯಾಯಾಲಯವು ಹೇಳಲಾಗುವುದಿಲ್ಲ.[1]

**ಭೂಪರಿವರ್ತನೆ ಮತ್ತು ಗ್ರಾಂಟ್ ಜಮೀನು**

ಹೈಕೋರ್ಟಿನ ದ್ವಿಸದಸ್ಯ ಪೀಠದ ಮುಂದೆ[2] ಗ್ರಾಂಟ್ ಜಮೀನು ಭೂಪರಿವರ್ತನೆ ಆಗಿ ಕ್ರಯ ಆಗಿರುವ ಪ್ರಕರಣ ಬರುತ್ತೆ, "1978 ರಲ್ಲಿ ಗ್ರಾಂಟ್ ಆಗಿರುತ್ತದೆ, 15 ವರ್ಷ ಪರಭಾರೆ ನಿಷಿದ್ಧ ಶರತ್ತು ಇರುತ್ತೆ, 15 ವರ್ಷದ ನಂತರ 1994 ರಲ್ಲಿ ಗ್ರಾಂಟಿ ಭೂಪರಿವರ್ತನೆಗೆ ಅರ್ಜಿ ಹಾಕಿ ವಾಸ ಉದ್ದೇಶಕ್ಕೆ ಭೂಪರಿವರ್ತನೆ ಮಾಡಿಸಿಕೊಳ್ಳುತ್ತಾರೆ, ಪರಿವರ್ತನೆ ಆದ ಒಂದು ತಿಂಗಳ ನಂತರ ಮಾರಾಟಮಾಡುತ್ತಾರೆ. ಈ ಬಗ್ಗೆ 10 ವರ್ಷದ ನಂತರ ಅರ್ಜಿ ಹಾಕುತ್ತಾರೆ, ಅರ್ಜಿ ವಜಾ ಆಗುತ್ತದೆ, ಡಿ.ಸಿ ರವರಿಗೆ ಸಲ್ಲಿಸಿದ ಅಪೀಲಿನಲ್ಲಿ ಅರ್ಜಿ ಪುರಸ್ಕಾರವಾಗುತ್ತದೆ. ಹೈಕೋರ್ಟಿನ ಏಕಸದಸ್ಯ ಪೀಠದ ಮುಂದೆ ಗ್ರಾಂಟ್ ಆದ ಉದ್ದೇಶ ಸಕ್ಷಮ ಪ್ರಾಧಿಕಾರ ಭೂಪರಿವರ್ತನೆ ಮಾಡಿದ ಮೇಲೆ ಅದೇ ಆಗಿ ಉಳಿದಿಲ್ಲ, ಭೂಪರಿವರ್ತನೆ ಆದೇಶ ಮಾರಾಟಕ್ಕೆ ಪೂರಕ ಅನುಮತಿ ಎಂದು ಪರಿಬಾವಿಸಬೇಕು, ಆದುದರಿಂದ ಪಿ.ಟಿ.ಸ್.ಎಲ್ ಕಾಯ್ದೆ ಉಲ್ಲಂಘನೆ ಆಗಿಲ್ಲ ಎಂಬ ತೀರ್ಪನ್ನು ಎತ್ತಿಹಿಡಿದ ದ್ವಿಸದಸ್ಯ ಪೀಠ ಸಕಾರಣಬದ್ಧ ಕಾಲಾವದಿಯಲ್ಲಿ ಕೂಡ ಅರ್ಜಿ ಹಾಕಿಲ್ಲ ಎಂಬ ಕಾರಣವನ್ನೂ ನೀಡಿ ಅಪೀಲು ವಜಾ ಮಾಡಿದೆ.

ಇನ್ನೊಂದು ಏಕ ಸದಸ್ಯ ಪೀಠದಲ್ಲಿ[3] ಕರ್ನಾಟಕ ಹೈಕೋರ್ಟ್ ಬೆಂಗಳೂರು ರಿಟ್ ಅರ್ಜಿ.ನಂ. 33846/2015 ರಲ್ಲಿ ಗ್ರಾಂಟಿ ವಾರಸ್ಸುದಾರರೊಬ್ಬರು ಭೂಪರ್ವರ್ತನೆ ಮಾಡಿ ಮಾರಿರುತ್ತಾರೆ. ಈ ಬಗ್ಗೆ ವ್ಯಾಜ್ಯದಲ್ಲಿ ಉದ್ಭವವಾದ ಪ್ರಶ್ನೆಗೆ ಉತ್ತರಿಸುತ್ತ ಭೂಪರಿವರ್ತನೆ ಆದಾಗ ವ್ಯವಸಾಯ ಜಮೀನಿನ ಸ್ವಭಾವವನ್ನು ಕಳೆದುಕೊಳ್ಳುತ್ತದೆ ಮತ್ತು ಗ್ರಾಂಟ್

---

[1] ಮುನಿರಾಜು ವಿ. ಕರ್ನಾಟಕ ರಾಜ್ಯ – 2015 (4) ಕೆ.ಸಿ.ಸಿ.ಆರ್ 3291

[2] ನಿಂಗಮ್ಮ ವಿ. ಟಿಬೆಟಿಯನ್ – ಮನು/ ಕೆ.ಎ/ 3348/ 2019

[3] ಅಜಯ್ ಕುಮಾರ್ ವಿ. ಶಶಿಕುಮಾರ್ – ಮನು/ಕೆ.ಎ/2611/2016

ಭೂಮಿಯ ಪಾತ್ರವನ್ನು ಕಳೆದುಕೊಂಡು ಪಿ.ಟಿ.ಸಿ.ಎಲ್ ಕಾಯ್ದೆಯ ನಿರ್ಬಂಧ ಅನ್ವಯಿಸುವುದಿಲ್ಲ ಎಂದು ತೀರ್ಪು ನೀಡಲು ಇನ್ನೊಂದು ದ್ವಿಸದಸ್ಯ ಪೀಠದ ತೀರ್ಪನ್ನು ಅವಲಂಬಿಸಿದೆ. ಅದು ಆರ್.ಎಫ್.ಎ 1309/2011 ತೀರ್ಪಿನ ಪ್ಯಾರಾ 18 ಅನ್ನು ಉಲ್ಲೇಕಿಸಲಾಗಿದೆ.

ಆದರೆ ಹೈಕೋರ್ಟಿನ ಏಕಸದಸ್ಯ ಪೀಠದಲ್ಲಿ[1] ಇದಕ್ಕೆ ವ್ಯತಿರಿಕ್ತ ತೀರ್ಪು ಇದೆ, "ಮಂಜೂರು ಮಾಡಿದ ಭೂಮಿಯ ವ್ಯಾಖ್ಯಾನವು ಮನೆಯ ಸೈಟ್ ಅಥವಾ ಯಾವುದೇ ರೀತಿಯ ಭೂಮಿಯ ನಡುವೆ ಯಾವುದೇ ವ್ಯತ್ಯಾಸವನ್ನು ಮಾಡುವುದಿಲ್ಲ. ಮನೆ ಸೈಟ್ ಕೂಡ ಒಂದು ಜಮೀನು ಎಂದು ವಿವಾದದಲ್ಲಿಲ್ಲ, ಆದರೂ ಇದು ದೊಡ್ಡ ಪ್ರಮಾಣದ ಭೂಮಿಯ ಒಂದು ಸಣ್ಣ ಭಾಗವಾಗಿದೆ. ಮಂಜೂರು ಮಾಡಿದ ಭೂಮಿಯ ವ್ಯಾಖ್ಯಾನವನ್ನು ಸರಳವಾಗಿ ಓದುವುದರಿಂದ, "ಮಂಜೂರು ಮಾಡಿದ ಭೂಮಿ" ಯ ವ್ಯಾಖ್ಯಾನದ ಮತ್ತು ಕಾಯ್ದೆ ಯ ವ್ಯಾಪ್ತಿಯಿಂದ ಮನೆ ಸೈಟ್ ಅಥವಾ ಕೃಷಿಯೇತರ ಭೂಮಿಯನ್ನು ಹೊರಗಿಡಲಾಗಿದೆ ಎಂಬ ಅಭಿಪ್ರಾಯವನ್ನು ತೆಗೆದುಕೊಳ್ಳಲು ಯಾವುದೇ ಅವಕಾಶವಿಲ್ಲ ಎಂದು ನಾನು ಭಾವಿಸುತ್ತೇನೆ. ಇದಲ್ಲದೆ, ಕಾಯ್ದೆಯ ಉದ್ದೇಶವನ್ನು ಸಹ ಮನಸ್ಸಿನಲ್ಲಿಟ್ಟುಕೊಂಡರೆ "ಮಂಜೂರು ಮಾಡಿದ ಭೂಮಿ" ಯ ವ್ಯಾಖ್ಯಾನವನ್ನು ಪರಿಗಣಿಸುವಾಗ, ಮನೆಯ ತಾಣಗಳು ಅಥವಾ ಕೃಷಿಯೇತರ ಭೂಮಿಯನ್ನು ಕಾಯ್ದೆಯ ವ್ಯಾಪ್ತಿಯಿಂದ ಹೊರಗಿಡಲಾಗಿದೆ ಎಂಬ ಅಭಿಪ್ರಾಯವನ್ನು ತೆಗೆದುಕೊಳ್ಳಲು ಇದು ಯಾವುದೇ ಅವಕಾಶವನ್ನು ನೀಡುವುದಿಲ್ಲ. . ಮೊದಲೇ ಹೇಳಿದಂತೆ, ಈ ಕಾಯ್ದೆಯ ಉದ್ದೇಶ, ಮಂಜೂರು ಮಾಡಿದ ಭೂಮಿಯನ್ನು ವರ್ಗಾವಣೆ ಮಾಡುವುದನ್ನು ನಿಷೇಧಿಸುವುದು ಮತ್ತು ಅನುದಾನದ ನಿಯಮಗಳನ್ನು ಅಥವಾ ಅನುದಾನವನ್ನು ಒದಗಿಸುವ ಕಾನೂನನ್ನು ಉಲ್ಲಂಘಿಸಿ ಮಾಡಿದ ಎಲ್ಲಾ ಪರಭಾರೆಗಳನ್ನು ಶೂನ್ಯ ಮತ್ತು ಅನೂರ್ಜಿತವೆಂದು ಘೋಷಿಸುವುದು ಮತ್ತು ಅಂತಹ ಮಂಜೂರು ಮಾಡಿದ ಭೂಮಿಯನ್ನು ಸ್ವಾಧೀನಪಡಿಸಿಕೊಳ್ಳುವುದು ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ

---

[1] ಕರಿಯಪ್ಪ ವಿ. ಎ.ಸಿ ಹಾಸನ್ – ಐ.ಎಲ್.ಆರ್ 1997 ಕರ್ 1723

ಪಂಗಡ ಗ್ರಾಂಟಿಗಳಿಗೆ ವಾಪಸ್ ನೀಡುವುದು. ಸಮಾಜದ ಶ್ರೀಮಂತ ವರ್ಗಗಳಿಂದ ಸುಲಭವಾಗಿ ಬಳಸಿಕೊಳ್ಳಬಹುದಾದ ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡಕ್ಕೆ ಸೇರಿದ ವ್ಯಕ್ತಿಗಳ ಸಾಮಾಜಿಕ ಮತ್ತು ಸಾಂಸ್ಕೃತಿಕ ಹಿನ್ನಲೆ, ಅನಕ್ಷರತೆ, ಬಡತನ ಮತ್ತು ದೌರ್ಬಲ್ಯಗಳನ್ನು ಗಣನೆಗೆ ತೆಗೆದುಕೊಂಡು ಈ ಕಾಯ್ದೆಯನ್ನು ಅಂಗೀಕರಿಸಲಾಗಿದೆ. ಕಾಯಿದೆಯಲ್ಲಿ ಕೃಷಿ ಭೂಮಿಗೆ ಮಾತ್ರ ಅನ್ವಯಿಸುವುದನ್ನು ನಿರ್ಬಂಧಿಸುವ ಯಾವುದೇ ನಿಬಂಧನೆಯ ಅನುಪಸ್ಥಿತಿಯಲ್ಲಿ, ಈ ಕಾಯ್ದೆ ಕೃಷಿ ಭೂಮಿಗೆ ಮಾತ್ರ ಅನ್ವಯಿಸುತ್ತದೆ ಮತ್ತು ಮನೆ ಸೈಟ್ಗಳಿಗೆ ಅಥವಾ ಕೃಷಿಯೇತರ ಭೂಮಿಗೆ ಅನ್ವಯಿಸುವುದಿಲ್ಲ ಎಂಬ ಅಭಿಪ್ರಾಯವನ್ನು ತೆಗೆದುಕೊಳ್ಳಲು ನನಗೆ ಯಾವುದೇ ಸಮರ್ಥನೆ ಇಲ್ಲ."

ಪ್ರಕರಣವೊಂದರಲ್ಲಿ 1944 ಕ್ಕೆ ಮುಂಚೆ ಗ್ರಾಂಟ್ ಆಗಿದೆ ಎಂದು ಪ್ರತಿಪಾದಿಸಲಾಗಿರುತ್ತದೆ, 1944 ರಲ್ಲಿ ಮೊದಲ ಕ್ರಯ ಆಗಿರುವ ಪ್ರತಿಪಾದನೆ ಇರುತ್ತದೆ, 1987 ರಲ್ಲಿ ಕ್ರಯಕ್ಕೆ ಪಡೆದವರೊಬ್ಬರು ಭೂಪರಿವರ್ತನೆ ಮಾಡಿಸಿ ಸೈಟುಗಳನ್ನು ಮಾರಾಟಮಾಡಿರುತ್ತಾರೆ. ಎ.ಸಿ ಕೋರ್ಟ್ ಮತ್ತು ಡಿ.ಸಿ ಕೋರ್ಟ್ ಗಳಲ್ಲಿ ಪ್ರತಿಪಾದನೆಗಳಿಗೆ ವಿರುದ್ಧವಾಗಿ ಮತ್ತು ಅತೀವ ನಿರ್ಲಕ್ಷ್ಯ ಮತ್ತು ಅಜಾಗರೂಕವಾಗಿ ಒಂದೇ ಜಮೀನಿನ ಹಲವು ಪ್ರಕರಣಗಳಲ್ಲಿ ತೀರ್ಪು ಬರೆಯಲಾಗಿರುತ್ತದೆ. ಕೆಳನ್ಯಾಯಾಲಯದ ಪೀಠಾಧಿಕಾರಿಗಳ ನಡವಳಿಕೆ ಬಗ್ಗೆ ಸಾಕ್ಷಿ ಸಮೇತ ಹೈಕೋರ್ಟ್ ಎತ್ತಿ ತೋರಿಸಿರುತ್ತದೆ. ಕ್ರಯವಾದ 56 ವರ್ಷದ ನಂತರ ಮತ್ತು ಕಾಯ್ದೆ ಜಾರಿಯಾದ 26 ವರ್ಷದ ನಂತರ ಅಧಿಕಾರಿಗಳು ತುಳಿತಕ್ಕೊಳಗಾದ ಜನರ ರಕ್ಷಕರಂತೆ ವರ್ತಿಸಿರುವ ರೀತಿಗೆ ಅಸಮಾಧಾನವನ್ನು ವ್ಯಕ್ತಪಡಿಸುತ್ತದೆ.[1]

ಗ್ರಾಂಟ್ ಜಮೀನಿನ ಸ್ವಭಾವವನ್ನು ಭೂ ಪರಿವರ್ತನೆ ಮಾಡಿದ ಮಾತ್ರಕ್ಕೆ ಕಳೆದುಕೊಳ್ಳುವುದಿಲ್ಲ. ಗ್ರಾಂಟ್ ಜಮೀನು ಮಾರಾಟ ಮಾಡಲು ಸರ್ಕಾರ ಅನುಮತಿ ಕೊಡಬೇಕಿರುತ್ತದೆ. ಭೂಪರಿವರ್ತನೆಗೆ ಜಿಲ್ಲಾಧಿಕಾರಿ

---

[1] ಥಾಮಸ್ ವಿ. ಕರ್ನಾಟಕ ರಾಜ್ಯ – 2019 (2) ಕೆ.ಸಿ.ಸಿ.ಆರ್ 1197

ಅನುಮತಿ ಕೊಡುತ್ತಾರೆ. ..... ಈ ಕಾಯ್ದೆ ಪ್ರಾರಂಭವಾದ ನಂತರ ಯಾವುದೇ ಕಾನೂನು, ಒಪ್ಪಂದ, ಸಲಕರಣೆ, ಒಪ್ಪಂದ ಇತ್ಯಾದಿಗಳಲ್ಲಿ ಯಾವುದಾದರಲ್ಲಿ ಏನೇ ಇದ್ದಾಗ್ಯೂ, ಒಬ್ಬ ವ್ಯಕ್ತಿಯು ಸರ್ಕಾರದ ಹಿಂದಿನ ಅನುಮತಿಯಿಲ್ಲದೆ ಯಾವುದೇ ಮಂಜೂರು ಮಾಡಿದ ಭೂಮಿಯನ್ನು ವರ್ಗಾವಣೆ ಮಾಡಿದರೆ ಅಥವಾ ಸ್ವಾಧೀನಪಡಿಸಿಕೊಂಡರೆ, ಅದು ಶೂನ್ಯವಾಗುತ್ತದೆ, ಅಂತಹ ವರ್ಗಾವಣೆಯಿಂದ ಯಾವುದೇ ಹಕ್ಕು ಅಥವ ಮಾಲೀಕತ್ವ ಪ್ರಾಪ್ತವಾಗುವುದಿಲ್ಲ. ಎಂಬ ಸಿದ್ಧಾಂತವನ್ನು ಅರುಹಿ ಮಾನ್ಯ ಕರ್ನಾಟಕ ಹೈಕೋರ್ಟಿನ ಏಕ ಸದಸ್ಯ ಪೀಠ ತೀರ್ಪಿತ್ತಿದೆ.[1]

**ಗ್ರಾಂಟ್ ಜಮೀನು ಭೂಸ್ವಾಧೀನವಾದಾಗ**

ಗ್ರಾಂಟ್ ಜಮೀನು ಭೂಸ್ವಾಧೀನವಾಗಿದ್ದಲ್ಲಿ, ಗ್ರಾಂಟೀ ಸಲ್ಲಿಸುವ ಅರ್ಜಿಯಂತೆ ಪಿ.ಟಿ.ಸಿ.ಎಲ್ ಕಾಯ್ದೆ ಉಲ್ಲಂಘಿಸಿ ಕ್ರಯವಾಗಿದ್ದಲ್ಲಿ, ಭೂಸ್ವಾಧೀನ ಪರಿಪೂರ್ಣ ಆಗಿಲ್ಲದೆ ಹೋದರೆ ಜಮೀನು ಮರಳಿಸಬೇಕು ಅಥವ ಭೂಸ್ವಾಧೀನ ಪೂರ್ಣ ಆಗಿದ್ದರೆ ಪರಿಹಾರಕ್ಕೆ ಗ್ರಾಂಟಿ ಅರ್ಹನೆಂದು ಆದೇಶಿಸಬೇಕು ಎನ್ನುತ್ತದೆ ಹೈಕೋರ್ಟ್.[2]

ಭೂಸ್ವಾಧೀನ ಮಾಡಿಕೊಳ್ಳಲು ಪ್ರಾರಂಭಿಸಿದಾಗ ಎಲ್ಲಾ ಹಿತಾಸಕ್ತರಿಗೆ ನೋಟೀಸು ನೀಡುವುದು ಕಡ್ಡಾಯವಾಗಿರುತ್ತದೆ. ಹೈಕೋರ್ಟ್ ಮುಂದಿನ ಪ್ರಕರಣವೊಂದರಲ್ಲಿ ಕೆ.ಐ.ಡಿ.ಬಿ ಗೆ ಭೂಸ್ವಾಧೀನವಾಗಿರುತ್ತದೆ. ಹಾಲಿ ಪಹಣಿಯಲ್ಲಿ ಇರುವವರಿಗೆ ಮಾತ್ರ ನೋಟೀಸು ನೀಡಲಾಗಿರುತ್ತದೆ. ಹೈಕೋರ್ಟ್ ಹೀಗೆಂದಿದೆ, "ಪಿ.ಟಿ.ಸಿ.ಎಲ್ ವಿಚಾರಣೆಯು ನಡೆಯುತ್ತಿದೆ ಎಂದು ಅಧಿಕಾರಿಗಳ ಜ್ಞಾನದೊಳಗಿದ್ದಾಗ, ವಿಶೇಷ ಭೂಸ್ವಾಧೀನಾಧಿಕಾರಿಯಿಂದ ನಿರೀಕ್ಷಿತ ಕನಿಷ್ಠತೆ, ಭೂಮಿಯಲ್ಲಿ ಆಸಕ್ತಿ ಹೊಂದಿರುವ ವ್ಯಕ್ತಿಗಳ ವಿಳಾಸಗಳನ್ನು ಉಪ-ವಿಭಾಗಾಧಿಕಾರಿ ಅಥವಾ ಜಿಲ್ಲಾಧಿಕಾರಿ ಕಚೇರಿಯಿಂದ ಪಡೆಯುವುದು. ದಾಖಲೆಗಳ ಆಧಾರದ ಮೇಲೆ ಮಾಹಿತಿಯನ್ನು ಪಡೆಯುವುದು ರೋವಿಂಗ್ (ಅಲೆದಾಟದ) ವಿಚಾರಣೆಯ ಸಮನಾಗಿರುವುದಿಲ್ಲ. ಭೂಮಿಯಲ್ಲಿ

---

[1] ಮುನಿಅಕ್ಕಯ್ಯಮ್ಮ ವಿ. ಉಪವಿಭಾಗಾಧಿಕಾರಿ – 2005 (4) ಕೆ.ಸಿ.ಸಿ.ಆರ್ 2953

[2] ಮುನಿರಾಜಪ್ಪ ವಿ. ಉಪವಿಭಾಗಾಧಿಕಾರಿ – 2018 (3) ಕೆ.ಸಿ.ಸಿ.ಆರ್ 2526

ಆಸಕ್ತಿ ಹೊಂದಿರುವ ಎಲ್ಲ ವ್ಯಕ್ತಿಗಳಿಗೆ ನೋಟಿಸ್ ನೀಡುವುದು ಕಡ್ಡಾಯ ಅವಶ್ಯಕತೆಯಾಗಿದೆ ಮತ್ತು ಅದನ್ನು ಪಾಲಿಸದಿರುವುದು ಮತ್ತಷ್ಟು ಸ್ವಾಧೀನ ಪ್ರಕ್ರಿಯೆಯನ್ನು ಕೆಟ್ಟದಾಗಿ ಮಾಡುತ್ತದೆ. ... ಆಸ್ತಿಯ ಹಕ್ಕನ್ನು ಮೂಲಭೂತ ಹಕ್ಕಾಗಿ ನಿಲ್ಲಿಸಲಾಗಿದೆ. ಇದು ಕಾನೂನುಬದ್ಧ ಹಕ್ಕಾಗಿ ಮುಂದುವರೆದಿದೆ. ಇದು ಈಗ ಸಾಂವಿಧಾನಿಕ ಮತ್ತು ಮಾನವ ಹಕ್ಕಾಗಿದೆ. ಭೂಸ್ವಾಧೀನ ಕಾನೂನು ಒಂದು ಸ್ವಾಧೀನಪಡಿಸಿಕೊಳ್ಳುವ ಶಾಸನವಾಗಿದೆ; ಭೂಸ್ವಾಧೀನ ಶಾಸನವನ್ನು ಕಟ್ಟುನಿಟ್ಟಾಗಿ ನಿರ್ಣಯಿಸಬೇಕು, ಏಕೆಂದರೆ ಅದು ಒಬ್ಬ ವ್ಯಕ್ತಿಯ ಒಪ್ಪಿಗೆಯಿಲ್ಲದೆ ತನ್ನ ಜಮೀನನ್ನು ಕಸಿದುಕೊಳ್ಳುತ್ತದೆ. .... ಮೂಲ ಅನುದಾನ ಪಡೆದವರ ಕಾನೂನು ಪ್ರತಿನಿಧಿಗಳ ಹೆಸರನ್ನು ಕಂಡುಹಿಡಿಯದಿರುವುದು, ಪ್ರತಿವಾದಿ ಸಂಖ್ಯೆ 1 ಮತ್ತು 2, ಪಿಟಿಸಿಎಲ್ ವಿಚಾರಣೆಯ ಬಾಕಿ ಇರುವ ಬಗ್ಗೆ ತಿಳಿದಿದ್ದರೂ ಸಹ ಮತ್ತು ಅವುಗಳ ಮೇಲೆ ಸೂಚನೆ ನೀಡದಿರುವಿಕೆಯ ಹಿನ್ನೆಲೆಯಲ್ಲಿ ಮತ್ತು ಅನೇಕ ತೀರ್ಮಾನಗಳ ಹಿನ್ನೆಲೆಯಲ್ಲಿ ನೋಡಲಾದರೆ ಕೆ.ಐ.ಎ.ಡಿ.ಬಿ ಕಾಯ್ದೆಯ ಸೆಕ್ಷನ್ 28 (2) ರಲ್ಲಿರುವ ಕಡ್ಡಾಯ ನಿಬಂಧನೆಗಳನ್ನು ಸಂಪೂರ್ಣವಾಗಿ ಅನುಸರಿಸದಿರುವ ಸಂದರ್ಭವಾಗಿದೆ."[1]

ಕರ್ನಾಟಕ ಹೈಕೋರ್ಟ್ ಮುಂದೆ ಬಂದಂತಹ ಪ್ರಕರಣವೊಂದರಲ್ಲಿ, ಗ್ರಾಂಟ್ ಜಮೀನು ಕೈಗಾರಿಕೆಗೆ ಭೂಸ್ವಾಧೀನವಾಗಿರುತ್ತದೆ, 1961 ರಲ್ಲಿ ಗ್ರಾಂಟ್ ಆಗಿರುವುದು, 1963 ರಲ್ಲಿ ಪರಭಾರೆ ಆಗಿರುತ್ತದೆ, ನಂತರ ಭೂಸ್ವಾಧೀನವೂ ಆಗಿರುತ್ತದೆ ಎ.ಸಿ ಕೋರ್ಟ್ ನಲ್ಲಿ ಭೂಸ್ವಾಧೀನವಾಗಿದೆ ಎಂದು ಅರ್ಜಿ ವಜಾ ಆಗುತ್ತದೆ. ಆದರೆ ಹೈಕೋರ್ಟ್‌ನಲ್ಲಿ ಸದರಿ ಅರ್ಜಿಯನ್ನು ಪುರಸ್ಕರಿಸಿ ಭೂಸ್ವಾಧೀನವಾಗಿದ್ದರೂ ಕೂಡ ಅದರ ಪರಿಹಾರಕ್ಕೆ ಗ್ರಾಂಟಿ ಅರ್ಹರು ಎಂದು ತೀರ್ಪಾಗುತ್ತದೆ. ಆದರೆ ನ್ಯಾಯಾಧೀಶರು ಮಾನವೀಯತೆಯಲ್ಲಿ ಅರ್ಜಿದಾರರ ವಕೀಲರಿಗೆ ಕನಿಷ್ಟ ಕ್ರಯಪತ್ರದಲ್ಲಿನ ಅ ಬೆಲೆಯ ಮೊತ್ತವನ್ನಾದರೂ ಹಿಂತಿರುಗಿಸುವಂತೆ ಕೇಳಲಾಗಿ ಒಪ್ಪಿ ರಾಜಿಯಾಗಿರುತ್ತದೆ.[2]

**ಭೂಸುದಾರಣೆ ಜಮೀನು ಪಿ.ಟಿ.ಸಿ.ಎಲ್ ವ್ಯಾಪ್ತಿಗೆ ಬರುವುದೆ ?**

---

[1] ಪೂಜಾರಿಪೆದ್ದಣ್ಣ ವಿ. ಕರ್ನಾಟಕ ರಾಜ್ಯ – ಐ.ಎಲ್.ಆರ್ 2009 ಕರ್ 1789

[2] ನರಸಿಂಹಯ್ಯ ವಿ. ವಿಶೇಷ ಜಿಲ್ಲಾಧಿಕಾರಿಗಳು – 2006 (1) ಕೆ.ಸಿ.ಸಿ.ಆರ್ 189

ಕರ್ನಾಟಕದ ಉಚ್ಚ ನ್ಯಾಯಾಲಯದ ಪೂರ್ಣ ಪೀಠದ ಮುಂದೆ ಬಂದಂತಹ ಮೊಹಮದ್ ಜಾಫರ್[1] ಎಂಬ ಕೇಸಿನ ತೀರ್ಪಿನ ಅನುಸಾರ ಕರ್ನಾಟಕ ಭೂಸುದಾರಣೆ ಕಾನೂನಿನ ಅನ್ವಯ ಮಂಜೂರಾದ ಜಮೀನು ಪಿ.ಟಿ.ಸಿ.ಎಲ್ ವ್ಯಾಪ್ತಿಗೆ ಬರುವುದಿಲ್ಲ ಎಂದು ವ್ಯಾಖ್ಯಾನಿಸಿರುತ್ತೆ. ಇಲ್ಲಿ ಸರ್ಕಾರ ಸದರಿ ಅನುಭವದಲ್ಲಿ / ಸ್ವಾಧೀನದಲ್ಲಿ ಇರುವ ವ್ಯಕ್ತಿಗೆ ಮಾಲೀಕತ್ವವನ್ನು ಕೊಡುತ್ತದೆ, ಸದರಿ ಆ ರೀತಿಯ ಗ್ರಾಂಟ್ ಆಗುವುದು ಹಿಂದಿನ ಅನುಭವ ಮತ್ತು ಆತನ ಹಕ್ಕಿನಿಂದಲೇ ಹೊರತು ಸರ್ಕಾರ ಹೊಸದಾಗಿ ಗ್ರಾಂಟ್ ಮತ್ತು ಸ್ವಾಧೀನ ಹಸ್ತಾಂತರಿಸಿರುವುದಿಲ್ಲ ಎಂಬ ಸಿದ್ಧಾಂತದೊಂದಿಗೆ ತೀರ್ಪನ್ನು ನೀಡಲಾಗಿದೆ. "ಕೆಎಲ್ಆರ್ (ಭೂಸುದಾರಣೆ) ಕಾಯ್ದೆಯ ಸೆಕ್ಷನ್ 44, ಹೇಳಿದಂತೆ, ಸರ್ಕಾರದಲ್ಲಿ ಭೂಮಿಯನ್ನು ವಹಿಸಿಕೊಳ್ಳುವ ಬಗ್ಗೆ ವ್ಯವಹರಿಸುತ್ತದೆ. .... ಆದಾಗ್ಯೂ, ಸೆಕ್ಷನ್ 44 (ಇ) ಪ್ರಕಾರ ಬಾಡಿಗೆದಾರರ ಭೂಮಿಯನ್ನು ಸ್ವಾಧೀನಪಡಿಸಿಕೊಳ್ಳಲು ಸರ್ಕಾರಕ್ಕೆ ಅರ್ಹತೆ ಇಲ್ಲ ಮತ್ತು ಶಾಶ್ವತ ಬಾಡಿಗೆದಾರರು, ಸಂರಕ್ಷಿತ ಬಾಡಿಗೆದಾರರು ಮತ್ತು ಭೂಮಿಯನ್ನು ಹೊಂದಿರುವ ಇತರ ಬಾಡಿಗೆದಾರರು ಅಂತಹ ಹಕ್ಕು ಅಥವಾ ಸವಲತ್ತುಗಳಿಗೆ ಅರ್ಹರಾಗಿದ್ದಾರೆ ಮತ್ತು ಕಾಯ್ದೆಯಡಿ ಒದಗಿಸಲಾದ ಅಂತಹ ಷರತ್ತುಗಳಿಗೆ ಒಳಪಟ್ಟಿರುತ್ತಾರೆ. ಕೆಎಲ್ಆರ್ ಕಾಯ್ದೆಯ ಸೆಕ್ಷನ್ 44 ರ ದೃಷ್ಟಿಯಿಂದ, ಭೂ ನ್ಯಾಯಮಂಡಳಿಯಿಂದ ಆಕ್ಯುಪೆನ್ಸೀ (ಅನುಭೋಗದ) ಹಕ್ಕನ್ನು ನೀಡುವುದೇ ಹೊರತು ಸರ್ಕಾರದಿಂದಲ್ಲ, ಇದು ಮೊದಲೇ ಅಸ್ತಿತ್ವದಲ್ಲಿರುವ ಹಕ್ಕಿನ ಘೋಷಣೆಯಾಗಿದ್ದು, ಇದನ್ನು ಬಾಡಿಗೆದಾರರಿಗೆ ಸೆಕ್ಷನ್ 45 ರ ಅಡಿಯಲ್ಲಿ ನೀಡಲಾಗಿದೆ ಮತ್ತು ವಹಿಸಿಕೊಳ್ಳಲಾದ ಭೂಮಿಯನ್ನು ಹಕ್ಕಿಗೆ ಒಳಪಡಿಸಲಾಗುತ್ತದೆ, ಅದು ಹಿಡುವಳಿದಾರರಿಗೆ ಆಕ್ಯುಪೆನ್ಸೀ ಹಕ್ಕನ್ನು ನೀಡಲಾಗುತ್ತದೆ. ಕೆಎಲ್ಆರ್ ಕಾಯ್ದೆಯ ಸೆಕ್ಷನ್ 45 ಭೂಮಿಯಲ್ಲಿ ಹಿಡುವಳಿದಾರನಾಗಿರುವ ವ್ಯಕ್ತಿಗೆ ತನ್ನ ಪರವಾಗಿ ನೀಡಲಾಗುವ ಹಕ್ಕನ್ನು ಪಡೆಯಲು ಹಕ್ಕನ್ನು ನೀಡುತ್ತದೆ ಮತ್ತು ಸೆಕ್ಷನ್ 48 ಮತ್ತು 48 ಎ

---

[1] ಮೊಹಮದ್ ಜಾಫ್ಹರ್ ವಿ ಕರ್ನಾಟಕ ರಾಜ್ಯ –ಐ.ಎಲ್.ಆರ್ 2002 ಕರ್ 4693

ನ್ಯಾಯಾಧಿಕರಣಗಳ ಸಂವಿಧಾನ ಮತ್ತು ನ್ಯಾಯಮಂಡಳಿಯ ವಿಚಾರಣೆಯೊಂದಿಗೆ ವ್ಯವಹರಿಸುತ್ತದೆ. 1-3-1974 ರಂದು ವೈಯಕ್ತಿಕವಾಗಿ ಭೂಮಿಯನ್ನು ಕೃಷಿ ಮಾಡುತ್ತಿದ್ದ ಹಿಡುವಳಿದಾರನಿಗೆ ಕೆಎಲ್‌ಆರ್ ಕಾಯ್ದೆಯ ಸೆಕ್ಷನ್ 48 ಎ ಅಡಿಯಲ್ಲಿ ಸರ್ಕಾರವು ಸ್ವಾಧೀನಪಡಿಸಿಕೊಳ್ಳುವ ಹಕ್ಕನ್ನು ಭೂ ನ್ಯಾಯಮಂಡಳಿಯಿಂದ ನೀಡಲಾಗುವುದು. ಆದ್ದರಿಂದ, 1-3-1974 ರಂದು ವೈಯಕ್ತಿಕವಾಗಿ ಭೂಮಿಯನ್ನು ಕೃಷಿ ಮಾಡುತ್ತಿದ್ದ ಹಿಡುವಳಿದಾರನಿಗೆ ನೀಡಲಾಗಿರುವುದು ನ್ಯಾಯಮಂಡಳಿಯು, 1-3-1974 ರಂದು ತನ್ನ ಭೂಮಿಯ ಹಕ್ಕನ್ನು ಘೋಷಿಸಿದೆ. ಬಾಡಿಗೆದಾರರಿಗೆ ಮಾಲೀಕತ್ವವನ್ನು ನೀಡಲು ಈ ಕಾಯ್ದೆಯನ್ನು ಜಾರಿಗೆ ತರಲಾಗಿದೆ ಎಂದು ಕೆಎಲ್‌ಆರ್ ಕಾಯ್ದೆಯ ಮುನ್ನುಡಿ ಸ್ಪಷ್ಟವಾಗಿ ತೋರಿಸುತ್ತದೆ ಮತ್ತು ಆದ್ದರಿಂದ, 1-3-1974 ರಂದು ವೈಯಕ್ತಿಕವಾಗಿ ಭೂಮಿಯನ್ನು ಕೃಷಿ ಮಾಡುತ್ತಿದ್ದ ಹಿಡುವಳಿದಾರರಿಗೆ ಆಕ್ಯುಪೆನ್ಸೀ ಹಕ್ಕನ್ನು ನೀಡುವುದು ಮಾಲೀಕತ್ವದ ಪುರಸ್ಕಾರವಾಗಿದೆ ಎಂಬುದು ಸ್ಪಷ್ಟವಾಗಿದೆ ಕಾಯ್ದೆಯ ಮುನ್ನುಡಿಯ ಪ್ರಕಾರ ಬಾಡಿಗೆದಾರರ ಮೇಲೆ ಮತ್ತು ಫಾರ್ಮ್ 10 ರಲ್ಲಿ ಕಾಯಿದೆಯ ಸೆಕ್ಷನ್ 55 ರ ಅಡಿಯಲ್ಲಿ ನೀಡಲಾದ ನೋಂದಣಿ ಪ್ರಮಾಣಪತ್ರದಲ್ಲಿ ವಿಧಿಸಲಾದ ಕೆಲವು ನಿರ್ಬಂಧಗಳಿಗೆ ಇದು ಒಳಪಟ್ಟಿರುತ್ತದೆ. .. ಇಂತಹ ಸನ್ನಿವೇಶಗಳಲ್ಲಿ, ಪಿಟಿಸಿಎಲ್ ಕಾಯ್ದೆಯಡಿಯಲ್ಲಿ ವ್ಯಾಖ್ಯಾನಿಸಿರುವಂತೆ 'ಮಂಜೂರು ಮಾಡಿದ ಭೂಮಿ'ಯ ವ್ಯಾಪ್ತಿಯಲ್ಲಿ ಆಕ್ಯುಪೆನ್ಸೀ ಹಕ್ಕನ್ನು ಪಡೆದಿದೆ ಎನ್ನಲು ಸಾಧ್ಯವಿಲ್ಲ ಎಂಬುದು ಸ್ಪಷ್ಟವಾಗಿದೆ."

ಸದರಿ ವಿಚಾರದಂತೆಯೇ ಇನಾಂ ರದ್ದತಿ ಅನ್ವಯ ಗ್ರಾಂಟ್ ಆಗಿರುವ ಜಮೀನು ಸದರಿ ಪಿ.ಟಿ.ಸಿ.ಎಲ್ ವ್ಯಾಪ್ತಿಗೆ ಬರುವುದಿಲ್ಲ ಎಂದು ಮುನಿಕೆಂಚಪ್ಪ ನವರ ಕೇಸಿನಲ್ಲಿ[1] ಮಾನ್ಯ ಜಸ್ಟೀಸ್ ಡಿ.ವಿ. ಶೈಲೇಂದ್ರ ಕುಮಾರ್ ರವರು ತೀರ್ಪಿತ್ತಿದ್ದಾರೆ. "ವಿಶೇಷ ಜಿಲ್ಲಾಧಿಕಾರಿ ಕಾಯ್ದೆಯ (ಇನಾಮ್ ರದ್ದತಿ ಕಾಯ್ದೆಯ) ಸೆಕ್ಷನ್ 5 ರ ಅಡಿಯಲ್ಲಿ ತನ್ನ ಅಧಿಕಾರ ವ್ಯಾಪ್ತಿಯನ್ನು ಚಲಾಯಿಸುವ ಆದೇಶದ ವಿಷಯವು ಜಮೀನಿನ ಪ್ರಶ್ನೆಯಾಗಿದೆ. ಈ

---

[1] ಮುನಿಕೆಂಚಪ್ಪ ವಿ. ವಿಶೇಷ ಜಿಲ್ಲಾಧಿಕಾರಿ -2004 (2) ಕೆ.ಸಿ.ಸಿ.ಆರ್ 1025

ಸ್ವರೂಪದ ಆದೇಶವು ಈಗಾಗಲೇ ಹೊಂದಿರುವ ವ್ಯಕ್ತಿಯ ಪೂರ್ವ–ಅಸ್ತಿತ್ವದ ಹಕ್ಕನ್ನು ಗುರುತಿಸಲು ಅಂಗೀಕರಿಸಲ್ಪಟ್ಟಿದೆ. ವಿಶೇಷ ಜಿಲ್ಲಾಧಿಕಾರಿ, ಕರ್ನಾಟಕ ಭೂ ಸುಧಾರಣಾ ಕಾಯ್ದೆಯ ನಿಬಂಧನೆಗಳ ಅಡಿಯಲ್ಲಿ ಭೂ ನ್ಯಾಯಮಂಡಳಿಯ ಕಾರ್ಯಗಳಿಗೆ ಹೋಲುವಂತಹ ಉದ್ದೇಶಗಳಿಗಾಗಿ ವಾಸ್ತವಿಕವಾಗಿ ನ್ಯಾಯಾಧಿಕರಣವಾಗಿ ಕಾರ್ಯನಿರ್ವಹಿಸುತ್ತಾರೆ."

ಗ್ರಾಂಟ್ ಕಂಡೀಷನ್ ಭೂಸುದಾರಣೆ ಕಾನೂನಿನ ಅಡಿಯಲ್ಲಿ ಉಲ್ಲಂಘನೆಯಾಗಿದ್ದಲ್ಲಿ ಅಂತಹ ಉಲ್ಲಂಘಿತರ ವಿರುದ್ಧ ಪಿ.ಟಿ.ಸಿ.ಎಲ್ ಕಾಯ್ದೆಯಲ್ಲಿ ಕ್ರಮ ಜರುಗಿಸಲು ಬರುವುದಿಲ್ಲ ಎಂದು ಅಬ್ದುಲ್ ಹಕ್ ರವರ ಕೇಸಿನಲ್ಲಿ[1] ಕರ್ನಾಟಕ ಉಚ್ಚ ನ್ಯಾಯಾಲಯ ತೀರ್ಪಿತ್ತಿದೆ. ಮುಂದುವರಿದು ಭೂಸುದಾರಣೆ ಕಾಯ್ದೆಯಲ್ಲಿ ಸಂಗ್ರಹವಾದ ಜಮೀನು ವಿಲೇವಾರಿಯಲ್ಲಿ ಜಾತಿ ಆಧಾರದಲ್ಲಿ ಕೆಲವರಿಗೆ ಜಮೀನು ನೀಡಲಾಗುತ್ತದೆ ಅಂತಹ ಸಂಧರ್ಬದಲ್ಲಿ ಪಿ.ಟಿ.ಸಿ.ಎಲ್ ಕಾಯ್ದೆ ಅನ್ವಯಿಸುತ್ತದೆ ಎಂದಿದೆ.

ಪ್ರಸ್ತುತ ಪ್ರಕರಣದಲ್ಲಿ ಅನುದಾನದ ಉದ್ದೇಶವೆಂದರೆ ಅರ್ಜಿದಾರರ ತಂದೆ ಮತ್ತು ಇತರ 20 ಮಂದಿ ಶರಾವತಿ ಯೋಜನೆಯ ಮುಳುಗಡೆಯಿಂದಾಗಿ ಭೂಮಿಯನ್ನು ಕಳೆದುಕೊಂಡ ವ್ಯಕ್ತಿಗಳು. ಆದ್ದರಿಂದ, ನನ್ನ ದೃಷ್ಟಿಯಲ್ಲಿ, ಅರ್ಜಿದಾರನು ಪ್ರಾಸಂಗಿಕವಾಗಿ ಪರಿಶಿಷ್ಟ ಜಾತಿ ಅಥವಾ ಪರಿಶಿಷ್ಟ ಪಂಗಡಕ್ಕೆ ಸೇರಿದವನಾಗಿರುವುದರಿಂದ, ಅನುದಾನವು ಆ ಲೆಕ್ಕದಲ್ಲಿ ಮಾತ್ರ ಎಂದು ಹೇಳಲಾಗುವುದಿಲ್ಲ. ಪರಿಶಿಷ್ಟ ಜಾತಿ ಅಥವಾ ಪರಿಶಿಷ್ಟ ಪಂಗಡದೊಳಗೆ ಬರದ ಇತರ ಜಾತಿ ಮತ್ತು ಸಮುದಾಯಗಳಿಗೆ ಸೇರಿದ ಇತರ 20 ವ್ಯಕ್ತಿಗಳಂತೆ ಭೂಮಿಯನ್ನು ನೀಡಲಾಗಿದೆ ಮತ್ತು ಪ್ರಾಸಂಗಿಕವಾಗಿ ಅರ್ಜಿದಾರರು ಪರಿಶಿಷ್ಟ ಜಾತಿ ಅಥವಾ ಪರಿಶಿಷ್ಟ ಪಂಗಡಕ್ಕೆ ಸೇರಿದವರಾಗಿದ್ದಾರೆ. ಆದ್ದರಿಂದ, ನನ್ನ ದೃಷ್ಟಿಯಲ್ಲಿ, ಅರ್ಜಿದಾರರು ಮಾರಾಟವನ್ನು ರದ್ದುಗೊಳಿಸುವುದರ ಜೊತೆಗೆ ವಶಪಡಿಸಿಕೊಳ್ಳುವಿಕೆ ಮತ್ತು ಪುನಃಸ್ಥಾಪನೆಗಾಗಿ ಪ್ರಾರ್ಥಿಸುವ ಮೂಲಕ ಪಿಟಿಸಿಎಲ್ ಕಾಯ್ದೆಯ

---

[1] ಅಬ್ದುಲ್ ಹಕ್ ವಿ. ಜಿಲ್ಲಾಧಿಕಾರಿ 2002 (3) ಕೆ.ಸಿ.ಸಿ.ಆರ್ 1908

ನಿಬಂಧನೆಗಳನ್ನು ಆಹ್ವಾನಿಸಲಾಗುವುದಿಲ್ಲ. ಎ.ಸಿ, ನನ್ನ ದೃಷ್ಟಿಯಲ್ಲಿ, ಈ ಸ್ಥಾನವನ್ನು ಸರಿಯಾಗಿ ವಿಶ್ಲೇಷಿಸಿದ್ದಾರೆ ಮತ್ತು ಅರ್ಜಿದಾರರ ವಿರುದ್ಧ ಹಿಡಿದಿದ್ದಾರೆ.[1]

ಗ್ರಾಂಟ್ ಆದ ಜಮೀನಿನಲ್ಲಿ ಟೆನೆನ್ಸಿ ಹಕ್ಕು ಕ್ಲೈಮ್ ಮಾಡಿ ಟೆನೆನ್ಸಿ ಹಕ್ಕು ನೀಡಲಾಗಿದ್ದರೂ ಸಹ, ಅದು ಪಿ.ಟಿ.ಸಿ.ಎಲ್ ಕಾಯ್ದೆ ಉಲ್ಲಂಘನೆ ಆಗುತ್ತದೆ, ಯಾಕೆಂದರೆ ಗ್ರಾಂಟ್ ಜಮೀನು ಲೀಸ್ ನೀಡುವುದು ವರ್ಗಾವಣೆ ಮಾಡುವುದು ನಿರ್ಬಂಧವಿದೆ, ಅಂತಹ ಯಾವುದೇ ನ್ಯಾಯಾಲಯದ ತೀರ್ಪು ಬಾಧಿಸದು ಎಂದು ಕಲಂ 11 ರಲ್ಲಿ ಹೇಳಲಾಗಿದೆ.[2]

ಹೈಕೋರ್ಟ್ ಪೂರ್ಣ ಪೀಠ ಜಾಫರ್ ಪ್ರಕರಣ ಮತ್ತು ಈ ಮೇಲಿನ ಪ್ರಕರಣವನ್ನು ವ್ಯಾಖ್ಯಾನಿಸಿ ಹೈಕೋರ್ಟ್ ದ್ವಿಸದಸ್ಯ ಪೀಠ ಹೀಗೆಂದಿದೆ, "ಪೂರ್ಣ ಪೀಠದಲ್ಲಿ ಗೇಣಿದಾರಿಕೆ ಹಕ್ಕನ್ನು ಎಸ್.ಸಿ ಎಸ್.ಟಿ ರವರಿಗೆ ನೀಡುವುದು ಪಿ.ಟಿ.ಸಿ.ಎಲ್ ವ್ಯಾಪ್ತಿಯ ಲ್ಯಾಂಡ್ ಗ್ರಾಂಟ್ ಆಗುತ್ತದೆಯೇ ಎಂದು ಪರಿಗಣಿಸಲಾಗಿತ್ತು, ಆದರೆ ಹಾಲಿ ಕೇಸಿನಲ್ಲಿ ಲ್ಯಾಂಡ್ ಗ್ರಾಂಟ್ ಆದ ಜಮೀನಿನಲ್ಲಿ ಭೂಸುದಾರಣೆ ಮುಖಾಂತರ ಅಕ್ಯುಪೆಂನ್ಸಿ ಹಕ್ಕು ನೀಡಬಹುದೆ ಎಂಬುದು, ನೀಡಲು ಬರುವುದಿಲ್ಲ ಎಂದಿದೆ ಕೋರ್ಟ್.[3]

ಹೈಕೋರ್ಟ್ ಪೂರ್ಣ ಪೀಠ ಜಾಫರ್ ಪ್ರಕರಣಕ್ಕೆ ಏಕಸದಸ್ಯ ಪೀಠದಿಂದ ಕಾನೂನು ಅಂಶವನ್ನು ನಿರ್ದರಿಸಲು ವರ್ಗವಾಗಿರುತ್ತದೆ. ಆದರೆ ಆ ಸಮಯದಲ್ಲಿ ದ್ವಿಸದಸ್ಯ ಪೀಠ ನೀಡಿದ ತೀರ್ಪನ್ನು ನ್ಯಾಯಾಲಯದ ಗಮನಕ್ಕೆ ತರಲಾಗಿರುವುದಿಲ್ಲ. ಸದರಿ ದ್ವಿಸದಸ್ಯ ಪೀಠದಲ್ಲಿ ಭೂಸುಧಾರಣೆ ಕಾನೂನಿನಲ್ಲಿ ಗ್ರಾಂಟ್ ಆದ ಜಮೀನು ಪಿ.ಟಿ.ಸಿ.ಎಲ್ ವ್ಯಾಪ್ತಿಗೆ ಬರುತ್ತದೆ ಎಂದು ತೀರ್ಪು ಹೊರಬಂದಿದೆ.[4] <u>ಪೂರ್ಣ ಪೀಠದ ತೀರ್ಪು ಅನ್ವಯ</u>

---

[1] ಕೃಷ್ಣಮೂರ್ತಿ ವಿ. ಜಿಲ್ಲಾಧಿಕಾರಿಗಳು – 2002 (3) ಕೆ.ಸಿ.ಸಿ.ಆರ್ 1952

[2] ಯೋಗೀಶ್ ವಿ. ಕರ್ನಾಟಕ ರಾಜ್ಯ – ಐ.ಎಲ್.ಆರ್ 2013 ಕರ್ 5526 (ಡಿ.ಬಿ)

[3] ತೀರ್ಥರಾಮು ವಿ. ಕರ್ನಾಟಕ ರಾಜ್ಯ – 2011 (1) ಕೆ.ಸಿ.ಸಿ.ಆರ್ 764

[4] ಲಲಿತ ವಿ. ಜಿಲ್ಲಾಧಿಕಾರಿಗಳು – 2000 (6) ಕರ್.ಎಲ್.ಜೆ 92

ಆಗುವುದಾದರೂ, ಇಲ್ಲಿ ಕಾಯ್ದೆಯಲ್ಲಿನ ಉಲ್ಲೇಕ ಗಮನಿಸುವುದು ಸೂಕ್ತ[1] ಗ್ರಾಂಟ್ ಜಮೀನು ಎಂದರೆ ಕಲಂ 3 (ಬಿ) ರಲ್ಲಿ ಹೀಗಿದೆ, "'ಮಂಜೂರಾದ ಭೂಮಿ' ಎಂದರೆ ಪರಿಶಿಷ್ಟ ಜಾತಿ ಅಥವಾ ಪರಿಶಿಷ್ಟ ಪಂಗಡಕ್ಕೆ ಸೇರಿದ ವ್ಯಕ್ತಿಗೆ ಸರ್ಕಾರವು ಮಂಜೂರು ಮಾಡಿದ ಅಥವ ಹಂಚಿಕೆ ಮಾಡಿದ ಯಾವುದೇ ಭೂಮಿ ಮತ್ತು ಕೃಷಿ ಸುಧಾರಣೆಗಳು ಅಥವಾ ಭೂ ಗರಿಷ್ಟ ಮಿತಿ ಅಥವಾ ಇನಾಮ್ ರದ್ದತಿ ಸಂಬಂಧಿಸಿದಂತೆ ಸದ್ಯಕ್ಕೆ ಜಾರಿಯಲ್ಲಿರುವ ಸಂಬಂಧಪಟ್ಟ ಕಾನೂನಿನಡಿಯಲ್ಲಿ ಅಂತಹ ವ್ಯಕ್ತಿಗಳಿಗೆ ನಿಗದಿಪಡಿಸಿದ ಅಥವಾ ನೀಡಲಾದ ಭೂಮಿಯನ್ನು ಒಳಗೊಂಡಿದೆ. ಆನುವಂಶಿಕ ಕಚೇರಿ ಅಥವಾ ಹಕ್ಕುಗಳಿಗೆ ಸಂಬಂಧಿಸಿದ ಜಮೀನು ಹೊರತುಪಡಿಸಿ, 'ಮಂಜೂರು' ಎಂಬ ಪದವನ್ನು ಅದಕ್ಕೆ ಅನುಗುಣವಾಗಿ ನಿರ್ಣಯಿಸಲಾಗುತ್ತದೆ." ಇಲ್ಲಿ ಗ್ರಾಂಟ್ ಜಮೀನು ಎಂದು ನಿರ್ಣಯಿಸಲು ಈ ರೀತ್ಯ ಮಾನದಂಡ ನೀಡಲಾಗಿದೆ (1) ಗ್ರಾಂಟಿ ಪರಿಶಿಷ್ಟ ಜಾತಿ ಅಥವಾ ಪರಿಶಿಷ್ಟ ಪಂಗಡಕ್ಕೆ ಸೇರಿದ ವ್ಯಕ್ತಿಯಾಗಿರಬೇಕು. (2) ಗ್ರಾಂಟಿಗೆ ಸರ್ಕಾರವು **ಯಾವುದೇ ಭೂಮಿಯನ್ನು** ಮಂಜೂರು ಮಾಡಿರಬೇಕು ಅಥವ ಹಂಚಿಕೆ ಮಾಡಿರಬೇಕು (3) ಸದ್ಯಕ್ಕೆ ಜಾರಿಯಲ್ಲಿ ಇರುವ ಈ ಕೆಳಕಂಡ ವಿಷಯದ ಕಾನೂನಿನ ಅಡಿಯಲ್ಲಿ ಮಂಜೂರಾದ ಜಮೀನು **ಸಹ ಒಳಗೊಂಡಿದೆ** (ಎ) ಕೃಷಿ ಸುಧಾರಣೆಗಳು (ಬಿ) ಭೂ ಗರಿಷ್ಟ ಮಿತಿ (ಸಿ) ಇನಾಮ್ ರದ್ದತಿ. (4) **ಆನುವಂಶಿಕ ಕಚೇರಿ ಅಥವಾ ಹಕ್ಕುಗಳಿಗೆ** ಸಂಬಂಧಿಸಿದ ಜಮೀನು ಗ್ರಾಂಟ್ ಈ ವ್ಯಾಪ್ತಿಗೆ ಬರುವುದಿಲ್ಲ. ಅಲ್ಲಿಗೆ ಗ್ರಾಂಟಿದಾರರು ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡಕ್ಕೆ ಸೇರಿದವರಾಗಿದ್ದರೆ, ಗ್ರಾಂಟಿಗೆ ಸರ್ಕಾರವು ಯಾವುದೇ ಭೂಮಿಯನ್ನು ಮಂಜೂರು ಮಾಡಿದ್ದರೆ ಅಥವ ಹಂಚಿಕೆ ಮಾಡಿದ್ದರೆ ಅಂತಹ ಜಮೀನು ಗ್ರಾಂಟ್ ಜಮೀನು ಆಗುತ್ತದೆ. ಅದರ ಜೊತೆಯಲ್ಲಿ ಕೃಷಿ ಸುಧಾರಣೆಗಳು ಅಥವಾ ಭೂ ಗರಿಷ್ಟ ಮಿತಿ ಅಥವಾ ಇನಾಮ್ ರದ್ದತಿ ಸಂಬಂಧಿಸಿದಂತೆ ಸದ್ಯಕ್ಕೆ ಜಾರಿಯಲ್ಲಿರುವ ಸಂಬಂಧಪಟ್ಟ ಕಾನೂನಿನಡಿಯಲ್ಲಿ ಅಂತಹ ವ್ಯಕ್ತಿಗಳಿಗೆ ನಿಗದಿಪಡಿಸಿದ ಅಥವಾ ನೀಡಲಾದ

---

[1] ಲೇಖಕರ ಅಭಿಪ್ರಾಯ

ಭೂಮಿಯನ್ನು ಒಳಗೊಂಡಿದೆ. ಇಲ್ಲಿ ಆನುವಂಶಿಕ ಕಚೇರಿ ಅಥವಾ ಹಕ್ಕುಗಳಿಗೆ ಸಂಬಂಧಿಸಿದ ಜಮೀನು ಈ ಗ್ರಾಂಟ್ ವ್ಯಾಪ್ತಿಗೆ ಬರುವುದಿಲ್ಲ. ಇದು ಕಲಂ 3 (ಬಿ) ಅಡಿಯಲ್ಲಿ ಸ್ಪಷ್ಟವಾಗುವ ಕಾನೂನು ವ್ಯಾಪ್ತಿ. (ಕಾನೂನು ವ್ಯಾಖ್ಯಾನವು ವಿಭಿನ್ನವಾಗಿರಬಹುದು ಆದರೆ ಕಾನೂನಿಗೆ ಯಾವುದೇ ಶಬ್ದವನ್ನು ಸೇರಿಸದೆ ವ್ಯಾಖ್ಯಾನಿಸಿದಾಗ ಈ ಅರ್ಥ ಬರುತ್ತದೆ, ಇದೇ ಪೂರ್ಣ ಪೀಠದ ಅಭಿಪ್ರಾಯವೂ ಆಗಿದೆ.) ಇಲ್ಲಿ ಅನುವಂಶಿಕ ಕಚೇರಿ ಅಥವಾ ಹಕ್ಕುಗಳು ರೀತ್ಯ (ಎ) ಕೃಷಿ ಸುಧಾರಣೆಗಳು (ಬಿ) ಭೂ ಗರಿಷ್ಟ ಮಿತಿ (ಸಿ) ಇನಾಮ್ ರದ್ದತಿ. ಯಂತೆ ಜಮೀನು ಗ್ರಾಂಟ್ ಅಗಿಲ್ಲದೆ ಹೋದಲ್ಲಿ ಅದು ಪಿ.ಟಿ.ಸಿ.ಎಲ್ ವ್ಯಾಪ್ತಿಗೆ ಬರುತ್ತದೆ.

ಕರ್ನಾಟಕ ವಿಲೇಜ್ ಅಫೀಸಸ್ ಅಬಾಲಿಷನ್ ಕಾಯ್ದೆ 1961 ರಲ್ಲಿ ರೀಗ್ರಾಂಟ್ ಆದ ಜಮೀನು ಪಿ.ಟಿ.ಸಿ.ಎಲ್ ಕಾಯ್ದೆ ವ್ಯಾಪ್ತಿಗೆ ಬರುತ್ತದೆಯೇ, ಕಲಂ 2(ಎನ್) ರಲ್ಲಿ 'ವಿಲೇಜ್ ಅಫೀಸಸ' ವ್ಯಾಖ್ಯಾನದಲ್ಲಿ ಅನುವಂಶಿಕವಾಗಿ ಸಂವಿಧಾನ ಪ್ರಾರಂಬಕ್ಕೆ ಮುಂಚೆ ಇದ್ದ ವಿಲೇಜ್ ಅಫೀಸ್ ಎಂದಿದೆ. ಇದರಲ್ಲಿ ಆದ ಗ್ರಾಂಟ್/ರೀಗ್ರಾಂಟ್ ಜಮೀನು ಪಿ.ಟಿ.ಸಿ.ಎಲ್ ಕಾಯ್ದೆ ವ್ಯಾಪ್ತಿಗೆ ಬರುವುದಿಲ್ಲ.[1]

ಕರ್ನಾಟಕ ಹೈಕೋರ್ಟಿನ ಏಕಸದಸ್ಯ ಪೀಠದಲ್ಲಿ, ಅಬಾಲಿಷನ್ ಕಾಯ್ದೆ ಅಡಿಯಲ್ಲಿ ರೀಗ್ರಾಂಟ್ ಆದ ಜಮೀನು ಪಿ.ಟಿ.ಸಿ.ಎಲ್ ವ್ಯಾಪ್ತಿಗೆ ಬರುವುದೇ ಎಂಬ ಅಂಶ ಚರ್ಚೆಯಲ್ಲಿರುತ್ತದೆ. ಅಲ್ಲಿ , ಕಾನೂನು ಅಂಶವನ್ನು ವಾದ ಮಾಡುತ್ತ ನ್ಯಾಯಾಧೀಶರ ಮನವರಿಕೆ ಮಾಡಿಕೊಡಲಾಗುತ್ತದೆ, ಅಬಾಲಿಷನ್ ಕಾಯ್ದೆಯಡಿ ಮಾತ್ರವಲ್ಲದೆ ಕರ್ನಾಟಕ ಭೂ ಕಂದಾಯ ಕೋಡ್, 1888 ರ ಅಡಿಯಲ್ಲಿ ಇರುವ ನಿಬಂದನೆಗಳು ಹಿಂದಿನ ಸಂದರ್ಭಗಳ ಕೇಸುಗಳಲ್ಲಿ ವಿಷಯಗಳನ್ನು ಪರಿಶೀಲಿಸಿದ ಕಲಿತ ನ್ಯಾಯಾಧೀಶರ ಗಮನವನ್ನು ಸಂಪೂರ್ಣವಾಗಿ ತಪ್ಪಿಸಿಕೊಂಡಿದೆ. ಪಿಟಿಸಿಎಲ್ ಕಾಯ್ದೆಯ, ವಿಶೇಷವಾಗಿ ಬಹಳ ಮುಖ್ಯವಾದ ಶಾಸನಬದ್ಧ ನಿಬಂಧನೆಗಳು ಗಮನಕ್ಕೆ

---

[1] ಗಂಗವ್ವ ವಿ. ಗೌಡಪ್ಪ – ಮನು/ ಕೆ.ಎ/ 1480/ 2015 (ಡಿ.ಬಿ)

ಬಂದಿಲ್ಲ ಮತ್ತು ಆದ್ದರಿಂದ ಮೊದಲ ಕೇಸುಗಳಲ್ಲಿ, ನಿರ್ಧರಿಸಿದ ಪ್ರಕರಣಗಳಿಂದ ಸ್ವತಂತ್ರವಾಗಿ, ಕೆಎಲ್‌ಆರ್ ಕೋಡ್ನ ನಿಬಂಧನೆಗಳೊಂದಿಗೆ ಓದಿದ ಅಬಾಲಿಷನ್ ಕಾಯ್ದೆಯ ನಿಬಂಧನೆಗಳ ಆಳವಾದ ಪರಿಶೀಲನೆ ಅಗತ್ಯವಾಗಿರುತ್ತದೆ. ಅಬಾಲಿಷನ್ ಕಾಯ್ದೆಯ ಸೆಕ್ಷನ್ 5, ಸೆಕ್ಷನ್ 3 (1) (ಬಿ) ಮತ್ತು 3 (1) (ಎ) ನಲ್ಲಿ ಸೂಚಿಸಿದಂತೆ ಇನಾಮ್‌ಗಳ ನಿರ್ಮೂಲನೆಯ ಪರಿಣಾಮಗಳ ಸ್ಪಷ್ಟವಾಗಿದೆ. ಕಲಂ 10 (3) (ಬಿ) ಮತ್ತು 14 ರೊಂದಿಗೆ ಕಾಯ್ದೆಯ ಸೆಕ್ಷನ್ 5 (2) ನ ಹೆಚ್ಚಿನ ಪರಿಶೀಲನೆ ಇದೆ ಎಂದು ಸೂಚಿಸುತ್ತದೆ. ಇಲ್ಲಿ ರಿಗ್ರಾಂಟ್ ಆಗಿದ್ದರೂ ಸರ್ಕಾರದಲ್ಲಿ ನಿಹಿತವಾಗಿರುವ ಜಮೀನು ಗ್ರಾಂಟ್ ರೀತಿಯಲ್ಲೇ ನೀಡಲಾಗಿದೆ ಎಂಬ ಅರ್ಥ ಬರುತ್ತದೆ ಎಂಬ ವಾದ ವನ್ನು ಪುರಸ್ಕರಿಸಿ ಗ್ರಾಂಟ್ ಆದ ಜಮೀನನ್ನು ವಶಪಡಿಸಿಕೊಂಡು ಸರ್ಕಾರ ಪ್ಲಾಟ್ ಕಟ್ಟಿ ಗ್ರಾಂಟಿಗಳಿಗೆ ಕೊಡಿ ಎಂಬ ಸಂಧಾನಿತ ತೀರ್ಪು ನೀಡಲಾಗಿದೆ.[1]

**ಗ್ರಾಂಟ್ ಜಮೀನು – ಬ್ಯಾಂಕ್ ಆಧಾರ – ಹರಾಜು**

ಗ್ರಾಂಟ್ ಜಮೀನು – ಬ್ಯಾಂಕ್ ಆಧಾರ – ಹರಾಜು ಮಾಡಿ ಪರಭಾರೆಗೆ ಅನುಮತಿ ಕಡ್ಡಾಯವೆ ?. ಪಿ.ಟಿ.ಸಿ.ಎಲ್ ಕಾಯ್ದೆಯಲ್ಲಿ ಕಲಂ 7 ರಲ್ಲಿ ಸರ್ಕಾರದ ಪರವಾಗಿ ವರ್ಗಾವಣೆ ಮಾಡಿದ ಗ್ರಾಂಟ್ ಜಮೀನನ್ನು ವರ್ಗಾವಣೆ ಮಾಡಿದರೆ ಕಾಯ್ದೆ ಅನ್ವಯವಾಗದು. ಅದೇ ರೀತಿಯಲ್ಲಿ ಕೇಂದ್ರ ಸರ್ಕಾರ, ಸ್ಥಳೀಯ ಪ್ರಾಧಿಕಾರ ಅಥವ ಬ್ಯಾಂಕ್ ಗೆ ಕಾಯ್ದೆ ಪ್ರಾರಂಬಕ್ಕೆ ಮುನ್ನ ಆಗಲೀ ನಂತರ ಆಗಲೀ ಗ್ರಾಂಟ್ ಜಮೀನು ವರ್ಗಾವಣೆ ಮಾಡಿದ್ದರೆ ಕಾಯ್ದೆ ಅನ್ವಯಿಸದು. ಇಲ್ಲಿ ಸರ್ಕಾರ ಎಂದರೆ ಕರ್ನಾಟಕ ಸರ್ಕಾರವೆಂದೂ. ವರ್ಗಾವಣೆ ಎಂದರೆ ಮಾರಾಟ, ಕೊಡುಗೆ, ಬದಲಾವಣೆ, ಅಡಮಾನ (ಸ್ವಾಧೀನದಿಂದ ಅಥವ ಹೊರತುಪಡಿಸಿ) ಲೀಸ್ (ಗೇಣಿದಾರಿಕೆ) ಅಥವ ಯಾವುದೇ ಇತರೆ ವ್ಯವಹರಣೆಗಳು, ಹೊಣೆಗಾರಿಕೆ ಉಂಟುಮಾಡುವ ಕರಾರು ಅಥವ ಮಾರಾಟಕ್ಕೆ ಕರಾರು ಅಥವ ಬದಲಾವಣೆಗೆ ಕರಾರು ಅಥವ ಲೀಸ್ಗಾಗಿ ಕರಾರು ಅಥವ ಯಾವ್ದೇ ಇತರೆ ವ್ಯವಹರಣೆಗೆ ಕರಾರು ಒಳಗೊಂಡಿರುತ್ತದೆ.

---

[1] ರಾಮಚಂದ್ರ ವಿ. ಕರ್ನಾಟಕ ರಾಜ್ಯ – ಮನು/ ಕೆ.ಎ/ 2247/ 2011

ಇಂತಹ ವರ್ಗಾವಣೆಯನ್ನು ಮೇಲೆ ತಿಳಿಸಿದ ಸರ್ಕಾರ ಮತ್ತು ಉಲ್ಲೇಖಿತ ಸಂಸ್ಥೆಗಳಿಗೆ ಮಾತ್ರ ಮಾಡುವ ಹಕ್ಕನ್ನು ಗ್ರಾಂಟಿಗೆ ನೀಡಲಾಗಿರುತ್ತದೆ.

ಬ್ಯಾಂಕ್ ವ್ಯಾಪ್ತಿಯಲ್ಲಿ ಕೋಆಪರೇಟೀವ್ ಸೊಸೈಟಿ, ಕೋಆಪರೇಟೀವ್ ಬ್ಯಾಂಕ್, ಆರ್.ಬಿ.ಐ, ಬ್ಯಾಂಕಿಂಗ್ ರೆಗ್ಯುಲೇಷನ್ ಅಡಿಯಲ್ಲಿ ಸ್ಥಾಪಿತ ಬ್ಯಾಂಕುಗಳು, ಎಸ್.ಬಿ.ಐ ಕಾಯ್ದೆಯಡಿಯಲ್ಲಿನ ಬ್ಯಾಂಕ್ ಮತ್ತು ಅಂಗಸಂಸ್ಥಾ ಬ್ಯಾಂಕಗಳು, ಬ್ಯಾಂಕಿಂಗ್ ಕಂಪನಿ ಕಾಯ್ದೆ ಕೆಳಗೆ ರಚಿತ ಹೊಸ ಬ್ಯಾಂಕುಗಳು, ವ್ಯವಸಾಯ ರಿಫೈನಾನ್ಸ್ ಕಾರ್ಪೊರೇಷನ್ ಕಾಯ್ದೆಯಲ್ಲಿ ಸ್ಥಾಪಿತ ಕಾರ್ಪೊರೇಷನ್, ಕರ್ನಾಟಕ ಆಗ್ರೋ ಇಂಡಸ್ಟ್ರೀ ಕಾರ್ಪೊರೇಷನ್, ಅಗ್ರಿಕಲ್ಚರಲ್ ರಿಫೈನಾನ್ಸ್ ಕಾರ್ಪೊರೇಷನ್, ಕಂಪನಿ ಕಾಯ್ದೆಯಲ್ಲಿ ರಚಿತವಾಗಿರುವುದು, ಸರ್ಕಾರ ಅಥವ ಕೇಂದ್ರ ಸರ್ಕಾರದ ಒಡೆತನದ ಇತರೆ ಯಾವುದೇ ಹಣಕಾಸು ಸಂಸ್ಥೆ ಅಥವ ಅದರಿಂದ ಅಧಿಸೂಚಿತ ಬ್ಯಾಂಕ್. ಈ ವಿವರಣೆಗಳನ್ನು ಪಿ.ಟಿ.ಸಿ.ಎಲ್ ಕಾಯ್ದೆಯ ಕಲಂ 3 ರಲ್ಲಿ ಕೊಡಲಾಗಿದೆ. ಇಲ್ಲಿ ಸೌಹಾರ್ದ ಸಹಕಾರಿ ಈ ವ್ಯಾಪ್ತಿಯಲ್ಲಿ ಬರುತ್ತದೆ.[1]

ಇಲ್ಲಿ ಅಂತಹ ಸಂಸ್ಥೆಗಳಿಗೆ ವರ್ಗಾವಣೆ ನಿರ್ಬಂದ ಇಲ್ಲ ಎಂದು ಕಾನೂನು ಹೇಳುತ್ತದೆ ಹೊರತು, ಅಂತಹ ವರ್ಗಾವಣೆ ಮಾಡಿದ ಅರ್ಥಾತ್ ಅಡಮಾನ ಮಾಡಿದ ಜಮೀನು ಸುಸ್ತಿ ಸಾಲಕ್ಕೆ ಹರಾಜು ಹಾಕಬಹುದೇ ಎಂಬ ಪ್ರಶ್ನೆಗೆ ಕರ್ನಾಟಕ ಹೈಕೋರ್ಟ್ ವ್ಯಾಖ್ಯಾನಿತ ತೀರ್ಪು ನೀಡಿದೆ.

---

[1] ಕರ್ನಾಟಕ ಸೌಹಾರ್ದ ಸಹಕಾರಿ ಕಾಯ್ದೆ 1997 ಕಲಂ 2 (ಇ) ಹೀಗೆಂದಿದೆ ಸಹಕಾರಿ ಎಂದರೆ ಬ್ಯಾಂಕಿಂಗ್ ವ್ಯವಹಾರವನ್ನು ನಡೆಸುವ, ಸಹಕಾರಿ ಬ್ಯಾಂಕ್‌ನ್ನು ಒಳಗೊಂಡಂತೆ 5ನೇ ಪ್ರಕರಣದ ಅಡಿ ನೋಂದಾಯಿತವಾದ ಅಥವಾ ನೋಂದಾಯಿಸಲಾಗಿದೆಯೆಂದು ಭಾವಿಸಲಾದ ಮತ್ತು ಅದರ ಹೆಸರಿನಲ್ಲಿ 'ಸೌಹಾರ್ದ ಸಹಕಾರಿ' ಎಂಬ ಪದಗಳನ್ನುಳ್ಳ ಒಂದು ಸಹಕಾರಿ; ಮತ್ತು ಬ್ಯಾಂಕಿಂಗ್ ನಿಯಂತ್ರಣ ಅಧಿನಿಯಮ, 1949 (1949ರ ಕೇಂದ್ರ ಅಧಿನಿಯಮ ಸಂಖ್ಯೆ 10), ಭಾರತೀಯ ರಿಸರ್ವ್ ಬ್ಯಾಂಕ್ ಅಧಿನಿಯಮ, 1934 (1934ರ ಕೇಂದ್ರ ಅಧಿನಿಯಮ ಸಂಖ್ಯೆ 2), ಠೇವಣಿ ವಿಮಾ ಮತ್ತು ಸಾಲ ಖಾತರಿ ನಿಗಮ ಅಧಿನಿಯಮ, 1961 (1961ರ ಕೇಂದ್ರ ಅಧಿನಿಯಮ ಸಂಖ್ಯೆ 47) ಮತ್ತು ರಾಷ್ಟ್ರೀಯ ಕೃಷಿ ಮತ್ತು ಗ್ರಾಮೀಣಾಭಿವೃದ್ಧಿ ಬ್ಯಾಂಕ್ ಅಧಿನಿಯಮ, 1981 (1981ರ ಕೇಂದ್ರ ಅಧಿನಿಯಮ ಸಂಖ್ಯೆ 61)ರ ಉದ್ದೇಶಗಳಿಗಾಗಿ, ಇದು ಒಂದು ಸಹಕಾರ ಸಂಘ ಎಂದು ಭಾವಿಸತಕ್ಕದ್ದು."

ಸುಸ್ತಿ ಸಾಲಕ್ಕೆ ಗ್ರಾಂಟಿ ಸೊಸೈಟಿಗೆ ಜಮೀನು ಕ್ರಯಕ್ಕೆ ಬರೆದುಕೊಡಲು ಪಿ.ಟಿ.ಸಿ.ಎಲ್ ಕಾಯ್ದೆ ಅಡ್ಡಿ ಅನುಮತಿ ಇದೆ, ಆದರೆ ವ್ಯವಸಾಯಗಾರರಲ್ಲದವರು ಜಮೀನು ಖರೀದಿಸಲು ಸರ್ಕಾರಿ ಅನುಮತಿ ಕಡ್ಡಾಯವಾಗುತ್ತದೆ. ಕಲಂ 79ಬಿ ಕರ್ನಾಟಕ ಭೂಸುಧಾರಣೆ ಕಾಯ್ದೆ ಅಡಿಯಲ್ಲಿ ಅಂತಹ ಸಂಸ್ಥೆಗಳು ವ್ಯವಸಾಯ ಜಮೀನು ಹೊಂದುವುದು ನಿರ್ಬಂದವಿರುತ್ತದೆ. ಇಲ್ಲಿ ಬ್ಯಾಂಕ್ ಸುಸ್ತಿ ಸಾಲಕ್ಕೆ ಕೋರ್ಟ್/ ಸಕ್ಷಮ ಪ್ರಾಧಿಕಾರದ ಆದೇಶ/ ಅವಾರ್ಡ್ ಪಡೆದುಕೊಂಡು ಹರಾಜು ಮಾರಾಟಕ್ಕೆ ಸರ್ಕಾರದ ಅನುಮತಿ ಪಿ.ಟಿ.ಸಿ.ಎಲ್ ಕಾಯ್ದೆಯ ಕಲಂ 4(2) ರಲ್ಲಿ ಪಡೆಯುವ ಪ್ರಮೇಯ ಇಲ್ಲ ಎಂದು ಹೈಕೋರ್ಟ್ ವ್ಯಾಖ್ಯಾನಿಸಿದೆ. ಆದರೆ ಕಲಂ 81 (1) (ಎ) ಕರ್ನಾಟಕ ಭೂಸುಧಾರಣೆ ಕಾಯ್ದೆಯಲ್ಲಿ ಸರ್ಕಾರ ಮತ್ತು ಸರ್ಕಾರದ ಉಲ್ಲೇಕಿತ ಅಂಗಸಂಸ್ಥೆಗಳು ವ್ಯವಸಾಯ ಭೂಮಿಯನ್ನು ಖರೀದಿಸಲು ಧಾನ ಪಡೆಯಲು ಅಥವ ಅಡಮಾನ ಪಡೆಯಲು ನಿರ್ಬಂದವಿಲ್ಲ. ಇಲ್ಲಿ ಸಹಕಾರಿ ಸೊಸೈಟಿಯನ್ನು ಈ ವ್ಯಾಪ್ತಿಯಲ್ಲಿ ನೀಡಲಾಗಿಲ್ಲ. ಆದರೆ ಕಲಂ 81 (1) (ಬಿ) ಅಡಿಯಲ್ಲಿ ವ್ಯವಸಾಯ ಜಮೀನನ್ನು ಅಥವ ಅದರಲ್ಲಿನ ಆಸಕ್ತಿಯನ್ನು ಅಡಮಾನ ಮಾಡುವುದಕ್ಕೆ ಸಾಲದ ಭದ್ರತೆಗೆ ಅಥವ ಇತರೆ ಸೇವೆಯನ್ನು ಕೊಟ್ಟ ಸೊಸೈಟಿಗೆ/ ಬ್ಯಾಂಕಿಗೆ/ ಕಂಪನಿಗೆ .. ಈಡು ಮಾಡುವುದಕ್ಕೆ ಅಧಿಕಾರ ನೀಡಲಾಗಿದೆ. ಇಲ್ಲಿ ಖರೀದಿಗೆ ಅವಕಾಶವನ್ನು ಬ್ಯಾಂಕಿಗಾಗಲೀ ಸಹಕಾರಿ ಸೊಸೈಟಿಗೆ ಆಗಲೀ ನೀಡಲಾಗಿಲ್ಲ.

ಕರ್ನಾಟಕ ಹೈಕೋರ್ಟಿನ ಪ್ರಕರಣವೊಂದರಲ್ಲಿ[1] ಕೋಆಪರೇಟೀವ್ ಅಗ್ರಿಕಲ್ಚರಲ್ ಅಂಡ್ ರೂರಲ್ ಡೆವಲಪ್ಮೆಂಟ್ ಬ್ಯಾಂಕ್ ನವರು ಎಸ್.ಸಿ. ಎಸ್.ಟಿ ರವರ ಜಮೀನಿನ ಸುಸ್ತಿ ಸಾಲದ ಹರಾಜಿನಲ್ಲಿ ವ್ಯಕ್ತಿಯೊಬ್ಬ ಕೊಂಡುಕೊಳ್ಳುತ್ತಾರೆ. ಸ್ವಾಧೀನ ನೀಡಿಲ್ಲ ಎಂದು ಸಿವಿಲ್ ದಾವೆಯನ್ನು ಸ್ವಾಧೀನಕ್ಕಾಗಿ ಹೂಡುತ್ತಾನೆ. ಅಲ್ಲಿ ಗ್ರಾಂಟಿ ಪರವಾಗಿ ತಕರಾರು ಸಲ್ಲಿಸಿ ಅಂತಹ ಹರಾಜಿನಲ್ಲಿ ಕೊಳ್ಳಲು ಕಲಂ 4(3) ಪಿ.ಟಿ.ಸಿ.ಎಲ್ ಕಾಯ್ದೆಯಂತೆ ಸರ್ಕಾರದ

---

[1] ಲಕ್ಷ್ಮಮ್ಮ ವಿ. ಅಹಮದ್ ಕುಟ್ಟಿ – 2008 (3) ಕೆ.ಸಿ.ಸಿ.ಆರ್ 2114

ಅನುಮತಿ ಕಡ್ಡಾಯ ಹಾಗಾಗಿ ದಾವ ಸಿಂದುವಲ್ಲವೆಂಬ ವಾದವನ್ನು ಕೆಳ ನ್ಯಾಯಾಲಯ ಪುರಸ್ಕರಿಸುತ್ತದೆ. ಮೊದಲನೇ ಅಪೀಲು ನ್ಯಾಯಾಲಯ ಇಂತಹ ವರ್ಗಾವಣೆಯು ಕಲಂ 7 ರಲ್ಲಿ ವಿನಾಯಿತಿ ಇದೆ ಎಂದು ಅಪೀಲು ಪುರಸ್ಕರಿಸಿರುತ್ತೆ. ಎರಡನೇ ಮೇಲ್ಮನವಿ ಹೈಕೋರ್ಟಿನ ಮುಂದೆ ಬಂದಾಗ ಈ ಬಗ್ಗೆ ಈ ರೀತಿ ವ್ಯಾಖ್ಯಾನಿಸಿದೆ, "ಕಾಯ್ದೆಯ ಹಿಂದಿರುವ ಉದ್ದೇಶವನ್ನು ಗಮನದಲ್ಲಿಟ್ಟುಕೊಂಡು (ಕಲಂ 4 ಮತ್ತು ಕಲಂ 7) ಓದಬೇಕಾಗುತ್ತದೆ. ಕಾಯ್ದೆಯ ಉದ್ದೇಶಗಳು ಮತ್ತು ಕಾರಣಗಳ ಹೇಳಿಕೆಯಲ್ಲಿ, ಈ ಶಾಸನವನ್ನು ಜಾರಿಗೆ ತರುವ ಉದ್ದೇಶವು ಈ ಕಾಯ್ದೆಯಡಿ ಅನುದಾನ ಪಡೆದವರು ಶ್ರೀಮಂತರು ಮತ್ತು ಪ್ರಬಲ ವರ್ಗಗಳಿಗೆ ಸೇರಿದ ವ್ಯಕ್ತಿಗಳಿಂದ ಶೋಷಣೆಗೆ ಒಳಗಾಗುವುದನ್ನು ತಡೆಯುವುದು ಎಂದು ಹೇಳಲಾಗಿದೆ. ಬಿ. ಶಿವಪ್ಪ ವಿ. ಕರ್ನಾಟಕ ರಾಜ್ಯ ಪ್ರಕರಣದಲ್ಲಿ[1] ಈ ನ್ಯಾಯಾಲಯದ ಮುಂದೆ ಈ ವಿಷಯವು ಪರಿಗಣನೆಗೆ ಬಂದಿತು ಮತ್ತು ಸುಪ್ರೀಮ್ ಕೋರ್ಟ್ ಮಂಚೇಗೌಡ ಪ್ರಕರಣದ ತೀರ್ಪನ್ನು[2] ಉಲ್ಲೇಖಿಸಿದ ನಂತರ  ಈ ನ್ಯಾಯಾಲಯ ಮತ್ತು ಸುಪ್ರೀಂ ಕೋರ್ಟ್ ಮಾಡಿದ ಅವಲೋಕನಗಳಿಂದ ಹೊರಹೊಮ್ಮುವ ಅಂಶವೆಂದರೆ, ಸೆಕ್ಷನ್ 4 ರಲ್ಲಿ ಉಲ್ಲೇಖಿಸಲಾಗಿರುವ ಪರಕೀಯತೆಗಳನ್ನು ವೈಯಕ್ತಿಕ ವ್ಯಕ್ತಿ / ವ್ಯಕ್ತಿಗಳ ಪರವಾಗಿ ಅನುದಾನ ಪಡೆದವರು ಮಾಡಿದ ಪರಭಾರೆ ಎಂದು ಮಾತ್ರ ಪರಿಗಣಿಸಬೇಕು. ಅದು ಸರ್ಕಾರ, ಕೇಂದ್ರ ಸರ್ಕಾರ, ಸ್ಥಳೀಯ ಪ್ರಾಧಿಕಾರ ಅಥವಾ ಬ್ಯಾಂಕಿನ ಪರವಾಗಿ ಮಂಜೂರು ಮಾಡಿದ ಭೂಮಿಯನ್ನು ವರ್ಗಾವಣೆ ಮಾಡುವ ಬಗ್ಗೆ ಅನ್ವಯಿಸುವಿಕೆಯು ಕಾಯ್ದೆಯ ವ್ಯಾಪ್ತಿಯಿಂದ ಹೊರಗಿಡಲಾಗಿದೆ. ...... ಶಿವಪ್ಪನ ಪ್ರಕರಣದ ಅದೇ ತೀರ್ಪಿನಲ್ಲಿ, ಈ ನ್ಯಾಯಾಲಯವು ಕಾಯ್ದೆಯ ಸೆಕ್ಷನ್ 3 (1) (ಇ) ನಲ್ಲಿ ಬಳಸಲಾದ "ವ್ಯಕ್ತಿ" ಎಂಬ ಪದಕ್ಕೆ ನಿಯೋಜಿಸಬೇಕಾದ ಅರ್ಥವನ್ನು ಸಹ ಪರಿಗಣಿಸಿದೆ. ವ್ಯಕ್ತಪಡಿಸಿದ ಅಭಿಪ್ರಾಯವೆಂದರೆ, ಸಾರ್ವಜನಿಕ ಶಾಸನದಲ್ಲಿ ಬಳಸಲಾಗುವ "ವ್ಯಕ್ತಿ" ಎಂಬ ಪದವು ನೈಸರ್ಗಿಕ ವ್ಯಕ್ತಿ (ಮನುಷ್ಯ) ಮತ್ತು ಕೃತಕ ವ್ಯಕ್ತಿ

---

[1] ಐ.ಎಲ್.ಆರ್ 1990 ಕರ್ 1089

[2] ಎ.ಐ.ಆರ್ 1984 ಎಸ್.ಸಿ 1151

(ಕಾರ್ಪೊರೇಷನ್ ಇತ್ಯಾದಿ) ಎರಡನ್ನೂ ಒಳಗೊಂಡಿರುತ್ತದೆ ಮತ್ತು ಸಾಮಾನ್ಯ ಭಾಷೆಯಲ್ಲಿ...... "ವ್ಯಕ್ತಿ" ಎಂದರೆ ಒಂದು ನೈಸರ್ಗಿಕ ವ್ಯಕ್ತಿ ಒಳಗೊಂಡಿದೆ ಮತ್ತು ತಾಂತ್ರಿಕ ಭಾಷೆಯಲ್ಲಿ, ಇದು ಇನ್ನೊಂದು ರೀತಿಯಲ್ಲಿ ಅರ್ಥೈಸಬಹುದು, ಆದರೆ ನಿರ್ದಿಷ್ಟ ಕಾಯ್ದೆಯಲ್ಲಿ ಇದರ ಅರ್ಥವು ಸಂದರ್ಭ ಮತ್ತು ವಿಷಯದ ಮೇಲೆ ಅವಲಂಬಿತವಾಗಿರಬೇಕು. ಹೀಗೆ ವ್ಯಕ್ತಪಡಿಸಿದ ನಂತರ, ನ್ಯಾಯಾಲಯವು ಹೇಳಲಾದ ತತ್ತ್ವದ ಬೆಳಕಿನಲ್ಲಿ ಮತ್ತು ಮಂಜೂರು ಮಾಡಿದ ಭೂಮಿಯನ್ನು ಪರಭಾರೆ ಮಾಡುವುದನ್ನು ನಿಷೇಧಿಸುವ ಎಸ್‌ಸಿ ಮತ್ತು ಎಸ್‌ಟಿ ಕಾಯ್ದೆಯ ನಿಬಂಧನೆಗಳ ಹಿನ್ನೆಲೆಯಲ್ಲಿ ಮತ್ತು ನಿರ್ದಿಷ್ಟವಾಗಿ ಸೆಕ್ಷನ್ 7 ಅನ್ನು ಪರಿಗಣಿಸಿ, ಪರಭಾರೆ ಹೊಂದಿದ ವ್ಯಕ್ತಿಯನ್ನು "ಅರ್ಥೈಸಲು" ನೈಸರ್ಗಿಕ ವ್ಯಕ್ತಿಯಾಗಿ ಮಾತ್ರ ಅರ್ಥೈಸಿಕೊಳ್ಳಬೇಕು ಮತ್ತು ಬೇರೆ ಯಾರೂ ಅಲ್ಲ. ಆದ್ದರಿಂದ, ಮಂಚೇಗೌಡರ ಪ್ರಕರಣದಲ್ಲಿ ಸುಪ್ರೀಮ್ ಕೋರ್ಟ್ ಮತ್ತು ಶಿವಪ್ಪ ಅವರ ಪ್ರಕರಣದಲ್ಲಿ ಈ ನ್ಯಾಯಾಲಯವು ಮೇಲಿನ ಕಾನೂನಿನ ಪ್ರತಿಪಾದನೆಯಿಂದ ಸ್ಪಷ್ಟವಾಗಿದೆ, ಸೆಕ್ಷನ್ 4 ರ ಉಪವಿಭಾಗ (2) ರ ನಿಬಂಧನೆಗಳು ನೈಸರ್ಗಿಕ ವ್ಯಕ್ತಿಗಳಿಗೆ ಮಾತ್ರ ಅನ್ವಯವಾಗುತ್ತವೆ ಮತ್ತು ಇತರರಿಗೆ ಅಲ್ಲ. ......... ಸೆಕ್ಷನ್ 4 ರ ಉಪವಿಭಾಗ (3) ಕ್ಕೆ ಸಂಬಂಧಪಟ್ಟಂತೆ, ಅದರಲ್ಲಿ ಉಪ–ವಿಭಾಗಗಳು (1) ಮತ್ತು (2) ರ ನಿಬಂಧನೆಗಳು ಸಿವಿಲ್ ನ್ಯಾಯಾಲಯ ಅಥವಾ ಯಾವುದೇ ಪ್ರಾಧಿಕಾರದ ಯಾವುದೇ ಅವಾರ್ಡ್ ಅಥವಾ ಆದೇಶದ ಪ್ರಕಾರ ಯಾವುದೇ ಭೂಮಿಯನ್ನು ಮಾರಾಟ ಮಾಡಲು ಅನ್ವಯಿಸುತ್ತವೆ ಎಂದು ಹೇಳುತ್ತದಾದರೂ, ಉಪ–ವಿಭಾಗ (3) ರಲ್ಲಿರುವ ಈ ನಿಬಂಧನೆಯನ್ನು "ವ್ಯಕ್ತಿ" ಎಂಬ ಪದಕ್ಕೆ ನೀಡಿರುವ ವ್ಯಾಖ್ಯಾನವನ್ನು ಗಮನದಲ್ಲಿಟ್ಟುಕೊಂಡು ಓದಬೇಕಾಗುತ್ತದೆ. ..... ಬೇರೆ ರೀತಿಯಲ್ಲಿ ಹೇಳುವುದಾದರೆ, ಮಂಜೂರು ಮಾಡಿದ ಭೂಮಿಯನ್ನು ಸರ್ಕಾರ ಅಥವಾ ಕೇಂದ್ರ ಸರ್ಕಾರ ಅಥವಾ ಸ್ಥಳೀಯ ಪ್ರಾಧಿಕಾರ ಅಥವಾ ಬ್ಯಾಂಕ್ ತೆಗೆದುಕೊಂಡರೆ, ಅಂತಹ ಸಂದರ್ಭದಲ್ಲಿ, ಸೆಕ್ಷನ್ 4 ರ ಉಪವಿಭಾಗ (3) ಕ್ಕೆ ಯಾವುದೇ ಅನ್ವಯವಿಲ್ಲ. ಯೆಲ್ಲಪ್ಪ ವಿ. ಯೆಲ್ಲವಾ, (1987 (1) ಕರ್.ಎಲ್.ಜೆ 11) ಪ್ರಕರಣದಲ್ಲಿ ಈ ನ್ಯಾಯಾಲಯವು ತೆಗೆದುಕೊಂಡ ದೃಷ್ಟಿಕೋನದಿಂದ

ನಮ್ಮ ಈ ದೃಷ್ಟಿಕೋನವು ಬೆಂಬಲಿತವಾಗಿದೆ. ನ್ಯಾಯಾಲಯದ ಪರವಾಗಿ ಮಾತನಾಡುತ್ತಾ, ಜಸ್ಟೀಸ್ ರಾಮಾ ಜೋಯಿಸ್, ಸೆಕ್ಷನ್ 4 (3) ಅನ್ನು ಎಚ್ಚರಿಕೆಯಿಂದ ಓದುವುದರಿಂದ ಅದು ಆದೇಶ ಅಥವಾ ಅವಾರ್ಡ್ ಅಥವಾ ಯಾವುದೇ ಖಾಸಗಿಯವರಿಂದ ಅಥವಾ ವ್ಯಕ್ತಿಯಿಂದ ಉಂಟಾಗುವ ಮೊತ್ತಕ್ಕೆ ಸಂಬಂಧಿಸಿದಂತೆ ಪಡೆದ ಆದೇಶವನ್ನು ಕಾರ್ಯಗತಗೊಳಿಸುವಲ್ಲಿ ಮಾರಾಟದ ಬಗ್ಗೆ ಮಾತನಾಡುತ್ತದೆ ಎಂದು ತೋರಿಸುತ್ತದೆ.

ಕರ್ನಾಟಕ ಹೈಕೋರ್ಟಿನ ದ್ವಿಸದಸ್ಯ ಪೀಠದಲ್ಲಿ ಕೋಆಪರೇಟೀವ್ ಬ್ಯಾಂಕ್ ಹರಾಜು ಹಾಕಿ ಮಾರಾಟ ಮಾಡಬಹುದಾಗಿದ್ದರೆ, ಅಲ್ಲಿ ಇರುವ ಸಾಲವನ್ನು ಖರೀದಿದಾರ ಪಾವತಿಸಿ ಖರೀದಿಸಬಹುದು ಎಂಬ ವಾದವನ್ನು ಒಪ್ಪದೆ, ಕೋಆಪರೇಟೀವ್ ಬ್ಯಾಂಕಿಗೆ ಈಡು ಮಾಡುವ ವಿಚಾರ ಮತ್ತು ಖರೀದಿದಾರ ಖರೀದಿಸಿರುವ ವಿಚಾರ ಸಮೀಕರಿಸಲು ಬರುವುದಿಲ್ಲ ಎಂದಿದೆ.[1]

**ಗ್ರಾಂಟ್ ಮಾಡಿರುವ ಸೈಟು ಪಿ.ಟಿ.ಸಿ.ಎಲ್ ವ್ಯಾಪ್ತಿಗೆ ಬರುವುದೆ**

ಟೌನ್ ಮುನಿಸಿಪಾಲಿಟಿಯಿಂದ ಅಲಾಟ್ ಮಾಡಲಾದ ಸೈಟು ಪಿ.ಟಿ.ಸಿ.ಎಲ್ ವ್ಯಾಪ್ತಿಯಲ್ಲಿ ಗ್ರಾಂಟ್ ಜಮೀನು ಆಗುವುದೇ ಎಂಬ ಪ್ರಶ್ನೆ ಹೈಕೋರ್ಟ್ ಮುಂದೆ ಬಂದಿರುತ್ತದೆ.[2] "ಮಂಜೂರಾದ ಭೂಮಿಯಲ್ಲಿ "ಸರ್ಕಾರ" ನೀಡುವ ಯಾವುದೇ ಭೂಮಿಯನ್ನು ಅರ್ಥೈಸಲು ವ್ಯಾಖ್ಯಾನಿಸಲಾಗಿದೆ, ಹಾಲಿ ಕೇಸಿನಲ್ಲಿ, ಒಪ್ಪಿಕೊಂಡಂತೆ, ಭೂಮಿಯನ್ನು ಸರ್ಕಾರದಿಂದ ನೀಡಲಾಗಿರುವುದಿಲ್ಲ. ಮತ್ತೊಂದೆಡೆ ಇದನ್ನು ಮದ್ದೂರಿನ ಟೌನ್ ಮುನ್ಸಿಪಾಲಿಟಿ ಅಂಗೀಕರಿಸಿದ ನಿರ್ಣಯದಡಿಯಲ್ಲಿ ನೀಡಲಾಗುತ್ತದೆ. ಅಂತಹ ಅನುದಾನಗಳನ್ನು ಉನ್ನತ ಪ್ರಾಧಿಕಾರವು ಕೆಲವು ಸಂದರ್ಭಗಳಲ್ಲಿ ಸರ್ಕಾರವು ಅನುಮೋದಿಸಬೇಕಾಗಿರುತ್ತದೆ. ಈ ಸಂದರ್ಭದಲ್ಲಿ, ಪಟ್ಟಣ ಪುರಸಭೆಯು ಅಂಗೀಕರಿಸಿದ ನಿರ್ಣಯವನ್ನು ಸರ್ಕಾರವು ಅಂಗೀಕರಿಸಿದೆ. ಆದರೆ, ಅದು ಸ್ವತಃ ಅನುದಾನವನ್ನು ಸರ್ಕಾರದ ಅನುದಾನವಾಗಿಸುವುದಿಲ್ಲ. ಆದ್ದರಿಂದ, 'ಮಂಜೂರಾದ ಭೂಮಿ' ಎಂಬ ಪದದ ವ್ಯಾಪ್ತಿಗೆ ಬರಲು ಸರ್ಕಾರವು

---

[1] ಖಲೀದ್ ಸಲೀಮ್ ವಿ. ಮಂಜಯ್ಯ – 2005 (4) ಕೆ.ಸಿ.ಸಿ.ಆರ್ 2374 (ಡಿ.ಬಿ)

[2] ಓಂಬಳಮ್ಮ ವಿ. ಅಸಿಸ್ಟೆಂಟ್ ಕಮೀಷನರ್ – ಐ.ಎಲ್.ಆರ್ 2012 ಕರ್ 3977

ಭೂಮಿಯನ್ನು ಮಂಜೂರು ಮಾಡಿದೆ ಎಂದು ತೋರಿಸಬೇಕು. ವಾಸ್ತವಿಕತೆಗಳ ಮೇಲೆ, ಇದು ಪಟ್ಟಣ ಪುರಸಭೆಯಿಂದ ಹಂಚಿಕೆಯ ಒಂದು ಪ್ರಕರಣವಾಗಿದೆ, ಇದು ಸ್ಥಳೀಯ ಸಂಸ್ಥೆಯಾಗಿದೆ. ಈ ಹಂಚಿಕೆಯನ್ನು 'ಗ್ರ್ಯಾಂಟೆಡ್ ಲ್ಯಾಂಡ್' (ಮಂಜೂರಾದ ಭೂಮಿ) ಎಂಬ ವ್ಯಾಖ್ಯಾನದ ವ್ಯಾಪ್ತಿಯಲ್ಲಿ ತರಲು ಸಾಧ್ಯವಿಲ್ಲ, ಏಕೆಂದರೆ, ಪಿ.ಟಿ.ಸಿ.ಎಲ್ ಕಾಯ್ದೆಯ ಸೆಕ್ಷನ್ 3 (1) (ಬಿ) ನಲ್ಲಿ ಬಳಸಲಾದ ಸರ್ಕಾರ ಎಂಬ ಪದವು ಸ್ಥಳೀಯ ಸಂಸ್ಥೆಯನ್ನು ಒಳಗೊಂಡಿದೆ ಎಂದು ಹೇಳಲಾಗುವುದಿಲ್ಲ. ಪರಿಣಾಮಗಳನ್ನು ಪರಿಗಣಿಸಿ ಅದು ಭೂಮಿಯಲ್ಲಿ ಪುನರಾರಂಭ ಮತ್ತು ಅದರ ಪುನಃಸ್ಥಾಪನೆಗೆ ಕಾರಣವಾಗುವ ಕಾಯ್ದೆಯಲ್ಲಿ ಜಾರಿಗೊಳಿಸಲಾದ ನಿಬಂಧನೆಗಳ ಕಾರಣದಿಂದಾಗಿ, ಸೆಕ್ಷನ್ 3 ರ ಅಡಿಯಲ್ಲಿರುವ ನಿಬಂಧನೆಗಳನ್ನು ಕಾಯ್ದೆಯ ಶ್ಲಾಘನೀಯ ಉದ್ದೇಶವನ್ನು ಗಮನದಲ್ಲಿಟ್ಟುಕೊಂಡು ಓದಬೇಕಾಗಿದ್ದರೂ ಸಹ, ಸ್ಥಳೀಯ ಸಂಸ್ಥೆಗಳು ನೀಡುವ ಅನುದಾನವನ್ನು ಸೇರಿಸಲು ಅದರಲ್ಲಿ ಸೇರಿದೆ ಎಂದು ನಿರ್ಣಯಿಸಲಾಗುವುದಿಲ್ಲ. ಅದು ಶಾಸಕಾಂಗದ ಆಶಯವಾಗಿದ್ದರೆ, ಕಾಯ್ದೆಯ ಸೆಕ್ಷನ್ 3 (1) (ಬಿ) ಅಡಿಯಲ್ಲಿ 'ಮಂಜೂರಾದ ಭೂಮಿ' ಎಂಬ ಪದವನ್ನು ವ್ಯಾಖ್ಯಾನಿಸುವಾಗ ಅದು ಅಂತಹ ಅನುದಾನಗಳನ್ನು ಸಹ ಸೇರಿಸಿಕೊಳ್ಳುತ್ತಿತ್ತು. ಇದು ಶಾಸನಬದ್ಧ ವಿವರಣೆಯ ಸುಸ್ಥಾಪಿತ ತತ್ವವಾಗಿದ್ದು, ಒಂದು ನಿಬಂಧನೆಯನ್ನು ಹಾಗೆಯೇ ಓದಬೇಕು. ವಿಶೇಷವಾಗಿ ಯಾವುದೂ ಇಲ್ಲದಿದ್ದಾಗ ನ್ಯಾಯಾಲಯಗಳು ಲೋಪವನ್ನು ಪೂರೈಸಲು, ಒಂದನ್ನು ಊಹೆಯಿಂದ, ಪ್ರಯತ್ನಿಸುವುದಿಲ್ಲ.

# ಅಧ್ಯಾಯ-9

## ಕಾಯ್ದೆ ಯಾವ ದಿಕ್ಕಿನತ್ತ ಸಾಗುತ್ತಿದೆ

ಸುಪ್ರೀಮ್ ಕೋರ್ಟ್[1] ಮೀಸಲಾತಿ ವಿಚಾರದಲ್ಲಿ ಹೀಗೆಂದಿದೆ, "ಜಾತಿಯನ್ನು ಮೀರಲು ಮೀಸಲಾತಿ ಅಗತ್ಯ ಮತ್ತು ಅದನ್ನು ಶಾಶ್ವತಗೊಳಿಸಲು ಅಲ್ಲ. ಮೀಸಲಾತಿಯನ್ನು ಸೀಮಿತ ಅರ್ಥದಲ್ಲಿ ಬಳಸಬೇಕಾಗಿದೆ ಇಲ್ಲದಿದ್ದರೆ ಅದು ದೇಶದಲ್ಲಿ ಜಾತಿವಾದವನ್ನು ಶಾಶ್ವತಗೊಳಿಸುತ್ತದೆ. ಮೀಸಲಾತಿಯನ್ನು ವಿಶೇಷ ಸಮರ್ಥನೆಯಿಂದ ಬರೆಯಲಾಗಿದೆ. ಆರ್ಟಿಕಲ್ 16 (1) ರಲ್ಲಿನ ಸಮಾನತೆಯು ವೈಯಕ್ತಿಕ-ನಿರ್ದಿಷ್ಟವಾಗಿದೆ, ಆರ್ಟಿಕಲ್ 16 (4) ಮತ್ತು ಆರ್ಟಿಕಲ್ 16 (4 ಎ) ನಲ್ಲಿ ಮೀಸಲಾತಿಯನ್ನು ಸಕ್ರಿಯಗೊಳಿಸುತ್ತದೆ. ಆದಾಗ್ಯೂ, ರಾಜ್ಯದ ವಿವೇಚನೆಯು ಸಾರ್ವಜನಿಕ ಉದ್ಯೋಗದಲ್ಲಿ "ಹಿಂದುಳಿದಿರುವಿಕೆ" ಮತ್ತು "ಪ್ರಾತಿನಿಧ್ಯದ ಅಸಮರ್ಪಕತೆ" ಯ ಅಸ್ತಿತ್ವಕ್ಕೆ ಒಳಪಟ್ಟಿರುತ್ತದೆ. ಹಿಂದುಳಿದಿರುವಿಕೆಯು ವಸ್ತುನಿಷ್ಠ ಅಂಶಗಳನ್ನು ಆಧರಿಸಿರಬೇಕು ಆದರೆ ಅಸಮರ್ಪಕತೆಯು ವಾಸ್ತವಿಕವಾಗಿ ಅಸ್ತಿತ್ವದಲ್ಲಿರಬೇಕು. ನ್ಯಾಯಾಂಗ ಪರಿಶೀಲನೆ ಇಲ್ಲಿಗೆ ಬರುತ್ತದೆ. ಆದಾಗ್ಯೂ, ಒಂದು ನಿರ್ದಿಷ್ಟ ಪ್ರಕರಣದಲ್ಲಿ ಮೀಸಲಾತಿ ಅಪೇಕ್ಷಣೀಯವೋ ಅಥವಾ ಇಲ್ಲವೋ, ನೀತಿಯಂತೆ, ವಿಧಿ 16 (4) ಮತ್ತು 16 (4 ಎ) ನಲ್ಲಿ ಉಲ್ಲೇಖಿಸಲಾದ ನಿಯತಾಂಕಗಳನ್ನು ಎಲ್ಲಿಯವರೆಗೆ ನಿರ್ವಹಿಸಲಾಗಿದೆಯೋ ಅಲ್ಲಿಯವರೆಗೆ ನಾವು ನಿರ್ಧರಿಸುವಂತಿಲ್ಲ. ಮೇಲೆ ಹೇಳಿದಂತೆ, ಇಕ್ವಿಟಿ, ನ್ಯಾಯ ಮತ್ತು ಅರ್ಹತೆ (ವಿಧಿ 335) / ದಕ್ಷತೆಯು ಅಸ್ಥಿರವಾಗಿದ್ದು, ಇವುಗಳನ್ನು ರಾಜ್ಯವು ಗುರುತಿಸಬಹುದು ಮತ್ತು ಅಳೆಯಬಹುದು."

ಸುಪ್ರೀಮ್ ಕೋರ್ಟ್ ಇನ್ನೊಂದು ಪ್ರಕರಣದಲ್ಲಿ, "ನ್ಯಾಯಾಧೀಶರು ಸಂವಿಧಾನ ಮತ್ತು ಕಾಯ್ದೆಯಡಿ ಕ್ರಿಯಾತ್ಮಕ ಪರಿಕಲ್ಪನೆಗಳ ಉದ್ದೇಶಪೂರ್ವಕ ವ್ಯಾಖ್ಯಾನವನ್ನು ಆ ಸಮಯದ ಭಾವನಾತ್ಮಕ ಅವಶ್ಯಕತೆಗಳನ್ನು

---

[1] ನಾಗರಾಜ್ ವಿ. ಯು.ಆಫ್.ಇಂಡಿಯಾ - 2006 (8) ಎಸ್.ಸಿ.ಸಿ 212

ನಿರೂಪಿಸಲು ಅದರ ವಿವರಣಾತ್ಮಕ ಶಸ್ತ್ರಾಸ್ತ್ರದೊಂದಿಗೆ ಹೊಂದಿಕೊಳ್ಳಬೇಕು. ಸಾಮಾಜಿಕ ಶಾಸನವು ವೇಗವಾದ ಉಪಭಾಷೆಗಳಿಗೆ ಸಂಬಂಧಿಸಿದ ದಾಖಲೆಯಲ್ಲ ಆದರೆ ಜನರ ಜೀವನವನ್ನು ಕ್ರಮಬದ್ಧಗೊಳಿಸುವ ಸಾಧನವಾಗಿದೆ. ಕಾನೂನನ್ನು ರೂಪಿಸಲು ಒಬ್ಬರು ಅದರ ಅಂತರಾತ್ಮ, ಅದರ ಸ್ಥಾಪನೆ ಮತ್ತು ಇತಿಹಾಸಕ್ಕೆ ಪ್ರವೇಶಿಸಬೇಕು. ಜನರ ಸ್ವಾತಂತ್ರ್ಯವನ್ನು ವಿಸ್ತರಿಸಲು ಕಾನೂನು ಸಮರ್ಥವಾಗಿರಬೇಕು ಮತ್ತು ಹೆಚ್ಚು ಅಸಮಾನವಾದ ಸಾಮಾಜಿಕ ವ್ಯವಸ್ಥೆಯ ಆಧಾರವನ್ನು ಸರಿಪಡಿಸಲು ಕಾನೂನು ಕ್ರಮವು ಅತ್ಯಂತ ಸಮಾನ ಕಾಳಜಿಯೊಂದಿಗೆ ತೂಗುತ್ತದೆ. ಬದಲಾಗುತ್ತಿರುವ ಸಾಮಾಜಿಕ ಅಗತ್ಯಗಳಿಗೆ ಪೂರಕವಾಗಿ ಸಾಮಾಜಿಕ ಮೌಲ್ಯಗಳ ಒಳನೋಟದೊಂದಿಗೆ ನ್ಯಾಯಾಂಗ ವಿಮರ್ಶೆಯನ್ನು ನಡೆಸಬೇಕು. ಅಸ್ತಿತ್ವದಲ್ಲಿರುವ ಸಾಮಾಜಿಕ ಅಸಮಾನತೆಗಳು ಅಥವಾ ಅಸಮತೋಲನವನ್ನು ಕಾನೂನಿನ ನಿಯಮದ ಮೂಲಕ ಸಾಮಾಜಿಕ ಕ್ರಮವನ್ನು ಮರು ಹೊಂದಿಸುವಿಕೆಯನ್ನು ತೆಗೆದುಹಾಕುವ ಅಗತ್ಯವಿದೆ. ಆ ಸಂದರ್ಭದಲ್ಲಿ, ನಾಗರಿಕ ಹಕ್ಕುಗಳ ಸಂರಕ್ಷಣಾ ಕಾಯ್ದೆಯಡಿ, ನೀರನ್ನು ತೆಗೆದುಕೊಳ್ಳುವ ಹಕ್ಕನ್ನು ರಕ್ಷಿಸುವ ಅವಶ್ಯಕತೆ ಮತ್ತು ಅಸ್ಪೃಶ್ಯತೆಯನ್ನು ರದ್ದುಗೊಳಿಸುವ ಸಾಂವಿಧಾನಿಕ ಆದೇಶವನ್ನು ಮತ್ತು ಅದರ ಅಭ್ಯಾಸವನ್ನು ಯಾವುದೇ ರೂಪದಲ್ಲಿ ಎತ್ತಿಹಿಡಿಯುವ ಅಗತ್ಯವನ್ನು ಒತ್ತಿಹೇಳಲಾಯಿತು."[1] ಇದೇ ಪ್ರಕರಣದಲ್ಲಿ ಮುಂದುವರಿದು, "42 ನೇ ಸಂವಿಧಾನ (ತಿದ್ದುಪಡಿ) ಕಾಯ್ದೆಯ ಹೊತ್ತಿಗೆ, ಜಾತ್ಯತೀತತೆ ಮತ್ತು ಸಮಾಜವಾದವನ್ನು ಸಂವಿಧಾನದ ಮುನ್ನುಡಿಯಲ್ಲಿ ತರಲಾಯಿತು. ಪ್ರಜಾಪ್ರಭುತ್ವದಲ್ಲಿ ಸಮಾಜದ ಎಲ್ಲಾ ವರ್ಗದವರಿಗೆ ಜಾತಿ, ಧರ್ಮ ಮತ್ತು ಲಿಂಗವನ್ನು ಲೆಕ್ಕಿಸದೆ ರಾಜಕೀಯ ಪ್ರಜಾಪ್ರಭುತ್ವದಲ್ಲಿ ಭಾಗವಹಿಸಲು ಸೌಲಭ್ಯಗಳು ಮತ್ತು ಅವಕಾಶಗಳನ್ನು ಒದಗಿಸದಿದ್ದರೆ, ರಾಜಕೀಯ ಪ್ರಜಾಪ್ರಭುತ್ವ ಹೆಚ್ಚು ಕಾಲ ಉಳಿಯುವುದಿಲ್ಲ. ನವೆಂಬರ್ 25, 1949 ರಂದು ಡಾ. ಅಂಬೇಡ್ಕರ್ ಅವರು ತಮ್ಮ ಸಂವಾದ

---

[1] ವಲ್ಸಮ್ಮ ಪೌಲ್ ವಿ. ಕೊಚ್ಚಿನ್ – ಎ.ಐ.ಆರ್ 1996 ಎಸ್.ಸಿ 1011

ಭಾಷಣದಲ್ಲಿ "ನಾವು ಮಾಡಬೇಕಾದುದು ಕೇವಲ ರಾಜಕೀಯ ಪ್ರಜಾಪ್ರಭುತ್ವದಿಂದ ಸಾಧಿಸಬಾರದು; ನಮ್ಮ ರಾಜಕೀಯ ಪ್ರಜಾಪ್ರಭುತ್ವವನ್ನು ಸಾಮಾಜಿಕ ಪ್ರಜಾಪ್ರಭುತ್ವವನ್ನಾಗಿ ಮಾಡಬೇಕು, ರಾಜಕೀಯ ಪ್ರಭುತ್ವದ ತಳದಲ್ಲಿ ಸಾಮಾಜಿಕ ಪ್ರಜಾಪ್ರಭುತ್ವ ಇಲ್ಲದಿದ್ದರೆ, ರಾಜಕೀಯ ಪ್ರಜಾಪ್ರಭುತ್ವವು ಉಳಿಯಲು ಸಾಧ್ಯವಿಲ್ಲ". ಸಾಮಾಜಿಕ ಪ್ರಜಾಪ್ರಭುತ್ವ ಎಂದರೆ "ಸ್ವಾತಂತ್ರ್ಯ, ಸಮಾನತೆ ಮತ್ತು ಭ್ರಾತೃತ್ವವನ್ನು ಜೀವನದ ತತ್ವಗಳಾಗಿ ಗುರುತಿಸುವ ಜೀವನ ವಿಧಾನ". ಅವು ತ್ರಿಮೂರ್ತಿಗಳು ಪ್ರತ್ಯೇಕ ವಸ್ತುಗಳಲ್ಲ ಆದರೆ ಅವು ತ್ರಿಮೂರ್ತಿಗಳ ಒಕ್ಕೂಟವನ್ನು ರೂಪಿಸುತ್ತವೆ. ಒಂದನ್ನು ಇನ್ನೊಂದರಿಂದ ವೈವಿಧ್ಯಗೊಳಿಸುವುದು ಪ್ರಜಾಪ್ರಭುತ್ವದ ಉದ್ದೇಶವನ್ನು ಸೋಲಿಸುವುದು. ಸಮಾನತೆಯಿಲ್ಲದೆ, ಸ್ವಾತಂತ್ರ್ಯವು ಕೆಲವರ ಮೇಲುಗೈ ಸಾಧಿಸುತ್ತದೆ. ಸ್ವಾತಂತ್ರ್ಯವಿಲ್ಲದ ಸಮಾನತೆಯು ವೈಯಕ್ತಿಕ ಉಪಕ್ರಮವನ್ನು ಕೊಲ್ಲುತ್ತದೆ. ಭ್ರಾತೃತ್ವವಿಲ್ಲದೆ, ಸ್ವಾತಂತ್ರ್ಯ ಮತ್ತು ಸಮಾನತೆಯು ವಸ್ತುಗಳ ಸಹಜ ಮಾರ್ಗ ಆಗಲು ಸಾಧ್ಯವಿಲ್ಲ. .... ಸಂವಿಧಾನದ ಮೂಲಭೂತ ಹಕ್ಕುಗಳು ಮತ್ತು ನಿರ್ದೇಶನ (ಡೈರೆಕ್ಟೀವ್ ಪ್ರಿನ್ಸಿಪಲ್ಸ್) ತತ್ವಗಳಲ್ಲಿ, ನಿರ್ದಿಷ್ಟವಾಗಿ, ಸಂವಿಧಾನದ 14, 15, 16, 21, 38, 39 ಮತ್ತು 46 ನೇ ವಿಧಿಗಳಲ್ಲಿ ಮುನ್ನುಡಿಯಲ್ಲಿ (ಪ್ರೀಯಾಂಬಲ್) ಕಲ್ಪಿಸಲಾಗಿರುವ ಮತ್ತು ವಿಸ್ತರಿಸಿದ ಸಾಮಾಜಿಕ ಮತ್ತು ಆರ್ಥಿಕ ನ್ಯಾಯದ ಹಕ್ಕನ್ನು ಮತ್ತು ಗುಣಮಟ್ಟವನ್ನು, ಸಮಾಜದ ಬಡ, ಹಿಂದುಳಿದ ಮತ್ತು ಅಂಗವಿಕಲ ನಾಗರಿಕರ ಜೀವನದಲ್ಲಿ, ಅರ್ಥಪೂರ್ಣವಾಗಿ ಮಾಡಬೇಕು. ..... ಸಂವಿಧಾನ ವಿಧಿ 14 ರಲ್ಲಿನ ಸಮಾನ ರಕ್ಷಣೆಗೆ ಸೌಲಭ್ಯಗಳು ಮತ್ತು ಅವಕಾಶಗಳನ್ನು ಒದಗಿಸುವ ಮೂಲಕ ಆ ಅಸಮಾನರಿಗೆ ದೃಢವಾದ ಕ್ರಮ ಅಗತ್ಯ. ವಿಧಿ 15 (1) ಧರ್ಮ, ಜನಾಂಗ, ಜಾತಿ, ಲಿಂಗ, ಹುಟ್ಟಿದ ಸ್ಥಳಗಳ ಆಧಾರದ ಮೇಲೆ ತಾರತಮ್ಯವನ್ನು ನಿಷೇಧಿಸಿದರೆ, ಮೇಲಿನ ನಿರ್ಬಂಧದ ಹೊರತಾಗಿಯೂ ಮತ್ತು ವಿಧಿ 29 (2) ರಲ್ಲಿ ನೀಡಲಾಗಿರುವಂತೆ ವಿಧಿ 15 (4) ರಾಜ್ಯಕ್ಕೆ ಆದೇಶಿಸುತ್ತಾ "ಯಾವುದೇ ಸಾಮಾಜಿಕವಾಗಿ ಮತ್ತು ಶೈಕ್ಷಣಿಕವಾಗಿ ಹಿಂದುಳಿದ ವರ್ಗದ ನಾಗರಿಕರ ಅಥವಾ ದಲಿತರು ಮತ್ತು ಬುಡಕಟ್ಟು ಜನಾಂಗದವರ ಪ್ರಗತಿಗೆ ವಿಶೇಷ

ಅವಕಾಶ ಮಾಡಬೇಕು" ಎಂದಿದೆ. ಅದೇ ರೀತಿ, ವಿಧಿ 16 (1) ರಾಜ್ಯದ ಅಡಿಯಲ್ಲಿರುವ ಯಾವುದೇ ಕಚೇರಿಗೆ ಉದ್ಯೋಗ ಅಥವಾ ನೇಮಕಾತಿಗೆ ಸಂಬಂಧಿಸಿದ ವಿಷಯಗಳಲ್ಲಿ ಎಲ್ಲಾ ನಾಗರಿಕರಿಗೆ ಸಮಾನತೆಯ ಅವಕಾಶವನ್ನು ಖಾತರಿಪಡಿಸುತ್ತದೆ, ಆದರೆ ವಿಧಿ 16 (4) ರಲ್ಲಿ ರಾಜ್ಯದ ಅಭಿಪ್ರಾಯದಲ್ಲಿ, ರಾಜ್ಯದ ಅಡಿಯಲ್ಲಿರುವ ಸೇವೆಗಳಲ್ಲಿ ಈ ಸಮುದಾಯಗಳು ರಾಜ್ಯವನ್ನು ಸಮರ್ಪಕವಾಗಿ ಪ್ರತಿನಿಧಿಸುವುದಿಲ್ಲ ಎಂದಾದರೆ, ಈ ಸಮುದಾಯಕ್ಕೆ ಮೀಸಲಾತಿ ಒದಗಿಸಲು ರಾಜ್ಯಕ್ಕೆ ಆದೇಶಿಸುತ್ತದೆ. ಸಂವಿಧಾನದ 335 ನೇ ವಿಧಿಯು ಒಕ್ಕೂಟದ ಅಥವ ರಾಜ್ಯದ ವ್ಯವಹಾರಗಳಿಗೆ ಸಂಬಂಧಿಸಿದಂತೆ ಆಡಳಿತದ ದಕ್ಷತೆಯ ನಿರ್ವಹಣೆಗೆ ಅನುಗುಣವಾಗಿ ಒಂದು ರಾಜ್ಯದ ಸೇವೆಗಳಿಗೆ ಮತ್ತು ಹುದ್ದೆಗಳಿಗೆ ನೇಮಕಾತಿ ಮಾಡುವಲ್ಲಿ, ದಲಿತರು ಮತ್ತು ಬುಡಕಟ್ಟು ಜನಾಂಗದ ಸದಸ್ಯರ ಹಕ್ಕುಗಳನ್ನು ಪರಿಗಣನೆಗೆ ತೆಗೆದುಕೊಳ್ಳಬೇಕು ಎಂದು ಆದೇಶಿಸುತ್ತದೆ."..[1] ....

[2]ಹೀಗೆ ಮೀಸಲಾತಿ ಬಗ್ಗೆ ವ್ಯಾಖ್ಯಾನಿಸಿದ ಸುಪ್ರೀಮ್ ಕೋರ್ಟ್ ಪಿ.ಓ.ಸಿ.ಎಲ್ ಕಾಯ್ದೆ ಜಾರಿಗೆ ಬಂದಾಗ ಮತ್ತು ಅದಕ್ಕಿಂತ ಮುಂಚೆ, ಮೋಸ ಪ್ರಕ್ರಿಯೆಗಳಿಗೆ ರಹದಾರಿ ಇತ್ತು, ಅಂದು ನೊಂದಾವಣಿಯು ಯಾರು ನಿರ್ದಿಷ್ಟವಾಗಿ ನೆರವೇರಿಸಿದರು ಎಂಬ ಗೊಂದಲಗಳಿದ್ದವು, ಅಂದು ಖಾಸಗಿ ಸಾಲ ಕ್ಷೇತ್ರ ಸುಲಿಗೆಯಲ್ಲಿ ನಿಂತಿತ್ತು, ದಬ್ಬಾಳಿಕೆಯನ್ನು ಹೊರಹಾಕುವ ಮೀಡಿಯಾ ಸಂಪರ್ಕಗಳಿರಲಿಲ್ಲ, ಅಧಿಕಾರ ವಲಯದಲ್ಲಿ ದಲಿತರ ಸಮರ್ಪಕ ಪ್ರತಿನಿಧಿಸುವಿಕೆ ಇಲ್ಲದೆ ಅವರ ರಕ್ಷಣೆ ಆಗುತ್ತಿರಲಿಲ್ಲ, ಅಂದು ನಗದು ರೂಪದ ಪಾವತಿಗಳು ಸಾಮಾನ್ಯವಾಗಿದ್ದವು, ನಗದು ಪಾವತಿಗೆ ಮಿತಿಯಿರಲಿಲ್ಲ, ಎಲ್ಲರ ಬಳಿ ಬ್ಯಾಂಕ್ ಖಾತೆ ಇರಲಿಲ್ಲ, ದಲಿತರಿಗೆ ರಾಜಕಾರಣದಲ್ಲಿ ಸ್ಥಾನಮಾನ

---

[1] ಮೀಸಲಾತಿಯನ್ನು ನೀಡುವುದಕ್ಕೆ ಎರಡು ಮಾನದಂಡಗಳನ್ನು ಹಾಕಲಾಗಿದೆ (1). ಸರ್ಕಾರದ ಅಭಿಪ್ರಾಯದಲ್ಲಿ ಅಂತಹ ಸಮುದಾಯಗಳಿಗೆ ಸರಿಯಾದ ಪ್ರತಿನಿದಿಸುವಿಕೆ ಇಲ್ಲದಿರುವುದು (ಈ ಬಗ್ಗೆ ಇಲ್ಲಿವರೆಗೆ ಯಾವುದೇ ಅಂಕಿ ಅಂಶ ತಯಾರಿಸಿಲ್ಲ) (2). ಆಡಳಿತದ ದಕ್ಷ ನಿರ್ವಣೆಗೆ ಅನುಗುಣವಾಗಿ (ಮೀಸಲಾತಿಯಿಂದ ದಕ್ಷತೆ ನಿರ್ಮಾಣವಾಗಿದೆಯೇ ಎಲ್ಲಿದೆ ಅಂಕಿ ಅಂಶ)

[2] ಲೇಖಕರ ಅಭಿಪ್ರಾಯ

ಸಂಪೂರ್ಣವಾಗಿ ಇರಲಿಲ್ಲ, ಅಂದು ಅಟ್ರಾಸಿಟಿ ತಡೆ ಕಾಯ್ದೆಯೂ (1989) ಜಾರಿಯಲ್ಲಿ ಇರಲಿಲ್ಲ, ಲೇವಾದೇವಿ ನಿಯಂತ್ರಣ ಕಾಯ್ದೆಗಳು ಅಂದು ಮತ್ತು ಇಂದು ಜಾರಿಯಲ್ಲಿದ್ದರೂ ಪ್ರಸ್ತುತ ಮೀಟರ್ ಬಡ್ಡಿ ದಂದೆ ನಿಂತಿಲ್ಲವಾದರೂ ಸಹಕಾರಿ ಮತ್ತು ಸೌಹಾರ್ದ ಕ್ಷೇತ್ರ ವ್ಯಾಪಕವಾಗಿ ಬೆಳೆದು ಇದರ ಗರಿಷ್ಟ ದೌರ್ಜನ್ಯಗಳು ನಿಂತಿವೆ. ಹೀಗೆ ಅಂದು ಇದ್ದ ಪರಿಸ್ಥಿತಿ ಬಹುತೇಕ ಇಂದು ಇಲ್ಲ, ಅಟ್ರಾಸಿಟಿ ಕಾಯ್ದೆಯ ಬಯವಿದೆ, ನಗದು ವಹಿವಾಟು ನಿರ್ಬಂದವಿದೆ, ನೊಂದಾವಣಿಯಲ್ಲಿ ಪಾರದರ್ಶಕತೆ ಇದೆ, ಮೊಬೈಲ್ ಯುಗದಲ್ಲಿ ದೌರ್ಜನ್ಯದ ಬಗ್ಗೆ ಶೀಘ್ರ ಬೆಳಕಿಗೆ ಬರುವ ಸಾಧನಗಳು ಇವೆ, ಅನೇಕ ದಲಿತ ರಕ್ಷಣಾ ಸಂಘ ಸಂಸ್ಥೆಗಳು ಕಾರ್ಯನಿರತವಾಗಿವೆ, ಸರ್ಕಾರದಲ್ಲೂ ಎಲ್ಲಾ ಹಂತದಲ್ಲೂ ದಲಿತರ ಪ್ರತಿನಿದಿಸುವಿಕೆ ಇದೆ, ಇಂದಿನ ಪರಿಸ್ಥಿತಿಯಲ್ಲಿ ಕಾಯ್ದೆಯ ಹೆಸರಿನಲ್ಲಿ ದಲಿತರ ರಕ್ಷಣೆ ಆಗುತ್ತಿದೆಯೇ ಗಮನಿಸಿ ನೋಡಿ,

**ಅಂಕಿಅಂಶ:–** 2011 ರ ಸೆನ್ಸಸ್ ಪ್ರಕಾರ ಭಾರತದಲ್ಲಿ 1241 ಸಮುದಾಯವನ್ನ ಎಸ್.ಸಿ ಗುಂಪಿನಲ್ಲಿ ಅಧಿಸೂಚಿಸಲಾಗಿದೆ, 705 ಸಮುದಾಯವನ್ನ ಎಸ್.ಟಿ. ಗುಂಪಿನಲ್ಲಿ ಅಧಿಸೂಚಿಸಲಾಗಿದೆ, ಭಾರತದಲ್ಲಿ, ಶೇಖಡ 16.6% (20.14 ಕೋಟಿ) ಎಸ್.ಸಿ ಸಮುದಾಯವಿದ್ದರೆ, 8.6% (10.40 ಕೋಟಿ) ಎಸ್.ಟಿ ಸಮುದಾಯದವರಿದ್ದಾರೆ. 2001 ರಿಂದ 2011 ರವರೆಗೆ ಶೇ 20.8% ಎಸ್.ಸಿ ಸಮುದಾಯ ಹೆಚ್ಚಾಗಿದ್ದಾರೆ, ಹಾಗೆಯೇ ಎಸ್.ಟಿ ಸಮುದಾಯ 23.7% ಹೆಚ್ಚಾಗಿದ್ದಾರೆ. ಕರ್ನಾಟಕದಲ್ಲಿ 2011 ರಲ್ಲಿ ಸುಮಾರು 1.5 ಕೋಟಿ ಎಸ್.ಸಿ ಜನರಿದ್ದಾರೆ, ಇವರಲ್ಲಿ 65.33% ಅಕ್ಷರಸ್ಥರಿದ್ದಾರೆ. ಸುಮಾರು 43 ಲಕ್ಷ ಎಸ್.ಟಿ ಜನರಿದ್ದಾರೆ, ಅವರಲ್ಲಿ 62.08% ಅಕ್ಷರಸ್ಥರಿದ್ದಾರೆ. 2011 ರಲ್ಲಿ ಕರ್ನಾಟಕ ಒಟ್ಟು ಜನಸಂಖ್ಯೆ 6.11 ಕೋಟಿ ಇದೆ. ಸುಮಾರು ಮೂರನೇ ಒಂದು ಭಾಗದ ಜನರಿಗೆ ಪಿ.ಟಿ.ಸಿ.ಎಲ್ ಕಾಯ್ದೆ, ಅಟ್ರಾಸಿಟಿ ಕಾಯ್ದೆ ರಕ್ಷಣೆ ಒದಗಿಸುತ್ತಿದೆ. ಸುಮಾರು 61.33% ಗ್ರಾಮಾಂತರದಲ್ಲಿ ವಾಸಿಸುತ್ತಿದ್ದಾರೆ, 38.67% ನಗರದಲ್ಲಿ ವಾಸಿಸುತ್ತಿದ್ದಾರೆ. ಗ್ರಾಮೀಣ ಭಾಗದಲ್ಲಿ 2011 ರಲ್ಲಿ 68.73% ಅಕ್ಷರಸ್ಥರಾಗಿದ್ದಾರೆ, ನಗರದಲ್ಲಿ 85.78% ಅಕ್ಷರಸ್ಥರಿದ್ದಾರೆ. ಇನ್ನೊಂದು ಅಘಾತಕಾರಿ ಅಂಶವೆಂದರೆ ಭಾರತದಲ್ಲಿ ಸುಮಾರು 1.34 ಕೋಟಿ ಎಸ್.ಸಿ

ಸಮುದಾಯ ಜನ (ಕರ್ನಾಟಕದಲ್ಲಿ 9.23 ಲಕ್ಷ) ಮತ್ತು ಭಾರತದಲ್ಲಿ ಸುಮಾರು 22.17 ಲಕ್ಷ ಎಸ್.ಟಿ ಸಮುದಾಯದ ಜನ (ಕರ್ನಾಟಕದಲ್ಲಿ 1.72 ಲಕ್ಷ) ಸ್ಲಂಗಳಲ್ಲಿ ವಾಸಿಸುತ್ತಿದ್ದಾರೆ, ಇವರಲ್ಲಿ 77.72% (ಕರ್ನಾಟಕದಲ್ಲಿ 75.63%) ಅಕ್ಷರಸ್ಥರಾಗಿದ್ದಾರೆ. ಇಂತಹ ಬೃಹತ್ ಸಮುದಾಯಕ್ಕೆ ರಕ್ಷಣೆ ಇಲ್ಲ ಎಂಬುದು ನಿಜವಾದರೆ, ಇಂದು ಒಂದಂಕಿ % ಇರುವ ಎಸ್ಟೋ ಸಮುದಾಯಗಳ ಪಾಡೇನು. ಅವರಿಗೆ ವಾಸ್ತವಿಕ ರಕ್ಷೆ ಇದೆ ಎಂದಾದರೆ ಶೇಖಡ 25% ಜನರಿಗೆ ವಾಸ್ತವಿಕ ರಕ್ಷಣೆ ಇಲ್ಲವೆ.

**ಸಾಲವೂ ಇಲ್ಲ ಮಾರಾಟಕ್ಕೆ ಯೋಗವೂ ಇಲ್ಲ:–** ಕೆಲವರಿಗೆ ಸಾಲ ಮಾಡೋಣವೆಂದರೆ, ಸಾಲ ಮನ್ನಾ ಸುಳಿಯಲ್ಲಿ ಇಂದು ಬಹುತೇಕ ಬ್ಯಾಂಕುಗಳು ಸಾಲ ನೀಡುವುದಕ್ಕೇ ಸತಾಯಿಸುವ ಹಂತ ಇದೆ. ಮಾರಾಟ ಮಾಡೋಣವೆಂದರೆ ಸರ್ಕಾರದ ಅನುಮತಿಯ ವಿಳಂಬ, ತಿಳಿದವರು ಈ ಜಮೀನುಗಳ ಸಹವಾಸವೇ ಬೇಡ ಎಂಬ ಮನೋಭವದವರಾಗಿದ್ದಾರೆ. ಕೊಳ್ಳುವವರಿಲ್ಲದೆ ಅನೇಕ ಕಡೆ ಮಾರಾಟಗಾರರಿಂದ/ ಮಧ್ಯವರ್ತಿಗಳಿಂದ 'ಬಕರಾ' ಹುಡುಕುವ ಕಾರ್ಯ ಸಾಗಿದೆ. ಅಂದರೆ ರಕ್ಷಣೆಗೆ ಬಳಸಬೇಕಾದ ಕಾಯ್ದೆಯ ಪರಿಣಾಮ ಜನರನ್ನು ಮೋಸಮಾಡಿ ಕ್ರಯದ ಹೆಸರಿನಲ್ಲಿ ವಂಚನೆಗೆ ಬಳಸಲಾಗಿರುವ ಪ್ರಕರಣಗಳೂ ಇವೆ.

**ಕಾನೂನು ಬಲ್ಲವರಲ್ಲೇ ಅಜ್ಞಾನ:–** ಜಮೀನು ರಿಜಿಸ್ಟರ್ ಆಗುತ್ತೆ ಎನ್ನುವವರೆಗೆ ಮಾತ್ರ ಕಾನೂನು ತಜ್ಞರು/ ರಿಯಲ್ ಎಸ್ಟೇಟ್ ಉಧ್ಯಮಿಗಳು/ ಸಬ್ ರಿಜಿಸ್ಟ್ರಾರ್ ಕಚೇರಿಯ ಬಳಿಯ ಪತ್ರ ಬರಹಗಾರರು ಪರಿಶೀಲನೆ ಮಾಡುವ ಪರಿಪಾಟಲು ಹೆಚ್ಚಿ ಈ ಬಗ್ಗೆ ಯಾವ ದಾಖಲೆ ಪರಿಶೀಲಿಸಿ ಸಲಹೆ ಮಾಡಬೇಕು ಎಂಬ ಅರಿವಿಲ್ಲದೆ 15 ವರ್ಷ ಇ.ಸಿ ಪಹಣಿ ಸಾಕು ಎನ್ನುವ ಮಟ್ಟಿಗೆ ವ್ಯವಹಾರಗಳು ಜರುಗುತ್ತಿವೆ. ಬಹಳ ಹಿಂದಿನ ಕಂದಾಯ ದಾಖಲೆಗಳಲ್ಲಿ ದರ್ಖಾಸ್ತು ಮೂಲಕ ಎಂಬ ನಮೂದು ಇದೆಯೇ, ದರ್ಖಾಸ್ತ್ ರಿಜಿಸ್ಟರ್ ತೆಗೆಸಿ ಯಾವ ರೀತಿಯಲ್ಲಿ ಗ್ರಾಂಟ್ ಆಗಿದೆ ಅಲ್ಲಿಂದ ಇಲ್ಲಿವರೆಗೆ ಮೊದಲ ಕ್ರಯ ಎಂದು ಆಗಿದೆ ಎಂಬ ದಾಖಲೆ ಪರಿಶೀಲನೆ ಅವಶ್ಯಕತೆಗಳನ್ನು ಸೂಚಿಸದೆ

ಪ್ರಾಮಾಣಿಕವಾಗಿ ಜರುಗಿರುವ ವ್ಯವಹಾರಗಳು ಮುಂದೆ ಕಾನೂನು ವ್ಯಾಪ್ತಿಗೆ ಸಿಲುಕಿ ಸಮಾಜದಲ್ಲಿ ಜಾತಿ ವೈಷಮ್ಯಕ್ಕೆ ಕಾರಣವಾಗುತ್ತಿದೆ.

**ಜಮೀನು ಮಾರಾಟಗಾರರಲ್ಲಿ ಇಲ್ಲದ ಭಾದ್ಯತಾ ವಿನಿಯೋಗ:–** ಇಂದು ದೇವನಹಳ್ಳಿಯ ಬಳಿ/ ಹಲವು ಬೆಂಗಳೂರು ಗ್ರಾಮಾಂತರದಲ್ಲಿ ಕೋಟ್ಯಾಂತರ ರೂಪಾಯಿ ಜಮೀನು ಬೆಲೆ ಏರಿದಾಗ, ಜಮೀನು ಮಾರಿದವರಲ್ಲಿ ಅನೇಕರು ಒಂದು ಮನೆಯನ್ನು ಕಟ್ಟಿಕೊಳ್ಳದೆ ಸ್ಕಾರ್ಪಿಯೋ ವಾಹನ ಖರೀದಿಸಿ ಪ್ರತೀ ದಿನ ಜೂಜು ಮಧ್ಯ ಇವುಗಳಲ್ಲಿ ತೊಡಗಿ ಹಾಳಾದವರಿದ್ದಾರೆ. ಕೊನೆ ಹಂತವೆಂಬಂತೆ ಅನೇಕ ಕಾನೂನು ದಾರಗಳನ್ನು ಹಿಡಿದು ವ್ಯಾಜ್ಯ ನಡೆಸಿ ಮತ್ತೆ ಹಣ ಪಡೆದು ಮತ್ತೆ ಅದೇ ಸ್ಥಿತಿ ತಲುಪಿದವರೂ ಇದ್ದಾರೆ. ಇಲ್ಲಿ ಜನರಲ್ಲಿ ಭಾದ್ಯತಾ ವಿನಿಯೋಗ ಮಾಡಿಸುವ ಕಾಳಜಿ ಸರ್ಕಾರಕ್ಕೆ ದಲಿತ ಸಂಘಗಳಿಗೆ ಇಲ್ಲವೆ, ಕನಿಷ್ಟ ಗ್ರಾಮದ ಹಿರಿಯರಲ್ಲೂ ಕಾಣದಾಗಿರುವುದು ಇಂದಿನ ನಮ್ಮ ಸಮಾಜದ ಅದೋಗತಿಯನ್ನು ತೋರಿಸುತ್ತದೆ.

**ಸಮಾಜವನ್ನು ಆರೋಗ್ಯಕರವಾಗಿ ಉನ್ನತಕ್ಕೇರಿಸದೆ ಕೇವಲ ಎಲ್ಲಿವರೆಗೆ ಈ ರಕ್ಷಣಾತ್ಮಕ ಪೋಷಣೆ ಮುಂದುವರಿಯಲು ಸಾಧ್ಯ:–** ಒಳ್ಳೆ ತಂದೆ ತಾಯಿ ತಮ್ಮ ಮಕ್ಕಳನ್ನು ತಮ್ಮ ಸ್ವಂತ ಕಾಲಿನ ಮೇಲೆ ನಿಲ್ಲಲು, ಸ್ವಾಭಿಮಾನಿಗಳಾಗಿ ಬದುಕಲು, ವ್ಯಸನಿಗಳಾಗದಂತೆ ಬಾಳಲು, ಸಂಸ್ಕಾರವಂತರಾಗಲು ಇಚ್ಚಿಸುತ್ತಾರೆ, ಅದರಂತೆ ನಮ್ಮನ್ನು ಆಳುವವರು ನಮ್ಮ ಪೋಷಕರಂತೆ ನಮ್ಮ ಏಳಿಗೆಯನ್ನು ಬಯಸಬೇಕು ಕೇವಲ ನಿಯಮಗಳನ್ನು ಮಾಡಿ ಅದರಲ್ಲಿ ನಮ್ಮನ್ನು ರಕ್ಷಣೆ ಮಾಡಿ ಅದರಲ್ಲಿ ನಮ್ಮ ಸ್ವೇಚ್ಛೆಯಂತೆ ವರ್ತಿಸಲು ಅನುವು ಮಾಡಿಕೊಟ್ಟರೆ ಅಲ್ಲಿಗೆ ನಮ್ಮ ಮನೆಯಂತಾ ರಾಜ್ಯದಲ್ಲಿ ಸಂಸ್ಕಾರ ಉಳಿಯಲು ಸಾಧ್ಯವೇ? ಇಡೀ ಮನುಜ ಸಮಾಜ ಆರೋಗ್ಯಕರವಾಗಿ ಉನ್ನತಕ್ಕೇರಬೇಕಾದರೆ ಅದರಲ್ಲಿನ ಸರ್ವ ಸದಸ್ಯರೂ ಮೊದಲಿಗೆ ಒಬ್ಬರನ್ನೊಬ್ಬರು ಗೌರವಿಸುವುದು ಕಲೀಬೇಕು, ಮೋಸ, ವಂಚನೆ, ದೌರ್ಜನ್ಯ, ಕೀಳರಿಮೆ, ದಬ್ಬಾಳಿಕೆ, ಮತ್ಸರ, ಕ್ರೋಧ, ತ್ಯಜಿಸಬೇಕು. ಇವೆಲ್ಲಾ ಹೇರಳವಾಗಿ ಬೆಳೆಯಲು ಬಿಟ್ಟರೆ ಸಮಾಜ ಉನ್ನತಿಗೇರಲು ಸಾಧ್ಯವೇ ಇಲ್ಲ. ಕಾನೂನಿನ ಮೂಲಕ ರಕ್ಷಣೆಯನ್ನು ಕೊಟ್ಟಿರುವುದು ಬಹುತೇಕ ವಂಚಿತ ಪ್ರಕರಣಗಳಲ್ಲಿ

ನ್ಯಾಯವನ್ನೇನೋ ಒದಗಿಸಿದೆ. ಆದರೆ ಎಲ್ಲವೂ ಪ್ರಾಮಾಣಿಕವಾಗಿ ನಡೆದಿರುವ ವ್ಯವಹಾರಗಳಲ್ಲಿ ಈ ಕಾಯ್ದೆ ಒಬ್ಬರ ಮೇಲೆ ಇನ್ನೊಬ್ಬರ ಗೌರವ ಹಾಳು ಮಾಡಿದೆ, ಮೋಸ, ವಂಚನೆ, ದೌರ್ಜನ್ಯ, ಕೀಳರಿಮೆ, ದಬ್ಬಾಳಿಕೆ, ಮತ್ಸರ, ಕ್ರೋಧ, ಮಾನಸಿಕ ತೊಳಲಾಟ ಸಮಾಜದಲ್ಲಿ ಹೆಚ್ಚಾಗಿ ಔನತ್ಯಕ್ಕೆ ಏರಬೇಕಾದ ಸಮಾಜ ಇಂದು ಅಧೋಗತಿಗೆ ಇಳಿಯುತ್ತಿರುವ ಬಗ್ಗೆ ಏಕೆ ಶಾಸಕಾಂಗದಲ್ಲಿ ಮತ್ತು ನ್ಯಾಯಾಂಗದಲ್ಲಿ ಚಿಂತನೆ ಇಲ್ಲ.

**ವರ್ಗ ಸಂಘರ್ಷಗಳನ್ನು ಜೀವಂತ ಇಡಲು, ಅದರಲ್ಲಿ ಓಟ್ ಬ್ಯಾಂಕ್ ರಾಜಕಾರಣಕ್ಕೆ ಸಾಮಾಜಿಕ ಬದಲಾವಣೆ ತಂದಿಲ್ಲ:–** ಇಂದು ಜನಸಾಮಾನ್ಯರು ಬುದ್ಧಿವಂತರಾದರೆ ಭ್ರಷ್ಟಾಚಾರಿಗಳಿಗೆ ಕಾಲವಿಲ್ಲ ಎಂದು ಅನೇಕ ಭ್ರಷ್ಟರಿಗೆ ಗೊತ್ತಿದೆ, ಎಲ್ಲಿವರೆಗೆ ಜನರು ಇವರನ್ನು ಪ್ರಶ್ನುಸುವುದಿಲ್ಲ ಅಲ್ಲಿವರೆಗೆ ಇವರ ಅಧಿಪತ್ಯ ನಡೆಯುತ್ತಲೇ ಇರುತ್ತದೆ. ಯಾವಾಗ ಜನ ಪ್ರಶ್ನಿಸುತ್ತಾರೆ, ಅವರಿಗೆ ಸಮಸ್ಯೆಗಳಿಲ್ಲದೆ ಇದ್ದಾಗ ಪ್ರಶ್ನಿಸುತ್ತಾರೆ, ವರ್ಗ ಸಂಘರ್ಷ ಮತ್ತು ವ್ಯಾಜ್ಯಗಳಿಂದ ಸಮಾಜವನ್ನು ಬ್ಯುಸಿ ಮಾಡಿದರೆ ಇವರು ಬಚಾವಾಗಬಹುದು ಎಂಬುದೇ ಈ ಭ್ರಷ್ಟ ಶಾಸಕಾಂಗದ ಚಿಂತನೆ ಇರಬಹುದೇ? ಇಂತಹ ಬೆರಳೆಣಿಕೆಯ ಜನ ಇಂದು ಸಮಾಜವನ್ನು ತಮ್ಮ ಓಟ್ ಬ್ಯಾಂಕ್ ರಾಜಕಾರಣಕ್ಕೆ ಈ ಪರಿಸ್ತಿತಿಗೆ ದೂಡಿ ಜನರಲ್ಲಿ ಸಂಸ್ಕಾರಗಳೇ ಇಲ್ಲದಂತಾ ಪರಿಸ್ಥಿತಿ ನಿರ್ಮಾಣ ಮಾಡಿದ್ದಾರೆ. ಇಲ್ಲಿ ದಲಿತರಿಗೆ ಸಂಸ್ಕಾರವಿಲ್ಲ ಎಂಬ ಮಾತು ನನ್ನದಲ್ಲ, ಆದರೆ ಬಹುತೇಕ ಸಮಾಜದ ಎಲ್ಲಾ ವರ್ಗದಲ್ಲೂ ಅಂತಹ ಸಂಸ್ಕಾರವಿಲ್ಲದ ವರ್ಗವನ್ನು ಪೋಷಿಸುತ್ತಿದ್ದಾರೆ. ಇವರಲ್ಲಿ ಒಂದು ಗೊತ್ತು ಗುರಿ ಇಲ್ಲ ಯಾರಾದರೂ ಬಕರ ಸಿಗಲಿ ಅವನು ದಲಿತನೋ ಮುಂದುವರಿದವನೋ ಅವನನ್ನು ವಂಚಿಸಿ ಮುಳುಗಿಸುವುದೇ ಅವರ ದಂದೆಯಾಗಿ ಬಿಟ್ಟಿದೆ. ಇಂತಹ ವಂಚಕರಿಂದ ಕೇವಲ ದಲಿತರನ್ನು ಮಾತ್ರ ರಕ್ಷಿಸಿದರೆ ಸಾಕೆ, ಬೇರೆ ವರ್ಗದ ಅಮಾಯಕರು ಮನುಜರಲ್ಲವೆ. ಏಕೆ ಈ ಬಗ್ಗೆ ಏಕರೂಪ ಕಾಯ್ದೆ ಜಾರಿ ಮಾಡಲು ಚಿಂತನೆ ಇರಬಾರದು.

**ಅಧಿಕಾರಿಗಳಾದರೋ ಭ್ರಷ್ಟತೆಗೆ ಕನಿಷ್ಟ ಗ್ರಾಂಟ್ ಜಮೀನಿನ ದಾಖಲೆಯಲ್ಲಿ ನಮೂದಿಸಲು ಮುಂದಾಗದೆ ವಂಚನೆಯಲ್ಲಿ ಶಾಮೀಲಾಗಿರುವುದು ಸರಿಯೇ?**

ಇಲ್ಲಿಗೆ ಅನೇಕ ಭಾರಿ ನ್ಯಾಯಾಲಯ ಈ ಬಗ್ಗೆ ಪಹಣಿಗಳಲ್ಲಿ ನಮೂದಿಸಲು ಆದೇಶಗಳನ್ನು ಮಾಡಿದೆ. ಈ ಬಗ್ಗೆ ಆಗಿಂದಾಗ್ಗೆ ಸರ್ಕಾರಿ ಆದೇಶಗಳೂ ಆಗಿವೆ ಆದರೆ ಯಾಕೋ ಕಂದಾಯ ಇಲಾಖೆಯಲ್ಲಿನ ಭ್ರಷ್ಟರು ಈ ಬಗ್ಗೆ "ಇದು ಪರಿಶಿಷ್ಟರಿಗೆ ಗ್ರಾಂಟ್ ಮಾಡಿರುವ ಜಮೀನು" "ಸರ್ಕಾರದ ಅನುಮತಿ ಇಲ್ಲದೆ ಪರಭಾರೆ ನಿಷಿದ್ದ" ಎಂಬ ಎರಡು ಪದಗಳನ್ನು ಪಹಣಿಯಲ್ಲಿ ಸೇರಿಸಲು ಯಾರ ಹಿತಾಸಕ್ತಿಯಲ್ಲಿ ಮುಂದಾಗಿಲ್ಲ ಯೋಚಿಸಿ ನೋಡಿ. ಕಾಯ್ದೆಯನ್ನು ಬಳಸಿಕೊಂಡು ಮೋಸ ಮಾಡುವ ಗುಂಪಿನೊಂದಿಗೆ ಅಧಿಕಾರಿಗಳೂ ಶಾಮೀಲಾಗಿದ್ದಾರೆ ಎಂದರೆ ತಪ್ಪಾಗಲಾರದು.

**ವ್ಯವಸಾಯ ಜಮೀನಿನಲ್ಲಿ ಗ್ರಾಂಟ್ ಎಂಬ ನಾಟಕ ನಡೆಯುತ್ತಿದೆಯೇ:-** ಕರ್ನಾಟಕ ರಾಜ್ಯದ ಅಂಕಿ ಅಂಶಗಳನ್ನು[1] ಗಮನಿಸಿದಾಗ ಇದು ಸತ್ಯ ಅನಿಸುತ್ತದೆ. 2010-11 ರಲ್ಲಿ ಕರ್ನಾಟಕದಲ್ಲಿ ವ್ಯವಾಸಯಕ್ಕೆ ಯೋಗ್ಯವಾದ ಜಮೀನು ಸುಮಾರು 300 ಲಕ್ಷ ಎಕರೆ ಇದೆ ಇದರಲ್ಲಿ 55 ಲಕ್ಷ ಎಕರೆ ವ್ಯವಸಾಯವಿಲ್ಲದೆ ಬಿದ್ದಿದೆ. ಅಂದರೆ ಶೇಖಡ 18% ಜಮೀನು ಬಿತ್ತನೆ ಇಲ್ಲದೆ ಸುಮ್ಮನೆ ಬಿದ್ದಿದೆ. ಇಂತಹ ಜಮೀನನ್ನು ಸ್ಲಂಗಳಲ್ಲಿ ವಾಸಿಸುವ ಅನಕ್ಷರಸ್ಥ ಜೀವನೋಪಾಯ ಇಲ್ಲದ ಎಸ್.ಸಿ ಎಸ್.ಟಿ ಜನರಿಗೆ ಹಂಚಿದರೂ ಇನ್ನೂ ಹೆಚ್ಚಿನ ಜಮೀನು ಉಳಿಯುತ್ತದೆ. ಉಳಿಮೆ ಮಾಡದೆ ಬಿದ್ದಿರುವ ಜಮೀನನ್ನು ಸರ್ಕಾರಿ ಅಧಿಕಾರಿಗಳು (ಅಸಿಸ್ಟೆಂಟ್ ಕಮೀಷನರ್) ಮುಟ್ಟುಗೋಲು ಹಾಕಿಕೊಂಡು ಯೋಗ್ಯರಿಗೆ ಭೂ ಉಳಿಮೆಗೆ ಲೀಸ್ಗೆ ನೀಡಬಹುದಾದ ಕಾನೂನು ಕಲಂ 85 ಕರ್ನಾಟಕ ಭೂ ಸುಧಾರಣೆ ಕಾನೂನಿನಲ್ಲಿ ಇದೆ. ಇದು ಯಾಕೆ ಜಾರಿಯಾಗುತ್ತಿಲ್ಲ. ಇಲ್ಲಿ ಬಲಾಢ್ಯರ ಬೆದರಿಕೆ ಇದೆಯೋ, ದಲಿತರಲ್ಲಿ ಭೂ ಉಳಿಮೆಯ ಆಸಕ್ತಿ ಇರುವವರು ಸಿಗದಾಗಿದ್ದಾರೆಯೇ? ಇಲ್ಲವೆ ದಲಿತರ ಜಮೀನೇ ಹಾಗೆ ಬಿದಿದ್ದೆಯೇ? ಹೋಗಲಿ ಅಲ್ಲಿ ಅವರ ಸಮಸ್ಯೆ ಆದರೂ ಪರಿಹರಿಸಬಹುದಲ್ಲ, ಅನೇಕ ಕಲ್ಯಾಣ ಯೋಜನೆಯ ನಡುವೆಯೂ ಈ ಗತಿ ಇದೆಯೇ? ಎಲ್ಲವೂ ನಾಟಕಮಯವಾಗಿ ಕಾಣುತ್ತಿದೆ.

---

[1] http://raitamitra.kar.nic.in/stat/1.htm

| Agricultural Census 2010-11 | | | | |
|---|---|---|---|---|
| **Farmer Category** | **(lakhs)** | **%** | **Area Operated (lakh ha.)** | **%** |
| Marginal (0.01 to 0.99 ha.) | 38.49 | 49 | 18.51 | 15 |
| Small (1.00 to 1.99 ha.) | 21.38 | 27 | 30.20 | 25 |
| Semi-med (2.00 to 3.99 ha.) | 12.67 | 16 | 33.93 | 28 |
| Medium (4.00 to 9.99 ha. ) | 5.11 | 7 | 29.04 | 24 |
| Large (10.00 ha. & above) | 0.68 | 1 | 9.94 | 8 |
| **Total** | **78.32** | **100** | **121.61** | **100** |
| | | | | |
| | | **Social Group -** | **Scheduled Caste** | |
| **Marginal** | 5.11 | 56 | 2.44 | 23 |
| **Small** | 2.64 | 29 | 3.71 | 35 |
| **Semi-medium** | 1.10 | 12 | 2.85 | 27 |
| **Medium** | 0.27 | 3 | 1.45 | 14 |
| **Large** | 0.02 | 0 | 0.29 | 3 |
| **Total** | **9.14** | **100** | **10.74** | **100** |
| | | **Social Group -** | **Scheduled Tribe** | |
| **Marginal** | 2.22 | 47 | 1.11 | 16 |
| **Small** | 1.43 | 30 | 2.02 | 29 |
| **Semi-medium** | 0.78 | 16 | 2.07 | 29 |
| **Medium** | 0.26 | 6 | 1.46 | 21 |
| **Large** | 0.03 | 1 | 0.39 | 6 |
| **Total** | **4.72561** | **100** | **7.05** | **100** |

ಕರ್ನಾಟಕದಲ್ಲಿ 1.5 ಕೋಟಿ ಎಸ್.ಸಿ ಜನರ ಪೈಕಿ 9.14 ಲಕ್ಷ ವ್ಯವಸಾಯ ಕುಟುಂಬಕ್ಕೆ 26.5 ಲಕ್ಷ ಎಕರೆ (10.74 ಹೆಕ್ಟೇರ್) ಜಮೀನು ಎಸ್.ಸಿ ಜನಾಂಗದ ಬಳಿ ಇದೆ. ಕರ್ನಾಟಕದಲ್ಲಿರುವ 43 ಲಕ್ಷ ಎಸ್.ಟಿ ಸಮುದಾಯದ ಪೈಕಿ 4.72 ಲಕ್ಷ ವ್ಯವಸಾಯ ಕುಟುಂಬಕ್ಕೆ 17.42 ಲಕ್ಷ ಎಕರೆ (7.05 ಹೆಕ್ಟೇರ್) ಜಮೀನು ಇದೆ. ಈ ವ್ಯವಸಾಯ ಜಮೀನು ಮತ್ತು 55 ಲಕ್ಷ ಬಿತ್ತನೆ ಆಗದ ಜಮೀನು ಗಮನಿಸಿದಾಗ ಇದು ರಿಯಲ್ ಎಸ್ಟೇಟ್ ದಂದೆಗೆ ಬಳಕೆಯಾದ ಜಮೀನು ಹಾಗೆ ಬಿತ್ತನೆ ಆಗದೆ ಉಳಿದಿದೆ ಎನ್ನಿಸುತ್ತದೆ. ಇಂತಹ 55 ಲಕ್ಷ ಎಕರೆ ಜಮೀನು ಜಮೀನಿಲ್ಲದ ದಲಿತರಿಗೆ, ನೌಕರಿ ಇಲ್ಲದ ದಲಿತರಿಗೆ, ಸಮಾಜದ ದುರ್ಬಲ ರೈತ ಸಮುದಾಯಕ್ಕೆ ಮರು ಹಂಚಿಕೆಯು ಕನಿಷ್ಟ ಲೀಸ್ ಮೂಕೇನ ಆದರೂ ಸಮಾಜವನ್ನು ದುಡಿಮೆಯತ್ತ ಕೊಂಡೊಯ್ಯುವ ಹಾಗೆ ಆಗುತ್ತದೆ. ಆದರೆ ಅಂತಹ ವಾತಾವರಣ ನಿರ್ಮಿಸುವ ಕಾನೂನು ಇದ್ದರೂ ಅದು ಜಾರಿಗೆ ತರುವ ತಾಳ್ಮೆ ಇಲ್ಲದೆ, ಸಮಾಜದಲ್ಲಿ ಅಶಾಂತಿಯ ವಾತಾವರಣ ನಿರ್ಮಾಣ ಮಾಡುವ ಅನೇಕ ವ್ಯರ್ಥ ವ್ಯಾಜ್ಯಗಳು ಚಾಲ್ತಿಯಲ್ಲಿ ಇವೆ ಇದು ವಿಪರ್ಯಾಸವಲ್ಲದೆ ಮತ್ತಿನ್ನೇನು?

# ಅಧ್ಯಾಯ–10

# ಮಾರ್ಗದರ್ಶಿ ನಿಯಮಗಳು

**ಸರ್ಕಾರ ಆಗಿಂದಾಗ್ಗೆ ನೀಡಿರುವ ಮಾರ್ಗದರ್ಶನಗಳನ್ನು ನೋಡಿ**

ಕರ್ನಾಟಕ ಸರ್ಕಾರ ಅನೇಕ ವರ್ಷಗಳಿಂದ ಪಿ.ಟಿ.ಸಿ.ಎಲ್ ಕಾಯ್ದೆಗೆ ಸಂಬಂದಿಸಿದಂತೆ ಹಲವಾರು ಆದೇಶಗಳನ್ನು, ಸರ್ಕ್ಯುಲರ್ ಗಳನ್ನು ಪ್ರಕಟಿಸುತ್ತಲೇ ಬಂದಿದೆ, ಆದರೂ ಆ ಬಗ್ಗೆ ಸರ್ಕಾರಿ ಅಧಿಕಾರಿಗಳಲ್ಲಿ ದಿವ್ಯ ನಿರ್ಲಕ್ಷ್ಯತೆ ಮತ್ತು ಪ್ರಕರಣಗಳಲ್ಲಿ ಭ್ರಷ್ಟ ವ್ಯವಸ್ಥೆಯಿಂದ ಶಾಮೀಲಾಗುವಿಕೆ ಅಮಾಯಕರನ್ನು (ಖರೀದಿದಾರರನ್ನು ಮತ್ತು ಗ್ರಾಂಟಿಗಳನ್ನು) ಸಂಕಷ್ಟಕ್ಕೆ ಸಿಲುಕಿಸುತ್ತಿದೆ. ಈ ಬಗ್ಗೆ ಅರಿವು ಮೂಡಿಸಲು ಅಂತಹ ಆದೇಶಗಳನ್ನು / ಸರ್ಕ್ಯುಲರ್ ಪ್ರತಿಯನ್ನು ವಿವಿದ ಮೂಲಗಳಿಂದ ಸಂಗ್ರಹಿಸಿ ಹಲವಾರ್ ಅನುಭಂದಗಳಲ್ಲಿ ನೀಡಲಾಗಿದೆ. ಅನುಭಂದ – 5 ರಲ್ಲಿ ಕಾಯ್ದೆಯಲ್ಲಿನ ನಿಯಮಗಳು ಮತ್ತು ನಮೂನೆ ನೀಡಲಾಗಿದೆ.

**ಉನ್ನತ ಕೋರ್ಟ್ ತೀರ್ಪು ಹೇಗೆ ಪರಿಗಣಿಸಬೇಕು**

ಈ ಬಗ್ಗೆ ಕರ್ನಾಟಕ ಹೈಕೋರ್ಟ್ ಪಿ.ಟಿ.ಸಿ.ಎಲ್ ಪ್ರಕರಣದಲ್ಲಿ ಹೀಗೆ ವ್ಯಾಖ್ಯಾನಿಸಿದೆ,[1] "ಈ ನ್ಯಾಯಾಲಯದ .... ಅಂತಹ ತೀರ್ಪುಗಳು ಮತ್ತು ಆದೇಶಗಳು ಅನ್ವಯಿಸುವ ಪೂರ್ವನಿದರ್ಶನವನ್ನು ಹೊಂದಿರುತ್ತದೆ ಎಂದು ಉಲ್ಲೇಕಿಸಿದಾಗ, ನ್ಯಾಯಾಲಯವು ಅಂತಹ ತದ್ರೂಪ ಪ್ರಕರಣಗಳಲ್ಲಿ ಅಳವಡಿಸಲು, ಅದರಲ್ಲಿ ಯಾವ ಮಾರ್ಗದರ್ಶನ ಒಳಗೊಂಡಿದೆ ಅಥವಾ ಯಾವ ಅಂಶ ಆ ಕೇಸಿನಿಂದ ವಿಕಸನಗೊಂಡಿದೆ ಎಂದು ಕಂಡುಹಿಡಿಯುವುದು ಅನಿವಾರ್ಯವಾಗುತ್ತದೆ. ನ್ಯಾಯಾಲಯದ ಯಾವುದೇ ಆದೇಶ ಅಥವಾ ತೀರ್ಪಿನಲ್ಲಿ ಪ್ರತಿಯೊಂದು ಕಂಡುಹಿಡಿಯುವಿಕೆಯಲ್ಲಿ ಮತ್ತು ದಾರಿತಪ್ಪಿದ ಅವಲೋಕನಗಳು ಅಥವಾ ಒತ್ತಿಹೇಳಿದ ಪ್ರತಿಪಾದನೆಯು ತೀರ್ಪಿನ ಮಾರ್ಗಸೂಚಿ ಅಂಶ ಹೊಂದಿರುವುದಿಲ್ಲ. ತೀರ್ಪಿನ ರೇಷಿಯೋ (ಮಾರ್ಗಸೂಚಿ ಅಂಶ) ರೂಪಿಸಲು, ಎದುರಾಳಿಯಿಂದ ಪ್ರಶ್ನಿತವಾಗಿ ಮೊಕದ್ದಮೆಯಲ್ಲಿ ಪಕ್ಷಗಳ

[1] ರುದ್ರಪ್ಪ ವಿ. ವಿಶೇಷ ಜಿಲ್ಲಾಧಿಕಾರಿಗಳು – 2012 (1) ಕರ್.ಎಲ್.ಜೆ 227

ನಡುವೆ ವಿವಾದಾಂಶವಾಗಿರಬೇಕು. ಪಾರ್ಟಿಗಳು ಆ ವಿಷಯದ ಬಗ್ಗೆ ವಿಚಾರಣೆಗೆ ಹೋಗಿರಬೇಕು. ನ್ಯಾಯಾಲಯದ ಮುಂದೆ ಸಾಕ್ಷ್ಯಗಳ ವಿಮರ್ಶೆಯಾಗಿರಬೇಕು ಮತ್ತು ವಾಸ್ತವಿಕತೆಗೆ ಸಂಬಂಧಿಸಿದ ಕಾನೂನು ತತ್ವವನ್ನು ಅನ್ವಯಿಸಿರಬೇಕು ಮತ್ತು ಆ ಕಾನೂನು ತತ್ವವನ್ನು ಅನ್ವಯಿಸುವ ನಿರ್ಧಾರ ಮತ್ತು ಕಾನೂನು ತತ್ವವು ಕೇವಲ ಒಂದು ಮಾರ್ಗಸೂಚಿ ಅಂಶ ಮತ್ತು ಸಾಮಾನ್ಯ ಸ್ವರೂಪದಲ್ಲಿ ಕಾನೂನಿನ ಘೋಷಣೆಯನ್ನು ಒಳಗೊಂಡಿರುತ್ತದೆ, ಅಂತಹ ನ್ಯಾಯಾಲಯಗಳ ಮುಂದೆ ಇದೇ ರೀತಿಯ ಪ್ರಶ್ನೆಗಳು ಉದ್ಭವಿಸಿದಾಗ ಸಮಕಾಲೀನ ಅಥವಾ ಅಧೀನ ನ್ಯಾಯವ್ಯಾಪ್ತಿಯ ನ್ಯಾಯಾಲಯಗಳು ಅದನ್ನು ಅನುಸರಿಸಬೇಕು. ಈ ಯಾವುದೇ ಅಂಶಗಳ ಅನುಪಸ್ಥಿತಿಯಲ್ಲಿ, ಇದು ಮಾರ್ಗಸೂಚಿ ಅಂಶ ಅಥವಾ ಅದು ಒಂದು ಪೂರ್ವನಿದರ್ಶನವಾಗಲು ಸಾಧ್ಯವಿಲ್ಲ. ... ಮೊದಲ ನಿದರ್ಶನದಲ್ಲಿ, ಕಾಯಿದೆಯ ಸೆಕ್ಷನ್ 5 ರ ಅಡಿಯಲ್ಲಿ ನಡೆಯುವ ಪ್ರಕ್ರಿಯೆಗಳು ವಿರೋಧಿಸುವ ನಡಾವಳಿಗಳ ಸ್ವರೂಪದಲ್ಲಿರುವುದಿಲ್ಲ. ಸಿವಿಲ್ ನ್ಯಾಯಾಲಯದ ಮುಂದೆ ಅಭ್ಯಾಸ ಮತ್ತು ಕಾರ್ಯವಿಧಾನದಲ್ಲಿ ಮುಳುಗಿರುವ ವಕೀಲರು ಮತ್ತು ನ್ಯಾಯಾಧೀಶರು ಸಿವಿಲ್ ಪ್ರೊಸೀಜರ್ ಕೋಡ್ನಿಂದ ಮಾರ್ಗದರ್ಶನ ಪಡೆಯುತ್ತಾರೆ ಮತ್ತು ಸಿವಿಲ್ ಪ್ರೊಸೀಜರ್ ಸಂಹಿತೆಯ ಸಂದರ್ಭದಲ್ಲಿನ ನ್ಯಾಯಾಲಯಗಳ ತೀರ್ಪು ಮತ್ತು ಆದೇಶಗಳೊಂದಿಗೆ ಸಂಭಾಷಿಸುತ್ತಾರೆ, ವಿಶೇಷವಾಗಿ ರೆಸ್ ಜುಡಿಕೆಟಾದ ಪರಿಕಲ್ಪನೆ, ಕೋಡ್ನ ಸೆಕ್ಷನ್ 11 ರಲ್ಲಿ ಕಂಡುಬರುತ್ತದೆ, ಸಿವಿಲ್ ಪ್ರೊಸೀಜರ್ ಎಲ್ಲಾ ಸಿವಿಲ್ ನಡಾವಳಿಗಳಲ್ಲಿ ಮಾರ್ಗದರ್ಶಕ ಅಂಶವಾಗಿದೆ. ಅನಿವಾರ್ಯವಾಗಿ ಪ್ರವೃತ್ತಿ ಮತ್ತು ತರಬೇತಿಯ ಮೂಲಕ, ಸಿವಿಲ್ ಪ್ರೊಸೀಜರ್ ಸಂಹಿತೆಯ ನಿಬಂಧನೆಗಳನ್ನು ವ್ಯಾಖ್ಯಾನಿಸುವ ವಿರೋಧಿಸುವ ಸಿವಿಲ್ ದಾವೆಗಳ ಸಂದರ್ಭದಲ್ಲಿ ಸಲ್ಲಿಸಲಾದ ಇತರ ಎಲ್ಲಾ ವಿಚಾರಣೆಗಳು ಮತ್ತು ತೀರ್ಪುಗಳಲ್ಲಿ ಅಂತಹ ಕಾರ್ಯವಿಧಾನವನ್ನು ಅನ್ವಯಿಸಲು ಪ್ರಯತ್ನಿಸುವುದು ಯಾವಾಗಲೂ ಅವರ ಮನಸ್ಸಿನ ಆಳದಲ್ಲಿ ಹೆಚ್ಚಾಗಿ ಇರುತ್ತದೆ. ...... ಅನೇಕ ಬಾರಿ, ವಿಶೇಷ ಶಾಸನಬದ್ಧ ನಿಬಂಧನೆಗಳು, ವಿಶೇಷ ಶಾಸನಗಳಲ್ಲಿ ಸಂಯೋಜಿಸಲಾದ

ನಿರ್ದಿಷ್ಟ ಶಾಸನಬದ್ಧ ನಿಬಂಧನೆಗಳು, ಹಾಲಿ ಕಾಯ್ದೆ ಅಂತಹ ಒಂದು ಪ್ರಕರಣದ ಬಗ್ಗೆ ದೃಷ್ಟಿ ದೂರವಾಗಿಸಿ ಮತ್ತು ಸಾಮಾನ್ಯ ಕಾರ್ಯವಿಧಾನ ಮತ್ತು ಸಾಮಾನ್ಯ ಕಾನೂನುಗಳ ವ್ಯಾಖ್ಯಾನದ ಸಂದರ್ಭದಲ್ಲಿ ಸಲ್ಲಿಸಲಾದ ತೀರ್ಪುಗಳು ಅವುಗಳ ಪ್ರಭಾವವನ್ನು ಹೆಚ್ಚಾಗಿ ಬಳಸಿಕೊಳ್ಳುತ್ತಾ ಕಾನೂನುಬದ್ಧವಾಗಿ ತಪ್ಪಾದ ವಿಧಾನಕ್ಕೆ ಕಾರಣವಾಗುತ್ತದೆ...... 'ಅಸಿಸ್ಟೆಂಟ್ ಕಮೀಷನರ್ ತೃಪ್ತಿ' ಎಂಬ ಪದವನ್ನು ಅವರ ಪರವಾಗಿ ಖಾಲಿ ಚೆಕ್ ನೀಡುವಂತೆ ಅಧಿಕಾರದ ವಿಕೃತಿಯಿಂದ ಓಡಾಡಲು ಅಥವಾ ಅವರ ಮನಸ್ಸಿನ ಕೊಂಕಾಟದಂತೆ ಮತ್ತು ಭ್ರಮೆಗಳಂತೆ ಆದೇಶಗಳನ್ನು ರವಾನಿಸಲು ವ್ಯಾಖ್ಯಾನಿಸಲಾಗುವುದಿಲ್ಲ ಎಂಬುದರಲ್ಲಿ ಸಂದೇಹವಿಲ್ಲ. ಇದು ಖಂಡಿತವಾಗಿಯೂ ಕಾಯ್ದೆಯ ವಸ್ತು ಮತ್ತು ಉದ್ದೇಶದಿಂದ ನಿಯಂತ್ರಿಸಲ್ಪಡುತ್ತದೆ ಮತ್ತು ನಿರ್ದಿಷ್ಟವಾಗಿ ವಿಚಾರಣೆಯ ಉದ್ದೇಶವು ವಿಷಯದ ಭೂಮಿಯನ್ನು ಮಂಜೂರು ಮಾಡಿದ ಭೂಮಿಯೇ ಎಂದು ಮತ್ತು ಹಾಗಿದ್ದಲ್ಲಿ ಎಸ್‌ಸಿ ಸಮುದಾಯಕ್ಕೆ ಸೇರಿದ ವ್ಯಕ್ತಿಯ ಪರವಾಗಿ ನೀಡಲಾಗಿದೆಯೇ ಎಂದು ಕಂಡುಹಿಡಿಯಬೇಕಿರುತ್ತದೆ...... ಭೂಮಿಯನ್ನು ನೀಡುವ ಸಮಯದಲ್ಲಿ ವಿಧಿಸಲಾದ ಷರತ್ತುಗಳು ಸಹ ಬಹಳ ಪ್ರಸ್ತುತವಾಗಿದ್ದರೂ, ಅನುದಾನದ ಆದೇಶದಲ್ಲಿ ಸ್ವತಃ ವಿವರಿಸಲಾದ ಷರತ್ತುಗಳು, ಹಾಗೆಯೇ ನಿರ್ಧಾರವೂ ಕೂಡ, ಅಂತ್ಯ ಅಥವಾ ಸಮಗ್ರವಲ್ಲ. ಶಾಸನಬದ್ಧವಾಗಿರುವ ಷರತ್ತುಗಳು ಯಾವಾಗಲೂ ಅತಿಮುಖ್ಯ ಪರಿಣಾಮವನ್ನು ಬೀರುತ್ತವೆ ಮತ್ತು ಈ ಪರಿಸ್ಥಿತಿಗಳು ಮೇಲುಗೈ ಸಾಧಿಸಬೇಕು. ನಿರ್ದಿಷ್ಟ ಸಂದರ್ಭದಲ್ಲಿ ಅದು ಶಾಸನಬದ್ಧ ಷರತ್ತುಗಳಿಗೆ ಮಾತ್ರ ಪೂರಕವಾಗಿರುತ್ತದೆ. ಇದು ಕಾಯ್ದೆಯ ಉದ್ದೇಶ ಮತ್ತು ಶಾಸನದ ನಿಬಂಧನೆಗಳನ್ನು ಮುನ್ನಡೆಸುವವರೆಗೆ ಮಾತ್ರ ಅದು ಪೂರಕವಾಗಬಹುದು ಮತ್ತು ಅದು ವ್ಯತಿರಿಕ್ತವಾಗಿದ್ದರೆ, ಕೇವಲ ಶಾಸನಬದ್ಧ ಷರತ್ತುಗಳು ಮಾತ್ರ ಮೇಲುಗೈ ಸಾಧಿಸುತ್ತದೆ.

ಪ್ರತಿಯೊಂದು ತೀರ್ಪನ್ನು ಆ ನಿರ್ದಿಷ್ಟ ಪ್ರಕರಣದ ಸಂಗತಿಗಳ ಬೆಳಕಿನಲ್ಲಿ ಅರ್ಥ ಮಾಡಿಕೊಳ್ಳಬೇಕು. ಪ್ರಕರಣವೊಂದರಲ್ಲಿ[1] ಗೌರವಾನ್ವಿತ ಸುಪ್ರೀಂ ಕೋರ್ಟ್ ಸರಿಯಾಗಿ ಹೇಳಿರುವಂತೆ, "ವಾಸ್ತವಿಕತೆಗೆ (ಫ್ಯಾಕ್ಟ್) ಯಾವುದೇ ನ್ಯಾಯ ನಿದರ್ಶನ ಇಲ್ಲ, ಕಾನೂನು ಸಲಹೆಗಾರರು ಮತ್ತು ನ್ಯಾಯಾಧೀಶರು ಸಹ ಕೆಲವೊಮ್ಮೆ ವಾದಿಸಲು ಮತ್ತು ಅವರು ಅಂತಹ ನಿದರ್ಶನ ಇರುವಂತೆ ವರ್ತಿಸುತ್ತಾರೆ". ಕಾನೂನಿನ ಪ್ರಶ್ನೆಯನ್ನು ನಿರ್ಧರಿಸಿದರೆ ಮಾತ್ರ ತೀರ್ಪು ಪೂರ್ವನಿದರ್ಶನದಂತೆ ಲಭ್ಯವಿದೆ. ಬೇರೆ ರೀತಿಯಲ್ಲಿ ಹೇಳುವುದಾದರೆ, ತೀರ್ಮಾನಕ್ಕೆ ಮಾತ್ರ ಬರಲು ನಿಗದಿಪಡಿಸಿದ ತತ್ವಗಳು ಒಂದು ಪೂರ್ವನಿದರ್ಶನದಂತೆ ಬಂಧಿಸಲ್ಪಡುತ್ತವೆ.

**ಕೋಡ್ 1888 ರಲ್ಲಿ ನಿಯಮಗಳಲ್ಲೇ ಗೊಂದಲ**

ಈ ಬಗ್ಗೆ ಕರ್ನಾಟಕ ಹೈಕೋರ್ಟಿನ ದ್ವಿಸದಸ್ಯ ಪೀಠ[2] 1983 ರಲ್ಲೇ ಕಳವಳ ವ್ಯಕ್ತಪಡಿಸಿ ಒಂದು ಸಮಗ್ರ ಪುಸ್ತಕವನ್ನು ಹೊರತರಲು ಸರ್ಕಾರಕ್ಕೆ ಸೂಚಿಸಿದೆ, ಆದರೆ ನನಗೆ ತಿಳಿದ ಮಟ್ಟಿಗೆ ಈ ಬಗ್ಗೆ ಪ್ರಯತ್ನ ಆಗಿಲ್ಲ ಎನ್ನಬಹುದು. ನ್ಯಾಯಾಲಯ ತೀರ್ಪಿನ  ಪ್ಯಾರಾ 109 ರಲ್ಲಿ ಹೀಗೆಂದಿದೆ, "ಹೆಚ್ಚಿನ ಸಂಖ್ಯೆಯ ಪ್ರಕರಣಗಳು, ಅವುಗಳಲ್ಲಿ ಕೆಲವು ಈ ನ್ಯಾಯಾಲಯದಿಂದ ರವಾನೆಯಾಗಿವೆ, ಅನುದಾನದ ಸಮಯದಲ್ಲಿ ಚಾಲ್ತಿಯಲ್ಲಿರುವ ಕಾನೂನುಗಳನ್ನು ಕಂಡುಹಿಡಿಯಬೇಕಾದ ಎಸಿಗಳು ಇನ್ನೂ ನಿರ್ಧರಿಸಬೇಕಾಗಿದೆ. <u>ಎಸಿಗಳು ಮತ್ತು ಇಡೀ ರಾಜ್ಯದಲ್ಲಿ ಸಂಬಂಧಪಟ್ಟ ಪ್ರದೇಶದಲ್ಲಿ ಜಾರಿಯಲ್ಲಿದ್ದ ಕಾನೂನುಗಳನ್ನು ಸುಲಭವಾಗಿ ಕಂಡುಹಿಡಿಯಬಹುದೇ ಎಂದು ನಾವು ಗಂಭೀರವಾಗಿ ಅನುಮಾನಿಸುತ್ತೇವೆ.</u> ಎಸಿಗಳನ್ನು ಸರಿಯಾಗಿ ನಿರ್ವಹಿಸಲು ಮತ್ತು ಅವುಗಳ ಮುಂದೆ ಉದ್ಭವಿಸುವ ಪ್ರಕರಣಗಳನ್ನು ತೃಪ್ತಿಕರವಾಗಿ ನಿರ್ಧರಿಸಲು ಎಸಿಗಳಿಗೆ ಅನುಕೂಲವಾಗುವಂತೆ, ಏಕರೂಪದ ಭೂ ಮಂಜೂರಾತಿ ನಿಯಮಗಳಿಗೆ ಮುಂಚಿತವಾಗಿ ಜಾರಿಯಲ್ಲಿದ್ದ ಭೂ ಮಂಜೂರಾತಿ ನಿಯಮಗಳು ಮತ್ತು

---

[1] ವಿಲ್ಲೀ ಸ್ಲೇನಿ ವಿ. ಮಧ್ಯಪ್ರದೇಶ ರಾಜ್ಯ 1955 (2) ಎಸ್.ಸಿ.ಆರ್ 1140

[2] ಲಕ್ಷ್ಮಮ್ಮ ವಿ. ಕರ್ನಾಟಕ ರಾಜ್ಯ – 1983 (1) ಕರ್.ಎಲ್.ಜೆ 417 (ಡಿ.ಬಿ)

ಆದೇಶಗಳ ಸಂಯುಕ್ತವನ್ನು ಹೊರತರುವುದು ಸರ್ಕಾರಕ್ಕೆ ಸೂಕ್ತವಾಗಿದೆ. ಎಲ್ಲರ ಅನುಕೂಲಕ್ಕಾಗಿ ಪ್ರಕಟಿಸಬೇಕಿರುತ್ತದೆ. ಅಂತಹ ಸಂಯುಕ್ತ ಪುಸ್ತಕವನ್ನು ಸರ್ಕಾರವು ಶೀಘ್ರವಾಗಿ ಹೊರತರುತ್ತದೆ ಎಂದು ನಾವು ಮನಃಪೂರ್ವಕವಾಗಿ ಆಶಿಸುತ್ತೇವೆ."

ಗ್ರಾಂಟ್ ಆದ ತಾರೀಖಿನಲ್ಲಿ ಯಾವ ಕಾನೂನು ಜಾರಿಯಲ್ಲಿ ಇತ್ತು ಎಂಬುದು ಬಹಳ ಹಿಂದಿನ ಗ್ರಾಂಟ್ ಗಳಲ್ಲಿ ಮುಖ್ಯವಾಗಿರುತ್ತದೆ. ಮರಿಯಪ್ಪ (2004) ನವರ ಕೇಸಿನಲ್ಲಿ 1929 ರಲ್ಲಿ ಇದ್ದ ಸರ್ಕಾರಿ ಆದೇಶವನ್ನು ಕಾನೂನು ಎಂದು ಪರಿಗಣಿಸಿರುವುದಿಲ್ಲ ಹಾಗಾಗಿ ಆ ಸರ್ಕಾರಿ ಆದೇಶದ ಅವದಿಯಲ್ಲಿ ನೋ ರೂಲ್ ಫೀರಿಯೆಡ್ (ಕಾನೂನು ಇಲ್ಲದ ಅವದಿ) ಬರುವುದರಿಂದ ಗ್ರಾಂಟ್ ಯಾವುದೇ ಕಂಡೀಷನ್ ಉಲ್ಲಂಘನೆ ಮಾಡಿರುವುದಿಲ್ಲ ಎಂದು ತೀರ್ಪು ನೀಡಲಾಗಿರುತ್ತೆ. ಸದರಿ ಅಂತದ್ದೇ ಗೋವಿಂದರಾಜು ರವರ ಕೇಸಿನಲ್ಲಿ (2010) ಜಸ್ಟೀಸ್ ಅನಂದ ಬೈರರೆಡ್ಡಿ ರವರು ನೀಡಿರುವ ತೀರ್ಪಿನಲ್ಲಿ ಈ ಅಂಶವನ್ನು ಎತ್ತಿ ತೋರಿದ್ದಾರೆ. ಇಲ್ಲಿ ಸದರಿ ಗ್ರಾಂಟ್ ಕಂಡೀಷನ್ ಉಲ್ಲಂಘನೆ ವಿಚಾರಕ್ಕೆ ಬಂದರೆ 01-01-1979 ರ ನಂತರ ಮಾಡುವ ಪರಭಾರೆಗಳಿಗೆ ಇದು ಮುಖ್ಯವಾಗಿರುವುದಿಲ್ಲ. ಇಲ್ಲಿ ಸರ್ಕಾರಿ ಪೂರ್ವಾನುಮತಿ ಪಡೆಯದೆ ಮಾಡುವ ವ್ಯವಹಾರವು ಅನೂರ್ಜಿತವಾಗುತ್ತದೆ.

01-01-1979 ರ ನಂತರ ಎಸ್.ಸಿ/ಎಸ್.ಟಿ ರವರ ಗ್ರಾಂಟ್ ಜಮೀನು ಪರಭಾರೆ ಆಗಿದ್ದರೆ, ಅದು ಸರ್ಕಾರಿ ಅನುಮತಿ ಪಡೆದು ಕ್ರಯ ಮಾಡಿರುವುದೇ ಎಂಬ ಅಂಶ ಮುಖ್ಯವಾಗುತ್ತದೆ. ಪಿ.ಟಿ.ಸಿ.ಎಲ್ ಪ್ರಕರಣಗಳಲ್ಲಿ 01-01-1979 ಕ್ಕೆ ಮುಂಚೆ ಪರಭಾರೆ ಆಗಿದ್ದರೆ ಅಥವ ಗ್ರಾಂಟ್ ಆಗಿದ್ದರೆ, ಅಂದಿನ ಗ್ರಾಂಟ್ ನಿಯಮ ಏನಿತ್ತು ಎಂಬ ಬಗ್ಗೆ ಅನೇಕ ಕೇಸುಗಳಲ್ಲಿ ಉಲ್ಲೇಖವಿದೆ,

(1) ಮೊದಲಿಗೆ ನೋಟಿಫಿಕೇಷನ್ ನಂ. 150 ದಿನಾಂಕ 22-07-1890 ರಲ್ಲಿ ನಿಯಮಗಳನ್ನು ಜಾರಿ ಮಾಡಲಾಗಿತ್ತು, ನಂತರ ನೋಟಿಫಿಕೇಷನ್ ನಂ. 264 ದಿನಾಂಕ 10-07-1901 ರಲ್ಲಿ 01-09-1901 ರಿಂದ ಜಾರಿಯಾಗುವಂತೆ ಮೈಸೂರು ಭೂ ಕಂದಾಯ ನಿಯಮ ಜಾರಿ

ಗೊಳಿಸಲಾಗಿತ್ತು. ಈ ಬಗ್ಗೆ ಪುಸ್ತಕದ ಕೊನೆಯಲ್ಲಿ ಅನುಭಂದ-1 ರಂತೆ ವಿವರ ನೀಡಲಾಗಿದೆ

(2). ದಿನಾಂಕ 01-11-1934 ಕ್ಕೆ ಇದ್ದ ಮೈಸೂರು ಭೂ ಕಂದಾಯ ನಿಯಮ ಅನುಭಂದ 2 ರಲ್ಲಿ ನೀಡಲಾಗಿದ್ದು ಅದರಂತೆ 28-11-1931 ರಿಂದ ಆದ ತಿದ್ದುಪಡಿಯಂತೆ ನಿಯಮ 43(5) ಮತ್ತು 43(6) ಅಡಿಯಲ್ಲಿ ಡಿಪ್ರೆಸ್ಡ್ ಕ್ಲಾಸ್ ವರ್ಗದವರಿಗೆ ನೀಡಿದ ಅಪ್ಸೆಟ್ ಮೌಲ್ಯದ ಗ್ರಾಂಟ್ ಜಮೀನು 20 ವರ್ಷ ಪರಭಾರೆ ಮಾಡದಂತೆ ನಿಯಮ ಇರುತ್ತದೆ. ಮುಂದುವರಿದ ಕನ್ಸೆಷನ್ (ಮಾಫೆ) ಕಂದಾಯ ಪಾವತಿಯಲ್ಲಿ ಕೂಡ ಒದಗಿಸಲಾಗಿದೆ. ಈ ಬಗ್ಗೆ ಪುಸ್ತಕದ ಕೊನೆಯಲ್ಲಿ ಅನುಭಂದ-2 ರಂತೆ ವಿವರ ನೀಡಲಾಗಿದೆ

(3) ಏಪ್ರಿಲ್ 1956 ಕ್ಕೆ ಅನ್ವಯಿಸುವಂತೆ ಇದ್ದ ಕಾನೂನಿನಲ್ಲಿ ಉಚಿತ ಗ್ರಾಂಟ್ ಜಮೀನು 15 ವರ್ಷ ಪರಭಾರೆ ಮಾಡಬಾರದು ಅಪ್ಸೆಟ್ ಮೌಲ್ಯದ ಗ್ರಾಂಟ್ ಜಮೀನು 10 ವರ್ಷ ಪರಭಾರೆ ಮಾಡದಂತೆ ನಿಯಮ ಇರುತ್ತದೆ. ಈ ಬಗ್ಗೆ ಪುಸ್ತಕದ ಕೊನೆಯಲ್ಲಿ ಅನುಭಂದ-3 ರಂತೆ ವಿವರ ನೀಡಲಾಗಿದೆ.

(4) ಮೈಸೂರು ಭೂ ಕಂದಾಯ ಕೋಡ್, 1888 ರ ನಿಯಮಗಳ <u>ನಿಯಮ 43 (8), 31-12-1938 ರ ದಿನಾಂಕದ ನಂ. ಎಲ್ಆರ್ 89-38-10 ರಲ್ಲಿನ ಸರ್ಕಾರಿ ಅಧಿಸೂಚನೆಯಲ್ಲಿ ಸೂಚಿಸಲಾಗಿದೆ</u>; ಈ ರೀತಿಯ ಭೂಮಿಯು ಎಲ್ಲ ಸಮಯದಲ್ಲೂ ಪರಭಾರೆ ಮಾಡುವಹಾಗಿಲ್ಲ ಎಂಬ ಷರತ್ತಿಗೆ ಒಳಪಟ್ಟಿತ್ತು.[1] ಇದು ಮಾನ್ಯ ಜಸ್ಟೀಸ್ ಡಿ.ವಿ. ಶೈಲೇಂದ್ರ ಕುಮಾರ್ ರವರು ಬರೆದಂತಾ ತೀರ್ಪಿನ ಪ್ರಕರಣವಾಗಿದ್ದು ಇದೇ ನ್ಯಾಯಮೂರ್ತಿಗಳು ಬರೆದ ಇನ್ನೊಂದು ಪ್ರಕರಣದಲ್ಲಿ ಸದರಿ ನೋಟೀಫಿಕೇಷನ್ ನಂಬರ್ ವ್ಯತ್ಯಾಸ ಇರುತ್ತದೆ "ಮೈಸೂರು ಭೂ ಕಂದಾಯ ಕೋಡ್, 1888 ನಿಯಮಗಳ 43 (8) ರನ್ನು <u>27-6-1938 ರ ದಿನಾಂಕದ</u> <u>ಸರ್ಕಾರಿ ಅಧಿಸೂಚನೆ ಸಂಖ್ಯೆ ಅರ್.5682.ಎಲ್.ಆರ್ 389-37.3 ಮತ್ತು ಜಿ.ಓ.ಆರ್ ನಂ. 1623. ಎಲ್ಆರ್ 55-43-3, ದಿನಾಂಕ 11-9-1943</u> ನಿಂದ ತಿದ್ದುಪಡಿ

[1] ಪ್ರಕಾಶ್ ವಿ. ಕರ್ನಾಟಕ ರಾಜ್ಯ – 2005 (1) ಕರ್.ಎಲ್.ಜೆ 393

ಮಾಡಲಾಗಿದೆ, ಭೂಮಿಯನ್ನು ಯಾವುದೇ ರೀತಿಯಲ್ಲಿ ಪರಭಾರೆ ಮಾಡಬಾರದು ಒಂದು ವಿನಾಯಿತಿ ಎಂದರೆ ಮಂಜೂರು ಮಾಡಿದ ಭೂಮಿಯನ್ನು ಸರ್ಕಾರ ಅಥವಾ ಸಹಕಾರ ಸಂಘಕ್ಕೆ ಅವರು ಕೃಷಿ ಉದ್ದೇಶದ ಯಾವುದೇ ಸಾಲಕ್ಕೆ ಭದ್ರತೆಯಾಗಿ ನೀಡಬಹುದು.[1]

(5) ಇನ್ನೊಂದು ಪ್ರಕರಣದಲ್ಲಿ[2] ಜಸ್ಟೀಸ್ ರಾಮಮೋಹನ ರೆಡ್ಡಿ ರವರು ಉಲ್ಲೇಕಿಸಿರುವ ನೋಟಿಫಿಕೇಷನ್ ವ್ಯಾತ್ಯಾಸದಿಂದ ಕೂಡಿದೆ, "ಸಂಬಂಧಿತ ಸಮಯದಲ್ಲಿ ಅಸ್ತಿತ್ವದಲ್ಲಿದ್ದಂತೆ ನಿಯಮ 43 ಅನ್ನು ಪುನರುತ್ಪಾದಿಸುವ ಅವಶ್ಯಕತೆಯಿದೆ, ಅಂದರೆ, ಉಲ್ಲೇಖದ ಸೌಲಭ್ಯಕ್ಕಾಗಿ 1931 ರ ನವೆಂಬರ್ 28 ರಂದು ಸರ್ಕಾರಿ ಆದೇಶ ಸಂಖ್ಯೆ ಆರ್.2433-ಎಲ್.ಆರ್.104-30-7 ರಿಂದ ತಿದ್ದುಪಡಿ ಮಾಡಲಾಗಿದೆ ಎಂದಿದ್ದಾರೆ, ಅದೇ ರೀತಿಯಲ್ಲಿ ಇದೇ ನೋಟಿಫಿಕೇಷನ್ ನಂಬರ್ ಉಲ್ಲೇಕಿಸಿ ಇನ್ನೊಂದು ಪ್ರಕರಣದಲ್ಲಿ[3] ಹೀಗೆಂದಿದೆ, "ಈ ಸಮಕಾಲೀನ ದಾಖಲೆಗಳ ಬಲದ ಮೇಲೆ, ಮತ್ತು ಮೈಸೂರು ಭೂ ಕಂದಾಯ ಸಂಹಿತೆ 1888 ರ ನಿಯಮ 43 (8) ರ ದೃಷ್ಟಿಯಿಂದ (13.02.1940 ರವರೆಗೆ ಪರಿಷ್ಕರಿಸಲಾಗಿದೆ), ಅನುದಾನವು ಶಾಶ್ವತವಾಗಿ ಪರಭಾರೆಯಾಗದಂತೆ ಆದೇಶಿಸಿದೆ ಮತ್ತು ಕಡ್ಡಾಯಗೊಳಿಸಿದೆ ಎಂದು ಅಭಿಪ್ರಾಯಪಟ್ಟಿದೆ." - ಇವುಗಳಲ್ಲಿ ಉಲ್ಲೇಕಿಸಿರುವ ನಿಯಮಗಳು ಇಂತಿವೆ, ನಿಯಮ 43(5) ಇಲ್ಲಿ ಹೇಳಿರುವ ಹೊರತಾಗಿಯೂ, ಜಿಲ್ಲಾಧಿಕಾರಿಗಳು ತಮ್ಮ ವಿವೇಚನೆಯಿಂದ, ಖಿನ್ನತೆಗೆ ಒಳಗಾದ ವರ್ಗಗಳಿಗೆ (ಡಿಪ್ರೆಸ್ಡ್ ಕ್ಲಾಸಸ್) ಸೇರಿದ ಅರ್ಜಿದಾರರಿಗೆ ಪ್ರಾಮಾಣಿಕ ಕೃಷಿಕರಿಗೆ ಅಥವಾ ಭೂಮಿಯನ್ನು ಸ್ವತಃ ಕೃಷಿ ಮಾಡಲು ಪ್ರಸ್ತಾಪಿಸಬಹುದು, ಅರ್ಧದಷ್ಟು ಅಸಮಾಧಾನದ ಮೌಲ್ಯದಲ್ಲಿ ಭೂಮಿಯನ್ನು ಪಡೆದು ಕೊಳ್ಳಬಹುದು, ಐದು ವಾರ್ಷಿಕ ಕಂತುಗಳಿಗಿಂತ ಹೆಚ್ಚಿಲ್ಲದಂತೆ ವಸೂಲಿ ಮಾಡಬಹುದು. ಅರ್ಧದಷ್ಟು ಅಸಮಾಧಾನಗೊಂಡ ಬೆಲೆ `75 ಕ್ಕಿಂತ ಕಡಿಮೆಯಿದ್ದರೆ, ಅನುದಾನ

---

[1] ನಾರಾಯಣಪ್ಪ ವಿ. ವಿಶೇಷ ಜಿಲ್ಲಾಧಿಕಾರಿ - ಐ.ಎಲ್.ಆರ್ 2006 ಕರ್ 2506

[2] ಪಿಳ್ಳನರಸಿಂಹಯ್ಯ - ರಿಟ್.ನಂ. 31162/2014 - 10-07-2014

[3] ವೆಂಕಟರೆಡ್ಡಿ ವಿ. ಜಿಲ್ಲಾಧಿಕಾರಿಗಳು - ಐ.ಎಲ್.ಆರ್ 2012 ಕರ್ 3168

ಪಡೆದವರಿಂದ ವಸೂಲಿ ಮಾಡಬೇಕಾದ ಬೆಲೆ` 75 ಕ್ಕಿಂತ ಹೆಚ್ಚಿನ ಭೂಮಿಯ ಅಂದಾಜು ಮೌಲ್ಯದ ಹೆಚ್ಚುವರಿ ಮೊತ್ತಕ್ಕೆ ಸೀಮಿತವಾಗಿರುತ್ತದೆ. ಅಸಮಾಧಾನಗೊಂಡ ಮೌಲ್ಯವು `75 ಮೀರದಿದ್ದರೆ, ಅವನು ಬೆಲೆಯನ್ನು ಸಂಪೂರ್ಣವಾಗಿ ಮಾಫಿ ಮಾಡಬಹುದು. ..... ನಿಯಮ 43(6) ಖಿನ್ನತೆಗೆ ಒಳಗಾದ ವರ್ಗಗಳ ಅರ್ಜಿದಾರರಿಗೆ ಭೂಮಿಯನ್ನು ಮುಂದಿನ ರಿಯಾಯತಿಯಾಗಿ ಈ ಕೆಳಗಿನ ಶ್ರಯಾ ದರಗಳಲ್ಲಿ ನೀಡಬಹುದು. ಮೊದಲ ವರ್ಷ .. ಅಸೆಸ್ಮೆಂಟ್ ಮುಕ್ತ ಎರಡನೇ ವರ್ಷ .. ನಾಲ್ಕನೇ ಒಂದು ಮೂರನೇ ವರ್ಷ .. ಅರ್ಧದಷ್ಟು ನಾಲ್ಕನೇ ವರ್ಷ .. ಪೂರ್ಣವಾಗಿ ಮಾಡಿ .... ನಿಯಮ 43(7) ಯಾವುದೇ ಒಬ್ಬ ಅರ್ಜಿದಾರ ಅಥವಾ ಕುಟುಂಬಕ್ಕೆ ಸಾಮಾನ್ಯವಾಗಿ ಐದು ಎಕರೆ ಮೀರಿದ ಭೂಮಿಯನ್ನು ಅಥವಾ `100 ಮೌಲ್ಯ, ಆದರೆ ಹೆಚ್ಚಿನ ಪ್ರಮಾಣದಲ್ಲಿ ಅಥವಾ ಹೆಚ್ಚಿನ ಮೌಲ್ಯದ ಜಮೀನುಗಳನ್ನು ನೀಡಲು ಪ್ರಸ್ತಾಪಿಸಿದಲ್ಲಿ, ಇತರ ಸಂದರ್ಭಗಳಲ್ಲಿ ಅಸಮಾಧಾನದ ಬೆಲೆಗೆ ನೀಡಲಾದ ಜಮೀನುಗಳಂತೆ ಕಂದಾಯ ಆಯುಕ್ತರ ಅಥವಾ ಸರ್ಕಾರದ ಅನುಮತಿಯನ್ನು ಪಡೆಯಲಾಗುತ್ತದೆ...... ಎನ್.ಬಿ – ನಿಯಮದಲ್ಲಿ ಆಲೋಚಿಸಿದ ರಿಯಾಯಿತಿಗಳನ್ನು ಹಿಂದೂಗಳೆಂದು ಪರಿಗಣಿಸಲ್ಪಟ್ಟ ಖಿನ್ನತೆಗೆ ಒಳಗಾದ ವರ್ಗದ ಸದಸ್ಯರಿಗೆ ಮಾತ್ರ ನೀಡಬೇಕು. ... ನೋಟ್ (ಗಮನಿಸಿ) – ಮೇಲಿನ ಪ್ಯಾರಾಗಳಲ್ಲಿ ಖಿನ್ನತೆಗೆ ಒಳಗಾದ ವರ್ಗಗಳಲ್ಲಿ ಆದಿಕರ್ನಾಟಕರು, ಆದಿದ್ರಾವಿಡಾರು, ಬನಜಾರಸ್, ವೊಡಾರ್ಸ್, ಕೊರಚಾರ್ಸ್, ಕೋರಮಾರ್ಸ್, ಬೆಟ್ಟದ ಬುಡಕಟ್ಟು ಜನಾಂಗದವರು, ಆನಿಮಿಸ್ಟ್‌ಗಳು ಮತ್ತು ಪಿಶಾರಿ, ಮೋಚಿ, ಇರುಲಿಗಾ, ಡೊಂಬಾರ್, ಹಂಡಿಜೋಗಿ ಮತ್ತು ಬುಡುಬುಡ್ಕೈಕ್ ಸಮುದಾಯಗಳ ಸದಸ್ಯರು ಸೇರಿದ್ದಾರೆ. ..... <u>43(8). ಡಿಪ್ರೆಸ್ಡ್ ಕ್ಲಾಸಸ್ (ಖಿನ್ನತೆಗೆ ಒಳಗಾದ ವರ್ಗದ) ಅರ್ಜಿದಾರರಿಗೆ ನಿಯಮ 43(5) ರಲ್ಲಿ ನೀಡಲಾದ ಗ್ರಾಂಟ್ ಸ್ವಾಧೀನತೆಯು, ಸರ್ಕಾರದಿಂದ ಉಚಿತವಾಗಿಯಾಗಲೀ ಅಥವ ಅಪ್ಸೆಟ್ ಮೌಲ್ಯಕ್ಕೆ ಆಗಲೀ ಅಥವ ಕಡಿಮೆಗೊಳಿಸಿದ ಅಪ್ಸೆಟ್ ಮೌಲ್ಯಕ್ಕೆ ಆಗಲೀ ಬಡ ಮತ್ತು ಭೂರಹಿತ ಇತರೆ ವರ್ಗದ ಜನರಿಗೆ ಅಥವ ಧಾರ್ಮಿಕ ಅಥವ ಧರ್ಮದತ್ತಿ ಸಂಸ್ಥೆಗಳಿಗೆ ನೀಡಿರುವ ಗ್ರಾಂಟ್ ಜಮೀನನ್ನು</u>

ಪರಭಾರೆಮಾಡಬಾರದು ಮತ್ತು ಅನುದಾನ ಪಡೆದವರು ಸರ್ಕಾರವು ಸೂಚಿಸಿದ ರೂಪದಲ್ಲಿ ಮುಚ್ಚಳಿಕೆಗಳನ್ನು ಬರೆದುಕೊಡಬೇಕು. ಆದಾಗ್ಯೂ, ನಿಯಮ 43 (5) ರ ಅಡಿಯಲ್ಲಿ ಖಿನ್ನತೆಗೆ ಒಳಗಾದ ವರ್ಗಗಳಿಗೆ ಭೂಮಿಯನ್ನು ಸುಧಾರಿಸುವ ಉತ್ತಮ ಉದ್ದೇಶಗಳಿಗಾಗಿ ಅವರು ಸರ್ಕಾರದಿಂದ ಅಥವಾ ಸಹಕಾರಿ ಸಂಘದಿಂದ ಪಡೆಯಲು ಬಯಸುವ ಯಾವುದೇ ಸಾಲಕ್ಕೆ ಭದ್ರತೆಯಾಗಿ ಸ್ವೀಕರಿಸುವುದನ್ನು ಇದು ತಡೆಯುವುದಿಲ್ಲ."[1] – ಇಲ್ಲಿ ಗಮನಿಸಬೇಕಾದ ಅಂಶವೆಂದರೆ ಇಲ್ಲಿ ಎಲ್ಲಿಯೂ ಯಾವತ್ತು (ಫಾರ್ ಎವರ್) ಪರಭಾರೆ ಮಾಡಬಾರದು ಎಂದು ಹೇಳಲಾಗಿಲ್ಲ. ಆದರೆ ಅನೇಕ ಮಾನ್ಯ ನ್ಯಾಯಾಲಯಗಳ ತೀರ್ಪುಗಳಲ್ಲಿ ಇದನ್ನು ಯಾವತ್ತೂ ಪರಭಾರೆ ಮಾಡಬಾರದು ಎಂದು ವ್ಯಾಖ್ಯಾನಿಸಲಾಗಿದೆ. ಇಲ್ಲಿ ಎಲ್ಲಿವರೆಗೆ ಪರಭಾರೆ ಮಾಡಬಾರದು ಎಂಬುದನ್ನು ತಿಳಿಯಲು ಸರ್ಕಾರದ ಬಳಿ ಇರುವ ಮುಚ್ಚಳಿಕೆ ಪತ್ರ ಅವಶ್ಯ ದಾಖಲೆ ಆಗಿರುತ್ತದೆ. ಅಂತಹ ಮುಚ್ಚಳಿಕೆಗಳನ್ನು ಸರ್ಕಾರ ಹಾಜರು ಮಾಡಿದ ಪರಿಶೀಲನೆಯಾದ ಯಾವುದೇ ಕೇಸಿನ ವಿವರ ನನಗೆ ಇಲ್ಲಿವರೆಗೆ ಪ್ರಾಪ್ತವಾಗಿಲ್ಲ. ಅದರಲ್ಲಿ ಯಾವತ್ತೂ ಪರಭಾರೆ ಮಾಡುವುದಿಲ್ಲ/ಮಾಡಬಾರದು ಎಂದು ನಿಯಮವಿದ್ದರೆ ಅನ್ವಯಿಸುತ್ತದೆ. ಅದಿಲ್ಲದೆ ಹೇಗೆ ಇಂತಹ ನಿರ್ಣಯಕ್ಕೆ ಬರಲು ಸಾಧ್ಯ, ಕೇವಲ ಇದು ರಕ್ಷಣಾತ್ಮಕ ಕಾಯ್ದೆ ಎಂದ ಮಾತ್ರಕ್ಕೆ ಸಂವಿಧಾನದ ಆಶಯಗಳಿಗೆ ಪೂರಕ ಕಾಯ್ದೆ ಎಂದ ಮಾತ್ರಕ್ಕೆ ಈಗಾಗಲೇ ಪ್ರಾಪ್ತವಾದ ಮತ್ತು ಅಂತಹ ಪ್ರಾಪ್ತತೆಯನ್ನು ಬಹಳ ಕಾಲ ಪ್ರಶ್ನಿಸದೆ ಉಳಿದಿರುವ ಹಕ್ಕುಗಳನ್ನು ಅಲುಗಾಡಿಸಲು ಮಾತ್ರಕ್ಕೆ ವ್ಯಾಖ್ಯಾನವನ್ನು ಹೇಗೆಂದರೆ ಹಾಗೆ ಕೊಡಲಾದೀತೆ?[2]

(6) ಇನ್ನೊಂದು ಪ್ರಕರಣದಲ್ಲಿ ಜಿಲ್ಲಾಧಿಕಾರಿಗಳು ನೋಟಿಫಿಕೇಷನ್ ತಪ್ಪಾಗಿ ಉಲ್ಲೇಕಿಸಿದ್ದಾರೆ ಎಂದು ಜಸ್ಟೀಸ್ ಬಿ.ಎಸ್. ಪಾಟೀಲ್ ರವರು[3]

---

[1] ಈ ನಿಯಮವನ್ನು ಚಿಕ್ಕಕುಳ್ಳೇಗೌಡ ಪ್ರಕರಣದಲ್ಲೂ ಉಲ್ಲೇಕಿಸಲಾಗಿದೆ – ಪ್ಯಾರಾ 15

[2] ಲೇಖಕರ ಅಭಿಪ್ರಾಯ

[3] ಅಪ್ಪಾಜಪ್ಪ ವಿ. ಕರ್ನಾಟಕ ರಾಜ್ಯ – 2015 (4) ಕೆ.ಸಿ.ಸಿ.ಆರ್ 3410

ಕೇಸೊಂದರಲ್ಲಿ ಹೀಗೆ ಉಲ್ಲೇಕಿಸಿ ಬರೆದಿದ್ದಾರೆ "31-1-1936 ರ ಅಧಿಸೂಚನೆ ಸಂಖ್ಯೆ ಆರ್.4509-ಎಲ್.ಆರ್.98-35-63 ರ ಪ್ರಕಾರ, 1888 ರ ಮೈಸೂರು ಭೂ ಕಂದಾಯ ಸಂಹಿತೆಯ ನಿಯಮ 43 (8) ಅನ್ನು ಪರಿಚಯಿಸಲಾಗಿದೆ, ಇದು ಪರಭಾರೆಯನ್ನು ನಿರ್ಬಂದಿಸಲು ಒದಗಿಸುತ್ತದೆ ಎಂದು ಜಿಲ್ಲಾಧಿಕಾರಿ ತಪ್ಪಾಗಿ ಕಂಡುಹಿಡಿದಿದ್ದಾರೆ. ನಿಯಮ 43 (8) ಅನ್ನು 13-12-1938 ರಂದು ಅಧಿಸೂಚನೆ ಸಂಖ್ಯೆ ಆರ್.2828-ಎಲ್.ಆರ್.89-38 ಪರಿಚಯಿಸಿದೆ." ಇವೆಲ್ಲಾ ಟೈಪ್ ವ್ಯತ್ಯಾಸಗಳೋ ಅಥವ ಹಾಗೆ ಇರಲು ಸಾಧ್ಯವೆ.? ಪ್ರಜ್ಞಾವಂತ ವಕೀಲರಲ್ಲಿ, ಕಂದಾಯ ಇಲಾಖೆಯ ಅಧಿಕಾರಿಗಳಲ್ಲಿ ಘನವೆತ್ತ ನ್ಯಾಯಾಧೀಶರಲ್ಲಿಯೇ ವಿಭಿನ್ನತೆಯ ಉಲ್ಲೇಕಿತ ಜ್ಞಾನವಿರುವಾಗ ಜನಸಾಮಾನ್ಯ ಈ ಕಾನೂನು ವಿಚಾರವನ್ನು ಎಲ್ಲಿಂದ ಅರಿತಾನು.?

(7) ಇನ್ನೊಂದು ತೀರ್ಪಿನ ಉಲ್ಲೇಕ ಗಮನಿಸಿ, ಆದೇಶ ಸಂ. ಆರ್. 2122 - 81 / ಎಲ್.ಆರ್. 368 - 28-5 ದಿನಾಂಕ 12-9-1929 - ಗ್ರಾಂಟ್ ಭೂಮಿಯನ್ನು ಯಾವಾಗಲೂ ಶರತ್ತಿಗೆ ಒಳಗಾಗಿದ್ದು ಪರಭಾರೆ ಅವಧಿಯು ಕಾಲದಿಂದ ಕಾಲಕ್ಕೆ ಬದಲಾಗಿದೆ, - ಅನುದಾನದ ದಿನಾಂಕವಾದ 27-10-1937 ರಂದು ದಿನಾಂಕ 12-9-1929 ರಲ್ಲಿ ಪರಭಾರೆ ಮಾಡಬಾರದ ಅವಧಿಯು 20 ವರ್ಷಗಳು.[1] ಇದೇ ಕೇಸನ್ನು ಮತ್ತು ನೋಟಿಫಿಕೇಷನ್ ಉಲ್ಲೇಕಿಸಿ, ಇನ್ನೊಂದು ಪ್ರಕರಣದಲ್ಲಿ, ಅಂತಹ ನೋಟಿಫಿಕೇಷನ್ 10 ರಿಂದ 20 ವರ್ಷ ನಿರ್ಬಂದ ಹೇರಿತ್ತು, ಎಂದು ಹೇಳಿರುವ ದ್ವಿಸದಸ್ಯ ನ್ಯಾಯಪೀಠ, ಸದರಿ ವೇಳೆಯಲ್ಲಿ ಸರ್ಕಾರಿ ಆದೇಶ ಮಾತ್ರ ಇತ್ತು ಅಂತಹ ಸಮಯದಲ್ಲಿ ನಿಯಮ ಇರಲಿಲ್ಲ ಅಂತಹ ನಿರ್ಬಂದ ವಿಧಿಸಲು ಕೋಡ್ನ ಕಲಂ 36 ರಲ್ಲಿ ಅಧಿಕೃತವಾಗಿರಬೇಕಿರುತ್ತದೆ ಎಂದಿದೆ.[2]

(8) ಇಲ್ಲೊಂದು ತೀರ್ಪಿನಲ್ಲಿ ಉಲ್ಲೇಕಿತ ನೋಟಿಫಿಕೇಷನ್ ನಂಬರ್ ಮತ್ತು ತಾರೀಖು ಗಮನಿಸಿ, ಮೈಸೂರು ಭೂ ಕಂದಾಯ ಸಂಹಿತೆ, 1888, ಖಿನ್ನತೆಗೆ ಒಳಗಾದ ವರ್ಗದವರ (ಡಿಪ್ರೆಸ್ಡ್ ಕ್ಲಾಸಸ್) ಪರವಾಗಿ ಭೂಮಿಯನ್ನು

---

[1] ಬಂಡ್ಯಮ್ಮ ವಿ. ಉಪವಿಭಾಗಾಧಿಕಾರಿ - ಐ.ಎಲ್.ಆರ್ 1993 ಕರ್ 2694

[2] ಮರಿಯಪ್ಪ ವಿ. ತಿಮ್ಮರಾಯಪ್ಪ - 2004 (3) ಕೆ.ಸಿ.ಸಿ.ಆರ್ 1471 (ಡಿ.ಬಿ)

ಉಚಿತವಾಗಿ ನೀಡುವುದಕ್ಕಾಗಿ ಒದಗಿಸಲಾಗಿತ್ತು ಮತ್ತು ಅವರು ಜೀವನೋಪಾಯವನ್ನು ಗಳಿಸುವುದನ್ನು ಖಚಿತಪಡಿಸಿಕೊಳ್ಳಲು ಉದ್ದೇಶಿಸಲಾಗಿತ್ತು ಮತ್ತು ಬಲಿಪಶುಗಳಾಗದ ಹಾಗೆ ಮೋಹಕ್ಕೆ ಒಳಪಡದ ಹಾಗೆ ಅಥವಾ ಒಪ್ಪಂದಗಳಿಗೆ ಎಳೆಯಲಾಗದಂತೆ, ಅವರು ದುರಾಸೆಯಿಂದ ಅಂತಹ ಭೂಮಿಯನ್ನು ಮಹತ್ವಾಕಾಂಕ್ಷೆಯ ಭೂಮಾಲೀಕರು ಕಸಿದುಕೊಳ್ಳದಂತೆ ಉದ್ದೇಶಿಸಲಾಗಿತ್ತು. ಅಂತಹ ವ್ಯಕ್ತಿಗಳಿಗೆ ಸರ್ಕಾರಿ ಭೂಮಿಯನ್ನು ನೀಡುವಾಗ, ಅಂತಹ ಮಂಜೂರು ಭೂಮಿಯನ್ನು ಎಂದಿಗೂ ಅನುದಾನ ಪಡೆದವರಿಂದ ಪರಭಾರೆ ಮಾಡಬಾರದು ಎಂಬ ಷರತ್ತು ವಿಧಿಸಲಾಗುತ್ತಿತ್ತು ಮತ್ತು ಅಂತಹ ಷರತ್ತು ಕರ್ನಾಟಕ ಭೂ ಕಂದಾಯ ನಿಯಮಗಳ ನಿಯಮ 43 (8) ರಲ್ಲಿ ಕಂಡುಬರುತ್ತದೆ (ಸಂಕ್ಷಿಪ್ತವಾಗಿ 'ನಿಯಮಗಳು' ) 1888 ರ ಮೈಸೂರು ಭೂ ಕಂದಾಯ ಸಂಹಿತೆಯ ನಿಯಮ 233 ರ ಪ್ರಕಾರ. 29-7-1938 ರ ದಿನಾಂಕದ ಮೈಸೂರು ಅಧಿಸೂಚನೆ ಸಂಖ್ಯೆ ಆರ್.482-ಎಲ್.ಆರ್.450-373 ರ ಪ್ರಕಾರ, ಈ ಷರತ್ತನ್ನು ಉಲ್ಲಂಘಿಸಿ ಅಂತಹ ಅನುದಾನ ಪಡೆದವರಿಗೆ ಅಥವಾ ಅವರ ಕಾನೂನು ಉತ್ತರಾಧಿಕಾರಿಗಳಿಗೆ ಹಾನಿಮಾಡಿದಾಗ, ಕರ್ನಾಟಕ ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡ (ಕೆಲವು ಜಮೀನುಗಳ ವರ್ಗಾವಣೆಯ ನಿಷೇಧ) ಕಾಯ್ದೆ, 1978 ರ ನಂತರ, ರಾಜ್ಯದ ಪರವಾಗಿ ಭೂಮಿಯನ್ನು ವಾಪಸ್ ಪಡೆಯಲು ಕಾರಣವಾಗುತ್ತದೆ. ಸಕಾರಾತ್ಮಕ ಕ್ರಮ ತೆಗೆದುಕೊಳ್ಳಲು ಕಠಿಣ ನಿಬಂಧನೆಗಳನ್ನು ಮಾಡಲಾಗಿದೆ ಅಂತಹ ವ್ಯಕ್ತಿಗಳ ಪರವಾಗಿ ಮಂಜೂರು ಮಾಡಲ್ಪಟ್ಟ ಜಮೀನುಗಳಿಗೆ ಸಂಬಂಧಿಸಿದಂತೆ, ಅವರು ಅನುದಾನದ ಷರತ್ತುಗಳನ್ನು ಉಲ್ಲಂಘಿಸಿ ಪರಭಾರೆಯಾಗಿದ್ದರೆ ಅಥವಾ ವರ್ಗಾವಣೆ ಮಾಡಿದ್ದರೆ, ರಾಜ್ಯದ ಪರವಾಗಿ ಮುಟ್ಟುಗೋಲುಹಾಕಿಕೊಂಡು, ಮೂಲ ಅನುದಾನ ಪಡೆದವರಿಗೆ ಅಥವಾ ಅವರ ಕಾನೂನು ಉತ್ತರಾಧಿಕಾರಿಗಳಿಗೆ ಮರಳಿಸಲಾಗುವುದು."

1

(9) ಇನ್ನೊಂದು ಪ್ರಕರಣದಲ್ಲಿ 1938 ರಿಂದ 1953 ರವರೆಗೆ ಇದ್ದ ನಿಯಮ ಶಾಶ್ವತ ಪರಭಾರೆ ವಿಧಿಸುವ ನಿಯಮವಾಗಿತ್ತು ಎಂದಿದೆ, "ಮೈಸೂರು ಭೂ ಕಂದಾಯ ಸಂಹಿತೆ, 1888 ಅನುದಾನದ ಸಮಯದಲ್ಲಿ ಜಾರಿಯಲ್ಲಿತ್ತು. ಈ ಸಂಹಿತೆಯ ನಿಯಮ 43 (8) ರ ಪ್ರಕಾರ, 1938 ರಿಂದ 1953 ರ ನಡುವಿನ ಭೂಮಿಯನ್ನು ಶಾಶ್ವತವಾಗಿ ಪರಭಾರೆ ನಿಷೇದಕ್ಕೆ ಒಳಪಡಿಸಲಾಗುತ್ತದೆ. ಹಾಲಿ ಕೇಸಿನಲ್ಲಿ, 28-4-1944 ರಂದು ಭೂಮಿಯನ್ನು ಗ್ರಾಂಟ್ ನೀಡಲಾಗಿತ್ತು ಮತ್ತು 1938 ರ ನಿಯಮಗಳು ಅನ್ವಯವಾಗುತ್ತದೆ. ಆದ್ದರಿಂದ, ಮಂಜೂರು ಮಾಡಿದ ಭೂಮಿಯನ್ನು ಶಾಶ್ವತವಾಗಿ ಪರಭಾರೆ ಮಾಡಲು ಸಾಧ್ಯವಿಲ್ಲ.[2]

(10). ಇನ್ನೊಂದು ಪ್ರಕರಣದಲ್ಲಿ "ಡಿಪ್ರೆಸ್ಡ್ ಕ್ಲಾಸ್ ದರ್ಖಾಸ್ತ್ ಪ್ರೊಸೀಡಿಂಗ್ ರೂಲ್ಸ್" ಎಂದು ಮಾನ್ಯ ನ್ಯಾಯಾಲಯ ಉಲ್ಲೇಕಿಸುತ್ತದೆ, ಅದೇ ಪ್ರಕರಣದಲ್ಲಿ "ಸರ್ಕಾರಿ ನೋಟಿಫಿಕೇಷನ್ ನಂಬರ್ ನಂ. ಎ.ಕೆ.ಡಿ.ಆರ್ 38/41-42 ನಿಯಮ 43(8) ರಂತೆ ಖಾಯಂ ಪರಭಾರೆ ಮಾಡಬಾರದು" ಎಂದು ಜಿಲ್ಲಾಧಿಕಾರಿಗಳು ಉಲ್ಲೇಕಿಸಿ ಬರೆದಿರುವ ತೀರ್ಪು ಎತ್ತಿ ಹಿಡಿಯಲಾಗಿರುತ್ತದೆ.[3] ಇನ್ನೊಂದು ಪ್ರಕರಣದಲ್ಲಿ ಡಿಪ್ರೆಸ್ಡ್ ಕ್ಲಾಸ್ ರೂಲ್ಸ್ ಇಲ್ಲವೇ ಇಲ್ಲ ಎಂಬ ವಾದಕ್ಕೆ ಉತ್ತರಿಸಿದ ನ್ಯಾಯಾಲಯ[4] ಹೀಗೆಂದಿದೆ, "ಖಿನ್ನತೆಗೆ ಒಳಗಾದ ವರ್ಗದ (ಡಿಪ್ರೆಸ್ಡ್ ಕ್ಲಾಸ್) ವ್ಯಕ್ತಿಗಳಿಗೆ ಭೂ ಮಂಜೂರಾತಿಯನ್ನು ನಿಯಂತ್ರಿಸುವ ನಿಬಂಧನೆಗಳನ್ನು ಕೋಡ್ ಅಥವಾ ನಿಯಮಗಳಲ್ಲಿ ಒಳಗೊಂಡಿರುವಂತೆ ಖಿನ್ನತೆಗೆ ಒಳಗಾದ ವರ್ಗ ನಿಯಮಗಳು ಎಂದು ಕರೆಯಲಾಗುತ್ತದೆ. ಈ ನಾಮಕರಣದ ಪ್ರತ್ಯೇಕ ನಿಯಮಗಳಿಲ್ಲ. ಆದರೆ ಇದು ಖಿನ್ನತೆಗೆ ಒಳಗಾದ ವರ್ಗಗಳಿಗೆ ಸೇರಿದ

---

[1] ಮೊಹಮ್ಮದ್.. ವಿ. ವಿಶೇಷ ಜಿಲ್ಲಾಧಿಕಾರಿಗಳು- 2011 (6) ಕರ್.ಎಲ್.ಜೆ 38

[2] ಪ್ರಭುದೇವರು ವಿ. ತಿಮ್ಮಮ್ಮ - ಮನು/ ಕೆ.ಎ/ 0592/ 2011 - (ಡಿ.ಬಿ)

[3] ಸೀತಾರಾಮಚಾರಿ ವಿ. ಜಿಲ್ಲಾಧಿಕಾರಿಗಳು - 2005 (2) ಕೆ.ಸಿ.ಸಿ.ಆರ್ 772

[4] ಮುಂಗಪ್ಪ ವಿ. ವಿಶೇಷ ಜಿಲ್ಲಾಧಿಕಾರಿಗಳು - ಐ.ಎಲ್.ಆರ್ 2005 ಕರ್ 4174

ವ್ಯಕ್ತಿಗಳ ಪರವಾಗಿ ಭೂ ಮಂಜೂರಾತಿಯನ್ನು ನಿಯಂತ್ರಿಸುವ ಕೋಡ್ನ ಒಂದು ಭಾಗವಾಗಿದೆ, ಅಂದರೆ 1888 ರ ಮೈಸೂರು ಭೂ ಕಂದಾಯ ಕೋಡ್ನ ಭಾಗವಾಗಿದ್ದ ಸಂಬಂಧಿತ ನಿಯಮಗಳು"

(11). ದಿನಾಂಕ 4-8-1953 ರಲ್ಲಿ ಪ್ರಕಟಣೆಯಾದ ಮೇಲಿನ ನಿಯಮ ತಿದ್ದುಪಡಿಯಂತೆ ಅಧಿಸೂಚನೆ ನಂ. ಆರ್.7594-604-ಎಲ್.ಆರ್. 266-53-2 ರಂತೆ ಖಿನ್ನತೆಗೆ ಒಳಗಾದ ವರ್ಗಗಳಿಗೆ (ಡಿಪ್ರೆಸ್ಡ್ ಕ್ಲಾಸಸ್) ಸೇರಿದ ಭೂರಹಿತ ಬಡ ಜನರಿಗೆ, ಸರ್ಕಾರವು ನಿರಾಸೆ ಮೂಡಿಸುವ ಬೆಲೆಯಿಂದ (ಅಪ್ಸೆಟ್ ಪ್ರೈಸ್) ಅಥವ ಕಡಿಮೆಮಾಡಿದ ನಿರಾಸೆ ಮೂಡಿಸುವ ಬೆಲೆಯಿಂದ ಭೂ ಮಂಜೂರಾತಿಯನ್ನು ಮಾಡುವಾಗ ಅದನ್ನು ಗ್ರಾಂಟ್ ದಿನಾಂಕದಿಂದ 20 ವರ್ಷ ಪರಭಾರೆ ಮಾಡಬಾರದು, ಈ ಬಗ್ಗೆ ಪಡೆದವರು ಸರ್ಕಾರ ಸೂಚಿಸುವ ನಮೂನೆಯಲ್ಲಿ ಮುಚ್ಚಳಿಕೆ ಬರೆದು ಕೊಡಬೇಕು.[1]

(12) 20-01-1958 ರಿಂದ ಅಧಿಸೂಚನೆ ಸಂಖ್ಯೆ ಆರ್.ಡಿ 262 ಎಲ್.ಜಿ.ಬಿ 57 ರಂತೆ ನಿಯಮ 43ಎ ಜಾರಿಗೆ ತರಲಾಯಿತು "ಹೆಚ್ಚಿನ ಆಹಾರವನ್ನು ಬೆಳೆಯಿರಿ" (ಗ್ರೋ ಮೋರ್ ಫುಡ್- ಜಿ.ಎಂ.ಎಫ್) ಯೋಜನೆಯಡಿ ಯಾವುದೇ ಭೂಮಿಯನ್ನು ಗುತ್ತಿಗೆಗೆ ಪಡೆದಿರುವಲ್ಲಿ, ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡಕ್ಕೆ ಸೇರಿದ ಬಡವರು ಮತ್ತು ಗುತ್ತಿಗೆದಾರರು ವ್ಯಕ್ತಿಗಳು, ಅಸಮಾಧಾನಗೊಂಡ ಬೆಲೆಯನ್ನು (ಅಪ್ಸೆಟ್ ಪ್ರೈಸ್) ಪಾವತಿಸಿ ಭೂಮಿಯನ್ನು ದೃಢೀಕರಣಕ್ಕೆ ಅರ್ಹರಾಗಿರುತ್ತಾರೆ. ಉಪ-ನಿಯಮ (2) ಕ್ಕೆ ಅನುಗುಣವಾಗಿ ಗುತ್ತಿಗೆದಾರರಿಂದ ಯಾವುದೇ ಅರ್ಜಿಯನ್ನು ನೀಡಿದರೆ, ನಿಯಮ 43 ರ ಉಪ-ನಿಯಮ (6) ರ ನಿಬಂಧನೆಗಳಿಗೆ ಒಳಪಟ್ಟು, ನಿರಾಸೆ ಮೂಡಿಸುವ ಬೆಲೆಗೆ (ಅಪ್ಸೆಟ್ ಪ್ರೈಸ್), ಬಾಕಿ ಮೊತ್ತವನ್ನು ವಾರ್ಷಿಕ ಕಂತುಗಳಲ್ಲಿ ಮೂರು ಮೀರದಂತೆ, ಜಿಲ್ಲಾಧಿಕಾರಿ ಅವನಿಗೆ ಭೂಮಿಯನ್ನು ನೀಡಬಹುದು. ನಿಯಮ 43(6)(ಎ) ಅಡಿಯಲ್ಲಿ ಕೊಟ್ಟಿರುವಂತೆ ಈ ಮೇಲೆ ಹೇಳಿದ ಗ್ರಾಂಟ್ ಉಚಿತವಾಗಿ ಕೊಟ್ಟಿದ್ದಲ್ಲಿ, ಗ್ರಾಂಟ್ ಆದ ತಾರೀಖಿನಿಂದ,

---

[1] ಚಿಕ್ಕಕುಳ್ಳೇಗೌಡ ವಿ. ರಾಜ್ಯ - ಐ.ಎಲ್.ಆರ್ 1991 ಕರ್ 4557

ಗ್ರಾಂಟಿ 15 ವರ್ಷ ಪರಭಾರೆ ಮಾಡಬಾರದು ಎಂಬ ಶರತ್ತಿನಿಂದ ಕೂಡಿದ್ದು, ಹಾಗೆಯೇ ಗ್ರಾಂಟ್ ನಿರಾಸೆ ಮೂಡಿಸುವ ಬೆಲೆಯಿಂದ (ಅಪ್ಸೆಟ್ ಪ್ರೈಸ್) ಅಥವ ಕಡಿಮೆಮಾಡಿದ ನಿರಾಸೆ ಮೂಡಿಸುವ ಬೆಲೆಯಿಂದ ಕೂಡಿದ್ದರೆ, ಗ್ರಾಂಟ್ ಆದ ತಾರೀಖಿನಿಂದ ಅದನ್ನು 10 ವರ್ಷ ಪರಭಾರೆ ಮಾಡಬಾರದು ಎಂಬ ಶರತ್ತಿನಿಂದ ಕೂಡಿರುತ್ತದೆ. (ಚಿಕ್ಕಕುಳ್ಳೇಗೌಡ ಕೇಸಿನಲ್ಲಿ ಉಲ್ಲೇಕಿತ).

(13) ಇದೇ ಚಿಕ್ಕಕುಳ್ಳೇಗೌಡ ಪ್ರಕರಣದಲ್ಲಿ ಇನ್ನೊಂದು ಕಾಯ್ದೆ ಬಗ್ಗೆ ಉಲ್ಲೇಕಿಸಲಾಗಿದೆ ಮೈಸೂರು ಕಲ್ಟಿವೇಷನ್ ಅಫ್ ಫಾಲೋ ಲ್ಯಾಂಡ್ಸ್ ಆಕ್ಟ್, 1951 (ಮೈಸೂರು ಬರಡು ಭೂಮಿ ಉಳಿಮೆ ಕಾಯ್ದೆ 1951). ಕಾಯ್ದೆಯ ಮುನ್ನುಡಿಯ ಪರಿಶೀಲನೆಯ ಮೂಲಕ, ಬಳ್ಳಾರಿ ಜಿಲ್ಲೆಯನ್ನು ಹೊರತುಪಡಿಸಿ ಮೈಸೂರು ರಾಜ್ಯದಲ್ಲಿ ಪಾಳುಭೂಮಿ ಭೂಮಿಯನ್ನು ಸಾಗುವಳಿ ಮಾಡುವ ಉದ್ದೇಶದಿಂದ ಇದು ಕಂಡುಬರುತ್ತದೆ, ಭೂರಹಿತರಿಗೆ ಕೆಲವು ಜಮೀನುಗಳನ್ನು ಕೃಷಿ ಮಾಡಲು ಅನುವು ಮಾಡಿಕೊಡುತ್ತದೆ. ಅದರ ಸೆಕ್ಷನ್ 1 ರ ಉಪವಿಭಾಗ (4) ಪ್ರಕಾರ ಕಾಯ್ದೆಯು ಐದು ವರ್ಷಗಳ ಅವಧಿಗೆ ಜಾರಿಯಲ್ಲಿರುತ್ತದೆ ಎಂದು ಸ್ಪಷ್ಟಪಡಿಸುತ್ತದೆ, ಮತ್ತು ಅದರ ಅವಧಿ ಮುಗಿದ ನಂತರ, ಮೈಸೂರು ಜನರಲ್ ಕ್ಲಾಸ್ ಆಕ್ಟ್, 1899 ರ ಸೆಕ್ಷನ್ 6 ರ ನಿಬಂಧನೆಗಳು ಅನ್ವಯವಾಗುತ್ತವೆ ಅದನ್ನು ಮೈಸೂರು ಕಾಯ್ದೆಯಿಂದ ರದ್ದುಪಡಿಸಿದ್ದರೆ. ಬೇರೆ ರೀತಿಯಲ್ಲಿ ಹೇಳುವುದಾದರೆ, ಈ ಕಾಯಿದೆಯಡಿ ಸರ್ಕಾರಕ್ಕೆ ಸೇರಿದ ಭೂಮಿಯನ್ನು ಕೃಷಿ ಮಾಡುವುದನ್ನು ಮುಂದುವರೆಸಿದವರು, ಐದು ವರ್ಷಗಳ ಅವಧಿ ಮುಗಿದ ನಂತರವೂ ಕರ್ನಾಟಕ ರಾಜ್ಯದ ಅಡಿಯಲ್ಲಿ ಗುತ್ತಿಗೆದಾರರಾಗಿ ಮುಂದುವರಿಯುತ್ತಾರೆ. ಆದ್ದರಿಂದ, ಐದು ವರ್ಷಗಳ ಅವಧಿ ಮುಗಿದ ನಂತರವೂ, ಈ ಕಾಯ್ದೆಯ ಪ್ರಕಾರ ಅಂತಹ ವ್ಯಕ್ತಿಗಳಲ್ಲಿ ಪಡೆದ ಹಕ್ಕು ಅಥವಾ ಆಸಕ್ತಿಯನ್ನು ಕಾನೂನಿನ ಸರಿಯಾದ ಪ್ರಕ್ರಿಯೆಯಿಲ್ಲದೆ ತೆಗೆದುಕೊಳ್ಳಲಾಗುವುದಿಲ್ಲ."

(14). ಹಿಂದೆ ಮದ್ರಾಸ್ ಪ್ರಾಂತ್ಯವಾದ ಬಳ್ಳಾರಿಯಲ್ಲಿ ಇದ್ದ ನಿಯಮಗಳ ಬಗ್ಗೆ ಹೈಕೋರ್ಟಿನ ಪ್ರಕರಣವೊಂದರಲ್ಲಿ[1] ಉಲ್ಲೇಕವಾಗಿದೆ, "ಹಿಂದಿನ ಮದ್ರಾಸ್ ರಾಜ್ಯದಲ್ಲಿ, ಭೂ ಮಂಜೂರಾತಿಯನ್ನು ಕಂದಾಯ ಮಂಡಳಿಯ ಸ್ಥಾಯಿ ಆದೇಶಗಳಿಂದ (ಸ್ಟಾಂಡಿಂಗ್ ಆರ್ಡರ್ಸ್) ನಿಯಂತ್ರಿಸಲಾಗುತ್ತದೆ. ಆ ಆದೇಶಗಳ ಪ್ಯಾರಾ –41, ಇತರೆಯ ನಡುವೆ ಒದಗಿಸಲ್ಪಟ್ಟಿದೆ, 'ಪರಿಶಿಷ್ಟ ಜಾತಿ ಅಥವಾ ಪರಿಶಿಷ್ಟ ಪಂಗಡಕ್ಕೆ ಸೇರಿದ ವ್ಯಕ್ತಿಗಳಿಗೆ ಭೂಮಿಯನ್ನು ನಿಯೋಜಿಸುವುದು ಮಂಜೂರಾತಿ ದಿನಾಂಕದಿಂದ 10 ವರ್ಷಗಳ ಅವಧಿ ಮುಗಿಯುವ ಮೊದಲು ಮಂಜೂರು ಮಾಡಿದ ಭೂಮಿಯನ್ನು ದೂರವಿಡಬಾರದು ಎಂಬ ಷರತ್ತಿಗೆ ಒಳಪಟ್ಟಿರುತ್ತದೆ. ಮಂಡಳಿಯ ಸ್ಥಾಯಿ ಆದೇಶಗಳು ಮದ್ರಾಸ್ ಪ್ರದೇಶ ಮತ್ತು ಹೊಸ ರಾಜ್ಯ ಮೈಸೂರು (1 ನವೆಂಬರ್, 1956 ರ ನಂತರ ಕರ್ನಾಟಕ) ದ ಬಳ್ಳಾರಿ ಜಿಲ್ಲೆಯಲ್ಲಿ ಜಾರಿಯಲ್ಲಿವೆ." ..... ಆದ್ದರಿಂದ, ಮೇಲಿನದನ್ನು ಗಮನದಲ್ಲಿಟ್ಟುಕೊಂಡು, ನಿಸ್ಸಂದೇಹವಾಗಿ 1953 ರಲ್ಲಿ ಬಳ್ಳಾರಿ ಪ್ರದೇಶವನ್ನು ಮೈಸೂರು ರಾಜ್ಯವು ಸ್ವಾಧೀನಪಡಿಸಿಕೊಂಡಿದ್ದರೂ, ಕಂದಾಯ ಮಂಡಳಿಯ ಸ್ಥಾಯಿ ಆದೇಶದಡಿಯಲ್ಲಿ ಮಾಡಿದ ಜಮೀನುಗಳ ಅನುದಾನದಡಿಯಲ್ಲಿ ವಿಧಿಸಲಾದ ಷರತ್ತುಗಳನ್ನು ಸ್ಪಷ್ಟಪಡಿಸಲಾಗಿದೆ. 1960 ರಲ್ಲಿ ಭೂ ಮಂಜೂರಾತಿ (ಮದ್ರಾಸ್ ಪ್ರದೇಶ ಮತ್ತು ಬಳ್ಳಾರಿ ಜಿಲ್ಲೆ) ನಿಯಮಗಳ ನಿಯಮ 17 ರ ಪ್ರಕಾರ ಕರ್ನಾಟಕ ಸರ್ಕಾರವು ಬಳ್ಳಾರಿ ಪ್ರದೇಶದಲ್ಲಿನ ಜಮೀನುಗಳನ್ನು ನೀಡುವ ನಿಯಮಗಳನ್ನು ರೂಪಿಸಿದ ನಂತರವೂ ಮದ್ರಾಸ್ ಆದೇಶವನ್ನು ಮುಂದುವರಿಸಲಾಯಿತು. ....... ಆದ್ದರಿಂದ, ವ್ಯಕ್ತಿಗಳ ಹಿತಾಸಕ್ತಿಗಳನ್ನು ಕಾಪಾಡಲು ಸೆಕ್ಷನ್ 202 ರ ಅಡಿಯಲ್ಲಿ ಸಹ ಸಾಕಷ್ಟು ಸುರಕ್ಷತೆಗಳನ್ನು ಒದಗಿಸಲಾಗಿದೆ, ಅವರು ಮದ್ರಾಸ್ನ ಕಂದಾಯ ಮಂಡಳಿಯ ಸ್ಥಾಯಿ ಆದೇಶಗಳಿಂದ ನೀಡಲ್ಪಟ್ಟ ಅನುದಾನದ ಪ್ರಕಾರ, ದಿನಾಂಕದಂದು ನೀಡಲಾದ ಭೂಮಿಯನ್ನು ಅನುಭವಿಸುತ್ತಿದ್ದರೆ, ಈ ಕಾಯ್ದೆಯ ಪ್ರಾರಂಭ,

---

[1] ವೀರಣ್ಣ ವಿ. ವಿಶೇಷ ಜಿಲ್ಲಾಧಿಕಾರಿಗಳು – ಐ.ಎಲ್.ಆರ್ 1991 ಕರ್ 3995

ಮತ್ತು ಅನುದಾನವನ್ನು ನೀಡಿದ ಷರತ್ತುಗಳು ಈ ಕಾಯ್ದೆಯ ನಿಬಂಧನೆಗಳಿಗೆ ಉಲ್ಲಂಘಕರವೆಂದು ಕಂಡುಬಂದಲ್ಲಿ ಹೊರತು, ಆ ಷರತ್ತುಗಳು ಚಾಲ್ತಿಯಲ್ಲಿವೆ. ಮೇಲ್ಕಂಡ ದೃಷ್ಟಿಯಿಂದ, ಅರ್ಜಿದಾರರಿಗೆ ಕಲಿತ ವಕೀಲರಾದ ಶ್ರೀ ರಂಗವಿಟ್ಟಲಾಚಾರ್ ಅವರ ವಾದದಲ್ಲಿ ಸಾಕಷ್ಟು ಬಲವಿದೆ, ಮಂಡಳಿಯ ಸ್ಥಾಯಿ ಆದೇಶಗಳ ಅಡಿಯಲ್ಲಿ ವಿಧಿಸಲಾದ ಷರತ್ತುಗಳನ್ನು ಮಾರ್ಪಡಿಸುವ ಉದ್ದೇಶದಿಂದ 1-9-1955ರ ದಿನಾಂಕದ ಸರ್ಕಾರಿ ಆದೇಶ ಹೊರಡಿಸಿದರೂ ಸಹ ಕಂದಾಯ, ಮದ್ರಾಸ್, ಪ್ರಸ್ತುತ ಪ್ರಕರಣದಲ್ಲಿ ಭೂಮಿಯನ್ನು ಮಂಜೂರು ಮಾಡಿದ ನಿಯಮಗಳು ಕಾರ್ಯನಿರ್ವಹಿಸುತ್ತಲೇ ಇದ್ದವು ಮತ್ತು ಆದ್ದರಿಂದ ಪ್ರಶ್ನಾರ್ಹವಾದ ಸರ್ಕಾರಿ ಆದೇಶವನ್ನು ಈ ರೀತಿಯ ಪ್ರಕರಣಕ್ಕೆ ಜಾರಿಗೆ ತರಲು ಸಾಧ್ಯವಿಲ್ಲ. ....ಮೇಲಿನದರಿಂದ ಅನುಸರಿಸುವ ಅಂಶವೆಂದರೆ, ಸರ್ಕಾರದ ಆದೇಶದ ಮೇಲೆ ಕ್ರಮ ಕೈಗೊಳ್ಳಲು ಸಾಧ್ಯವಿಲ್ಲ ಮತ್ತು ಅನುದಾನದ ಸ್ಥಿತಿಗೆ ಯಾವುದೇ ಉಲ್ಲಂಘನೆ ಇದೆಯೇ ಎಂದು ಕಂಡುಹಿಡಿಯುವ ಉದ್ದೇಶದಿಂದ ತ್ವರಿತ ಪ್ರಕರಣದಲ್ಲಿ, ಪ್ರಶ್ನಾರ್ಹ ಭೂಮಿಯನ್ನು ದೂರವಿಡುವಲ್ಲಿ, ಪ್ರಶ್ನಾರ್ಹ ಭೂಮಿಯನ್ನು ಯಾವ ನಿಯಮಗಳ ಅಡಿಯಲ್ಲಿ ನೀಡಲಾಗಿದೆ, ಎಂಬ ನಿಯಮಗಳನ್ನು ಅನುಸರಿಸಬೇಕಾಗುತ್ತದೆ.

(15). ಕರ್ನಾಟಕ ಹೈಕೋರ್ಟಿನ ದ್ವಿಸದಸ್ಯ ಪೀಠದ ಮುಂದೆ ಬಂದ ಪ್ರಕರಣದಲ್ಲಿ 12-08-1948 ರಲ್ಲಿ ದರ್ಖಾಸ್ತ್ ಆಗಿರುವ ಜಮೀನಿಗೆ 20 ವರ್ಷ ಪರಭಾರೆ ಮಾಡಬಾರದು ಎಂಬ ಶರತ್ತಿಗೆ ಒಳಪಟ್ಟಿದೆ ಎಂದು ಕಂಡುಕೊಳ್ಳಲಾಗಿದೆ.[1]

**ಅನುಭಂದಗಳಲ್ಲಿನ ದಾಖಲಾತಿ ಮಾಹಿತಿ ಬಗ್ಗೆ**

ಮೈಸೂರು ಲ್ಯಾಂಡ್ ರೆವಿನ್ಯೂ ಮ್ಯಾನ್ಯುಯಲ್, ರೂಲ್ಸ್ ಅಂಡರ್ ಮೈಸೂರು ಲ್ಯಾಂಡ್ ರೆವಿನ್ಯೂ ಕೋಡ್ ಈ ಬಗ್ಗೆ ಅನೇಕ ಕಡೆ ಹುಡುಕಲಾಗಿ ಅಂತಹ ಪುಸ್ತಕಗಳು ಶಿಥಿಲಾವಸ್ಥೆಯಲ್ಲಿರುವುದು, ಲಭ್ಯವಿಲ್ಲದಿರುವುದು

---

[1] ದ್ಯಾಮಪ್ಪ ವಿ. ಅಪಣ್ಣಾ ಭೋವಿ – ಐ.ಎಲ್.ಆರ್ 1997 ಕರ್ 1283 (ಡಿ.ಬಿ)

ಗಮನಿಸಿರುತ್ತೇನೆ. ನನ್ನ ಗುರುಗಳಾದ ಎಸ್.ಎಂ. ಸೋಮಶೇಖರಪ್ಪ ರವರ ಕಚೇರಿಯಲ್ಲಿ 1934 ರಲ್ಲಿ ಗೌರ್ಮೆಂಟ್ ಪ್ರೆಸ್ ನಲ್ಲಿ ಮುದ್ರಿಸಲಾದ ರೂಲ್ಸ್ ಅಂಡರ್ ಮೈಸೂರು ಲ್ಯಾಂಡ್ ರೆವಿನ್ಯೂ ಕೋಡ್, 1956 ರಲ್ಲಿ ಮುದ್ರಿತವಾದ ಅದೇ ಪುಸ್ತಕ ಲಭ್ಯವಾಗಿದ್ದು ನನ್ನ ಸೌಭಾಗ್ಯ. ಅದೇ ಮೈಸೂರು ಲ್ಯಾಂಡ್ ರೆವಿನ್ಯೂ ಮ್ಯಾನ್ಯುಯಲ್ 1967 ರಲ್ಲಿ ಮುದ್ರಿತವಾದ ಸರ್ಕಾರಿ ಪ್ರೆಸ್ ಮುದ್ರಣದ ಪುಸ್ತಕವೂ ಲಭ್ಯವಿತ್ತು. ಅದೂ ಶಿಥಿಲಾವಸ್ಥೆಯಲ್ಲಿರುವ ಕಾರಣ, ಅದರ ಸ್ಕ್ಯಾನ್ ಪ್ರತಿಯನ್ನು ಇಟ್ಟಿದ್ದೇನೆ, ಈಗಲೂ ಅನ್ಲೈನ್ ನಲ್ಲಿ ಲಭ್ಯವಿಡುವ ಪ್ರಯತ್ನ ಮಾಡಿದ್ದೇನೆ. ಇದು ಇಂದಿನ ಪಿ.ಟಿ.ಸಿ.ಎಲ್ ಪ್ರಕರಣದಲ್ಲಿ ಬಹಳ ಮಹತ್ವದ ನ್ಯಾಯ ನಿರ್ಣಯಕ್ಕೆ ಪೂರಕ ದಾಖಲೆಗಳಾಗಿವೆ. ಆದರೆ ನನ್ನ ಕಕ್ಷಿದಾರರೊಬ್ಬರು ಈ ಪುಸ್ತಕವನ್ನು ಅನೇಕ ಸರ್ಕಾರಿ ಲೈಬ್ರರಿಗಳಲ್ಲಿ ಹುಡುಕಿದ್ದಾರೆ, ಲಭ್ಯವಾಗಿಲ್ಲ. ಯಾಕೆ ಈ ಪುಸ್ತಕಗಳು ಮಾಯವಾದವು, ಇದು ಯಾರ ಹಿತಕ್ಕಾಗಿ ಮಾಯವಾದವು. ಹಿಂದೆ ಕರ್ನಾಟಕ ಸರ್ಕಾರದ ರೆವಿನ್ಯೂ ಡಿಪಾರ್ಟಮೆಂಟ್ ವೆಬ್ ತಾಣವೊಂದಿತ್ತು ಅದರಲ್ಲಿ ಅನೇಕ ಉಪಯುಕ್ತ ಸರ್ಕ್ಯುಲರ್ ಗಳ ಮಾಹಾ ಪೂರವೇ ಇತ್ತು ಆದರೆ ಆ ವೆಬ್ ತಾಣ ಇದ್ದಕ್ಕಿದ್ದಂತೆ ಮಾಯವಾಯಿತು. ಚೆನ್ನರಾಯಪಟ್ಟಣದ ತಹಶೀಲ್ದಾರ್ ಕಚೇರಿಯ ವೆಬ್ ತಾಣದಲ್ಲಿ ಸರ್ಕಾರಿ ಸರ್ಕ್ಯುಲರ್ ಹಾಕಲಾಗಿತ್ತು. ಅದನ್ನೂ ಈಗ ಇಲ್ಲವಾಗಿಸಿದ್ದಾರೆ. ಕೆ.ಎ.ಎಸ್. ಅಧಿಕಾರಿಗಳ ಸಂಘದ ವೆಬ್ ತಾಣದಲ್ಲಿ ಇಂತಹ ಮಾಹಿತಿ ಲಭ್ಯವಿತ್ತು ಅದನ್ನೂ ಇಲ್ಲವಾಗಿಸಿದ್ದಾರೆ. ಹೀಗೆ ಸಾರ್ವಜನಿಕರಿಗೆ ನ್ಯಾಯ ಕೊಡುವಂತಾ ಅನೇಕ ಮಾರ್ಗದರ್ಶಿ ದಾಖಲೆಗಳು ಮಾಯವಾಗುತ್ತಿರುವ ಬಗ್ಗೆ ಯಾರ ಕೈವಾಡ ಅಡಗಿದೆ.? ಜನರನ್ನು ಅಂದಕಾರದಲ್ಲಿ ಇಟ್ಟು ದುಡಿಮೆಗೆ ಇಳಿಯುವ ಆ ಕೈವಾಡ ಯಾವುದು.? ಇರುವ ಕಾನೂನು ಸೂತ್ರಗಳನ್ನು ಮುಚ್ಚುವ ಮಟ್ಟಕ್ಕೆ ಇಳಿಯಿತೆ ವೈಟ್ ಕಾಲರ್ ಕ್ರೈಮ್ ಪಡೆ.? ನಾನು ನನ್ನ ಬ್ಲಾಗ್ ಗಳಲ್ಲಿ ಈ ಬಗ್ಗೆ ಅನೇಕ ಮಾಹಿತಿಯನ್ನು ಜನರಿಗೆ ತಲುಪುವ ಹಾಗೆ ಮಾಡಿದ್ದೇನೆ. ಇದು ಹೀಗೆ ಬಿಟ್ಟರೆ, ಸರಿಯಲ್ಲಾ ಎಂಬ ಮನಸ್ಸಿನಿಂದ ಪುಸ್ತಕದ ರೂಪದಲ್ಲಿ ಅಂತಹ ಮಾಹಿತಿಗಳನ್ನು ಪಿ.ಟಿ.ಸಿ.ಎಲ್ ವ್ಯಾಜ್ಯಕಾರರ ಗಮನಕ್ಕೆ ತರುವ ಪ್ರಯತ್ನ ಮಾಡಿದ್ದೇನೆ. ನ್ಯಾಷನಲ್

ಡಿಜಿಟಲ್ ಲೈಬ್ರರಿ ವೆಬ್ ತಾಣದಲ್ಲಿ ಈ ಬಗ್ಗೆ ಕೆಲವು ಪುಸ್ತಕಗಳು ಇದ್ದು, ಆರ್ಚೀವ್ ಡಾಟ್ ಆರ್ಜ್ ಎಂಬ ಅಂತರಾಷ್ಟ್ರೀಯ ವೆಬ್ ತಾಣದಲ್ಲೂ ಕೆಲವು ಪುಸ್ತಕಗಳು ಲಭ್ಯವಿದೆ. ಇದು ಕರ್ನಾಟಕದ ಹೊರಗೆ ಶೇಖರಿಸಲಾದ ಮಾಹಿತಿಗಳಾಗಿದ್ದು ಅದು ಸಾಮಾನ್ಯ ಜನರಿಗೆ ದೊರೆಯಲಿ ಎಂಬ ಉದ್ದೇಶದಿಂದ ಈ ಸಣ್ಣ ಪ್ರಯತ್ನ ಮಾಡಿದ್ದೇನೆ.

**ಅನುಭಂದ-1 :-** ಇದರಲ್ಲಿ ಮೈಸೂರು ಲ್ಯಾಂಡ್ ರೆವಿನ್ಯೂ ಕೋಡ್ ಕೆಳಗೆ ನಿಯಮಗಳು 1890 ರಿಂದಲ್ಲೂ ಇದ್ದವು ಎನ್ನುವ ಮಾಹಿತಿ ಇದೆ. ಇದರ ಜೊತೆಯಲ್ಲಿ ವಿಲೇಜ್ ಅಫೀಸರ್ಸ್ ಮ್ಯಾನ್ಯುಯಲ್ (ಗ್ರಾಮ ಅಧಿಕಾರಿಗಳ ಕೈಪಿಡಿ) ನೋಡಬೇಕು ಎಂಬ ಉಲ್ಲೇಕವನ್ನು ಗಮನಿಸುವುದು.

**ಅನುಭಂದ-2:-** ಇದರಲ್ಲಿ 01-11-1934 ರವರೆಗೆ ಪರಿಷ್ಕರಿಸಲಾಗಿರುವ ಲ್ಯಾಂಡ್ ರೆವಿನ್ಯೂ ಕೋಡ್ ಕೆಳಗೆ ನಿಯಮಗಳು, ಇದರಲ್ಲಿ ಅಂದಿನ ಭೂ ಮಂಜೂರಾತಿ ನಿಯಮವನ್ನು ನೀಡಲಾಗಿದೆ.

**ಅನುಭಂದ-3:-** ಇದರಲ್ಲಿ ಏಪ್ರಿಲ್ 1956 ರವರೆಗೆ ಪರಿಷ್ಕರಿಸಲಾಗಿರುವ ಲ್ಯಾಂಡ್ ರೆವಿನ್ಯೂ ಕೋಡ್ ಕೆಳಗೆ ನಿಯಮಗಳು, ಇದರಲ್ಲಿ ಅಂದಿನ ಭೂ ಮಂಜೂರಾತಿ ನಿಯಮವನ್ನು ನೀಡಲಾಗಿದೆ.

**ಅನುಭಂದ-4:-** ದಿನಾಂಕ 18-11-1975 ರಲ್ಲಿ ಹೊರಡಿಸಲಾದ ಸರ್ಕ್ಯುಲರ್ ರೀತ್ಯ ಅಂದೇ ಬಡ ಶೋಷಿತ ವರ್ಗಕ್ಕೆ ಗ್ರಾಂಟ್ ಮಾಡಲಾದ ಜಮೀನನ್ನು ಗ್ರಾಂಟ್ ಶರತ್ತು ಅಡಿಯಲ್ಲಿ ಪರಭಾರೆ ಮಾಡುವುದು ಮತ್ತು ಜಿ.ಪಿ.ಎ ಮುಖಾಂತರ ಪರಭಾರೆ ಮಾಡುವುದು ನಿರ್ಬಂಧಿಸಲಾಗಿರುವುದನ್ನು ತಕ್ಷಣವೇ ಕ್ರಮ ತೆಗೆದುಕೊಳ್ಳಲು ಸೂಚಿಸಲಾಗಿತ್ತು. ಇಂತಹ ಸೂಚನೆ ನಡುವೆಯೂ, ಅಧಿಕಾರಿಗಳ ಸಕಾರಣ ಬದ್ದತೆ ಇಲ್ಲದ ವಿಳಂಬ ಮನ್ನಿಸಬಹುದೆ? ಎಂಬ ಬಗ್ಗೆ ನ್ಯಾಯಾಲಯ ವ್ಯಾಖ್ಯಾನ ನೀಡಬೇಕು.

**ಅನುಭಂದ-5:-** ಪಿ.ಟಿ.ಸಿ.ಎಲ್ ಕಾಯ್ದೆ ಜಾರಿಯಾದ ನಂತರ 13-12-1983 ರಲ್ಲಿ ಕರ್ನಾಟಕ ಸರ್ಕಾರ ತುರ್ತು ಮತ್ತು ಅವಶ್ಯ ಎಂದು ಪರಿಗಣಿಸಿ ಗ್ರಾಂಟ್ ಜಮೀನುಗಳ ಪಟ್ಟಿ ತಯಾರಿಸುವಂತೆ ಈ ಹಿಂದೆ 1981 ರಲ್ಲಿ ನೀಡಲಾಗಿದ್ದ ಸರ್ಕ್ಯುಲರ್ ಉಲ್ಲೇಕಿಸಿ ವಿಭಾಗಾಧಿಕಾರಿಗಳನ್ನು ಹೊಣೆಯಾಗಿಸಿ ತುರ್ತು 01-

01-1956 ರಿಂದ ಆಗಿರುವ ಗ್ರಾಂಟ್ ಜಮೀನುಗಳ ಪಟ್ಟಿ ತಯಾರಿಸುವಂತೆ ತಿಳಿಸಿದೆ. ಇದು ಏನು ಸೂಚಿಸುತ್ತದೆ, 1956 ಕ್ಕೆ ಹಿಂದಿನ ಗ್ರಾಂಟ್ ವಿವರ ಲಭ್ಯವಿಲ್ಲವೆಂದೇ, 1956 ರ ನಂತರ ಆದ ಗ್ರಾಂಟ್ ವಿವರ ಕಲೆಹಾಕಿದ ಮೇಲೂ ಅಧಿಕಾರಿಗಳು ಇಲ್ಲಿವರೆಗೆ ಸುಮ್ಮನಿದ್ದು ಕ್ರಮ ಜರುಗಿಸದೆ ಈಗಲೂ 1979 ರ ಹಿಂದಿನ ಗ್ರಾಂಟ್ ವ್ಯಾಜ್ಯಗಳು ಉದಯವಾಗುತ್ತಿರುವುದಕ್ಕೆ ಕಾರಣವಾಗಿರುವುದು ಸಕಾರಣಬದ್ಧ ವಿಳಂಬಗಳೇ?

**ಅನುಭಂದ-6 ಮತ್ತು 7:-** ಪಿ.ಟಿ.ಸಿ.ಎಲ್ ಜಮೀನು ಪರಭಾರೆ ವಿಚಾರದಲ್ಲಿ ಆಗುತ್ತಿರುವ ಲೋಪಗಳ ಬಗ್ಗೆ 1998 ರಲ್ಲೇ ಸರ್ಕ್ಯುಲರ್ ಮುಖಾಂತರ ಯಾವ ರೀತಿಯ ಎಚ್ಚರಿಕೆ ವಹಿಸಬೇಕು, ಕಾಲಮಿತಿಯೊಳಗೆ ಕ್ರಮ ಜರುಗಿಸಬೇಕು ಎಂಬ ಸೂಚನೆ ಎಲ್ಲಾ ಕಂದಾಯ ಅಧಿಕಾರಿಗಳಿಗೆ ನೀಡಲಾಗಿದೆ, ಆದರೂ ಈ ಬಗ್ಗೆ ಎಚ್ಚರಿಕೆ ವಹಿಸದೆ ಒಂದು ಕಡೆ ಖರೀದಿದಾರರನ್ನೂ ಯಾಮಾರಿಸಲು ಬಿಟ್ಟು ಒಂದು ಕಡೆ ದಲಿತರನ್ನೂ ಶೋಷಣೆಗೆ ಒಳಗಾಗಲು ಬಿಟ್ಟು, ಈಗಲೂ 1998 ಕ್ಕಿಂತ ಹಳೇ ಮತ್ತು ನಂತರದಲ್ಲಿ ಪ್ರಕರಣಗಳು ನೊಂದಾವಣಿ ಆಗುತ್ತಿರುವುದಕ್ಕೆ ಕಾರಣರಾರು.?

**ಅನುಭಂದ-8:-** ಸೂಕ್ತ ವಿಚಾರಣೆ ಮಾಡಿ ಎಂದು 1983 ರಲ್ಲೇ ತಿಳಿಸಲಾಗಿದ್ದರೂ, ಇಂದಿಗೂ ವಿಚಾರಣೆ ನ್ಯೂನ್ಯತೆಗಳಿಗೆ ರಿಮ್ಯಾಂಡ್ ಆಗುತ್ತಿರುವುದು ಶೋಚನೀಯ.

**ಅನುಭಂದ-9:-** ವಾರ್ಷಿಕವಾಗಿ ಗ್ರಾಮದಲ್ಲಿ ನಡೆಯುವ ಲೆಕ್ಕ ಪರಿಶೊಧನೆಯಲ್ಲಿ ದರ್ಖಾಸ್ತು ಜಮೀನು ಗ್ರಾಂಟಿ ಬಳಿಯಲ್ಲೇ ಇದೆಯೇ ಎಂದು ಪರೀಕ್ಷಿಸುವ ಕರ್ತವ್ಯ 1971 ರಲ್ಲೇ ತಿಳಿ ಹೇಳಲಾಗಿದೆ. ಜಮಾಬಂದಿ ಕಾರ್ಯದಲ್ಲೂ ಹೇಗೆ ನಿರ್ವಹಿಸಬೇಕು ಎಂದು ಕನ್ನಡದಲ್ಲೇ 1995 ರಲ್ಲೇ ತಿಳಿಹೇಳಲಾಗಿದೆ, ಆದರೂ ಈ ಬಗ್ಗೆ ಇಲಾಖಾ ಕರ್ತವ್ಯಲೋಪಕ್ಕೆ ಅಮಾಯಕರನ್ನು ಬಲಿ ಹಾಕುವುದು ಎಷ್ಟು ಮಾತ್ರ ಸೂಕ್ತ ಎಂಬುವ ಚಿಂತನೆ ನಡೆಯಬೇಕಿದೆ. ಇಲ್ಲಿ ಅಧಿಕಾರಿಗಳಿಗೆ ದಲಿತರ ಹಕ್ಕನ್ನು ರಕ್ಷಿಸಲು ಮಾನ್ಯ ಮಾಡಲು ಆಸಕ್ತಿ ಇಲ್ಲವೆ ಅಥವ ಮೋಸದ ವ್ಯವಹಾರಗಳನ್ನು ತಡೆಯುವ ಒಲವಿಲ್ಲವೆ.?

**ಅನುಭಂದ–10:–** ದರ್ಖಾಸ್ತ್ ಜಮೀನುಗಳ ಬಗ್ಗೆ ತನಿಖೆ ಮಾಡಿ ಭೂಮಿಗಳನ್ನು ಗುರುತಿಸುವಂತೆ ಲಿಸ್ಟ್ ತಯಾರಿಸುವಂತೆ 1979 ರಲ್ಲೇ ಆದೇಶಿಸಲಾಗಿದೆ. ಆದರೂ ಇಲ್ಲಿವರೆಗೆ ಅಂತಹ ಪ್ರಕರಣಗಳನ್ನು ಶೋಧಿಸಿ ದಸ್ತಾವೇಜಿನಲ್ಲಿ ಬರೆಯಲಾಗಿಲ್ಲವೆ. ಇಂತಹ ಕಾಲ ವ್ಯಯ ಮಾಡಿದ ಪರಿಣಾಮ ಯಾರ ಮೇಲೆ ಆಗುತ್ತಿದೆ. ಅಂತಹ ದಸ್ತಾವೇಜು ನಿರ್ವಹಿಸಿದ್ದರೆ ಕೊಳ್ಳುವವರು ಅಂತಹ ದಸ್ತಾವೇಜು ಪರಿಶೀಲಿಸುತ್ತಿರಲಿಲ್ಲವೆ. ಅಧಿಕಾರಿಗಳ ಘೋರ ನಿರಾಸಕ್ತಿ ಮತ್ತು ನಿರ್ಲಕ್ಷ್ಯಕ್ಕೆ ವಿಳಂಬವಾಗಿ ಸಲ್ಲಿಸಲಾಗುವ ಅರ್ಜಿಗಳನ್ನು ಪುರಸ್ಕರಿಸಲು ಕೇವಲ ಅರ್ಜಿದಾರನು ಕಾರಣ ಕೊಟ್ಟರೆ ಆಗುತ್ತದೆಯೇ, ಅಧಿಕಾರಿಗಳಲ್ಲೂ ಕಾರಣ ಬೇಡವೆ.? ಈ ಬಗ್ಗೆ ಗ್ರಾಂಟ್ ಜಮೀನು ನೊಂದಾವಣಿ ಆಗುವುದನ್ನು ತಡೆಯಲು ಸಬ್ ರಿಜಿಸ್ಟ್ರಾರ್ ರವರಿಗೆ ಅಂತಹ ಗ್ರಾಂಟ್ ಜಮೀನುಗಳ ಪಟ್ಟಿಯನ್ನು ರಾವಾನಿಸಲು 1979 ರಲ್ಲೇ ತಿಳಿಸಲಾಗಿದೆ ಈ ಬಗ್ಗೆ ವಿಳಂಬಕ್ಕೆ ನ್ಯೂನ್ಯತೆಗೆ ಯಾರು ಸಕಾರಣವನ್ನು ನೀಡಬೇಕು.?

**ಅನುಭಂದ–11:–** ಕ್ರಿಮಿನಲ್ ಪ್ರಕರಣ ನೊಂದಾಯಿಸಲು ಗ್ರಾಂಟಿಗಳಿಗೆ ಅವಕಾಶವಿದೆ, ಇಂತಹ 1989 ರಿಂದ ಇಂತಹ ರಕ್ಷಣೆ ನೀಡಿದ ಮೇಲೂ ಈ ಬಗ್ಗೆ ದಾಖಲಾದ ಪ್ರಕರಣ, ನಿರ್ಲಕ್ಷಿತ ಅಧಿಕಾರಿಗಳ ಮೇಲೆ ದಾಖಲಾದ ಪ್ರಕರಣ ಮಾಹಿತಿ ಸರ್ಕಾರದಲ್ಲಿ ಲಭ್ಯವಿದೆಯೇ.? ಕಾನೂನು ಮಾಡಿಯೂ ಜಾರಿ ಮಾಡದೆ ಭ್ರಷ್ಟತೆಯಲ್ಲಿ ನಿರತರಾಗುವ ಅಧಿಕಾರ ವರ್ಗ ಇರುವವರೆಗೆ ಯಾವ ಕಾನೂನು ಇದ್ದೂ ಪ್ರಯೋಜನವಾಗದು.

**ಅನುಭಂದ–12:–** 1930 ರಿಂದಲೂ ಜಾರಿಯಲ್ಲಿರುವಂತೆ ಗ್ರಾಂಟ್ ಪ್ರಮಾಣಪತ್ರ ನೀಡುವ ಮಾದರಿ ಇರುತ್ತದೆ. ಇದರಲ್ಲಿ ಅಪೆಂಡಿಕ್ಸ್ ಇ–1 ರಲ್ಲಿ ಸಾಮಾನ್ಯರಿಗೆ ನೀಡುವ ಗ್ರಾಂಟ್ ಪ್ರಮಾಣಪತ್ರವಾಗಿದ್ದು. ಅಪೆಂಡಿಕ್ಸ್ ಇ–2 ರಲ್ಲಿ ಡಿಪ್ರೆಸ್ಡ್ ಕ್ಲಾಸಸ್ ರವರಿಗೆ ವಿನಾಯ್ತಿ ರೀತಿಯಲ್ಲಿ ನೀಡಲಾಗುವ ಗ್ರಾಂಟ್ ಪ್ರಮಾಣಪತ್ರವಾಗಿರುತ್ತದೆ. ಇಂತಹ ವಾದವನ್ನು ಮಂಡಿಸಿದ್ದರೂ ಈ ಬಗ್ಗೆ ಪರಿಗಣಿಸಿರುವ ವಿಮರ್ಶಿಸದೆ ಆದೇಶ ಮಾಡಿರುವ ಉದಾಹರಣೆ ಇದೆ. ನಿಯಮ ವ್ಯಾಖ್ಯಾನದಲ್ಲಿ ಇಂತಹ ವಿಚಾರ ಯಾಕೆ ಕಡೆಗಾಣಿಸಬೇಕು.

**ಅನುಭಂದ–13:–** ಮೈಸೂರು ಲ್ಯಾಂಡ್ ರೆವಿನ್ಯೂ ಮ್ಯಾನುಯಲ್ ಭಾಗಗಳು

ಅಧಿಕಾರಿಗಳು ತಮ್ಮ ಜಮಾಬಂದಿ ಕಾರ್ಯದಲ್ಲಿ ದಲಿತರ ಬಗ್ಗೆ ಕಾಳಜಿ ವಹಿಸಲು 1929 ರಲ್ಲೇ ಸೂಚನೆ ಇದೆ. ಪ್ರತ್ಯೇಕ ಡಿಪ್ರೆಸ್ಡ್ ಕ್ಲಾಸ್ ದರ್ಖಾಸ್ತ್ ರಿಜಿಸ್ಟರ್ ನಿರ್ವಹಿಸಲು ಸೂಚನೆ ಇದೆ. ದರ್ಖಾಸ್ತ್ ನಿರ್ವಹಣೆಯ ರೀತಿ ಮಾರ್ಗದರ್ಶನಗಳು ಇದೆ. ದರ್ಖಾಸ್ತ್ ಮಾರಾಟಗಳ ಬಗ್ಗೆ ಸರ್ಕಾರಿ ಆದೇಶಗಳು ಇವೆ. ಅಪ್ಸೆಟ್ ಪ್ರೈಸ್ ಬಗ್ಗೆ ಮಾರ್ಗದರ್ಶನಗಳು ಇವೆ. ಇದಲ್ಲದೆ ಅಪ್ಸೆಟ್ ದರದ ಬಗ್ಗೆ 1962 ರ ಸರ್ಕ್ಯುಲರ್ ಕೂಡ ಇದೆ. ಹೆಚ್ಚು ಆಹಾರ ಬೆಳೆಯುವ ಬಗ್ಗೆ ಭೂ ಮಂಜೂರಾತಿಗಳ ಬಗ್ಗೆ ಸೂಕ್ತ ಮಾರ್ಗದರ್ಶನ ಇದೆ. ದರ್ಖಾಸ್ತ್ ಮಾರಾಟಗಳ ಬಗ್ಗೆ ಮಾರ್ಗದರ್ಶನ ಇದೆ. 1913 ರಲ್ಲಿ ಇದ್ದ ಸರ್ಕಾರಿ ಆದೇಶದಂತೆ ಸಾಗುವಳಿ ಚೀಟಿ ಪಡೆದು ಒಂದು ವರ್ಷಕ್ಕೆ ಮೇಲ್ಪಟ್ಟು ಸ್ವಾಧೀನದಲ್ಲಿರುವವರ ಸಾಗುವಳಿ ಚೀಟಿ ರದ್ದು ಮಾಡಲು ಬರುವುದಿಲ್ಲ ಎಂಬ ಆದೇಶವಿದೆ. ಇಂಡೆಕ್ಸ್ ಆಫ್ ಲ್ಯಾಂಡ್ಸ್ ನಮೂನೆ 5 ಮತ್ತು 6 ಮಹತ್ವದ ಬಗ್ಗೆ ಮಾರ್ಗದರ್ಶನವಿದೆ. ಇಂತಹ ಪುಸ್ತಕವನ್ನು ಮಾಯ ಮಾಡಿದವರು ಯಾರು ಆದರಲ್ಲಿನ ನಿಯಮಗಳು ಅನ್ವಯಿಸುವುದಿಲ್ಲವೆ.? ಇಷ್ಟೆಲ್ಲಾ ಅಂದಿನಿಂದ ಇದ್ದರೂ ಆಗಿರುವ ಸರ್ಕಾರದ ನ್ಯೂನ್ಯತೆಗಳಿಗೆ ನಾಗರೀಕರನ್ನು ವಿಳಂಬವಾಗಿ ಬಲಿಹಾಕುವುದು ಸೂಕ್ತವೆ.?

**ಅನುಭಂದ-14:-** 1953 ಕ್ಕೆ ಮುಂಚೆ ಮತ್ತು ನಂತರ ಜಮೀನುಗಳ ವಿಚಾರವಾಗಿ ಸರ್ಕಾರಿ ಶುಲ್ಕ ಪಟ್ಟಿಯನ್ನು ಗಮನಿಸಿದರೆ ಅಂದು ವಿಧಿಸಲಾಗಿದ್ದ ಮಾರುಕಟ್ಟೆ ಬೆಲೆ ಬಗ್ಗೆ ಒಂದು ಅಂದಾಜು ಸಿಗುತ್ತದೆ.

**ಅನುಭಂದ-15:-** ಪಿ.ಟಿ.ಸಿ.ಎಲ್ ನಿಯಮಗಳು 1979 ಆಂಗ್ಲದಲ್ಲಿ, ಇದರಲ್ಲಿ ನಮೂನೆ-1 ರಲ್ಲಿ ಅರ್ಜಿ ಹಾಕುವ ವಿಧಾನವನ್ನು ಸೂಚಿಸಲಾಗಿದೆ. ಗ್ರಾಂಟಿ ಪಡೆದಿರುವ ಗ್ರಾಂಟ್ ಸ್ವರೂಪದ ವಿವರಣೆ ಕೇಳಲಾಗಿದೆ. ಆದೇಶದ ನಂಬರ್ ಮತ್ತು ಗ್ರಾಂಟ್ ಆದೇಶದ ದಿನಾಂಕವನ್ನು ಕೇಳಲಾಗಿದೆ. ಯಾವ ಮೊತ್ತಕ್ಕೆ ಜಮೀನು ಮಾರಾಟ ಮಾಡಲಾಗಿದೆ ಎಂಬ ಮಾಹಿತಿಯನ್ನು ಕೇಳಲಾಗಿದೆ. ಇದು ಮೋಸದ ಬೆಲೆಗೆ ಮಾರಾಟವಾಗಿರುವುದು ನಿರ್ದರಿಸಲಿಕ್ಕಾಗಿಯೇ.? ಯಾವ ಕಾರಣಕ್ಕೆ ಮಾರಾಟ ಮಾಡಲಾಗಿದೆ ಎಂದು ಕೇಳಲಾಗಿದೆ. ಕ್ಲೇಮಿಗೆ ಪೂರಕವಾಗಿ ಇತರೆ ಸೂಕ್ತ ಮಾಹಿತಿಯನ್ನು ಕೇಳಲಾಗಿದೆ. ಅರ್ಜಿಯಲ್ಲಿ

ಸತ್ಯಾಪನೆಯನ್ನು ಸೂಚಿಸಲಾಗಿದೆ. ಈಗಲೂ ಇಂತಹ ಕನಿಷ್ಟ ವಿವರ ಇಲ್ಲದೆ ಪಡೆಯುತ್ತಿರುವ ಅರ್ಜಿಗಳು ಸೂಕ್ತವೇ.? ಕೊಡಬೇಕಾದ ನೋಟೀಸ್ ನಮೂನೆಯಲ್ಲಿ "ಭೂಮಿಯನ್ನು ಯಾವ ಕಾನೂನು ಅಥವ ನಿಯಮದಲ್ಲಿ ಗ್ರಾಂಟ್ ಮಾಡಲಾಗಿದೆ" ಎಂದು ತಿಳಿಸುವ ಅವಶ್ಯಕತೆ ಇದೆ. ವಿಪರ್ಯಾಸವೆಂದರೆ ಈಗಲೂ ಅಂತಹ ನಿಯಮ ಎಸ್ಟೋ ಪ್ರಕರಣದಲ್ಲಿ ಅನುಸರಿಸಲಾಗಿಲ್ಲ.

**ಅನುಭಂದ-16:-** ಗ್ರಾಮ ಸೇವೆಗಳಲ್ಲಿ ಕೇವಲ ಐದು ಸೇವೆಗಳನ್ನು 1912 ರಿಂದ ವಂಶಪಾರಂಪರ್ಯ ಸೇವೆಗಳು ಎಂದು ಪರಿಗಣಿಸಲಾಗಿದೆ. ಇದು ಪಿ.ಟಿ.ಸಿ.ಎಲ್ ಕಾಯ್ದೆ ಅನ್ವಯಿಸುವಿಕೆ ಬಗ್ಗೆ ಬುನಾದಿಯಾಗಿದೆ.

**ಅನುಭಂದ-17:-** ಬಗರ್ ಹುಕುಂ ಸಾಗುವಳಿ ಹಿಂದಿನ ಅನುಭವದ ಆಧಾರದಲ್ಲಿ ಅಕ್ಯುಪೆನ್ಸಿ ಮೌಲ್ಯವನ್ನು ಪಡೆದು ಕೊಡಲಾಗುವುದರಿಂದ ಈ ಬಗ್ಗೆ ಪಿ.ಟಿ.ಸಿ.ಎಲ್ ಕಾಯ್ದೆ ಅನ್ವಯಿಸುವುದೇ ಎಂಬ ಚರ್ಚೆಗೆ ಹಿಂದೆ ಇದ್ದ ಕಾನೂನು ಮತ್ತು ನಿಯಮಗಳ ಸಂಗ್ರಹ ಚರ್ಚೆಗೆ ಅನುಕೂಲವಾಗಲಿದೆ.

**ಅನುಭಂದ-18:-** ಹಿಂದೆ ಇದ್ದ ದರ್ಖಾಸ್ತ್ ನಿಯಮಗಳು ಮೈಸೂರು ಲ್ಯಾಂಡ್ ರೆವಿನ್ಯೂ ಮ್ಯಾನ್ಯುಯಲ್ ನಲ್ಲಿನ ಸಂಗ್ರಹ ಗ್ರಾಂಟ್ ರೀತಿಯ ಗೊಂದಲಕ್ಕೆ ತೆರೆ ಎಳೆಯಲು ಸಹಕಾರಿಯಾಗಬಹುದು. ನಮಗಿರುವ ಪ್ರಶ್ನೆ ಒಂದೆ, ಈ ಬಗ್ಗೆ ನಾವೇ ಇಷ್ಟು ಮಾಹಿತಿ ಕಲೆ ಹಾಕಲು ಅನೇಕ ವರ್ಷಗಳವರೆಗೆ ಶ್ರಮವಹಿಸಿರುವಾಗ, ಸರ್ಕಾರ ಎಲ್ಲಾ ಮಾಹಿತಿಯನ್ನು ಕ್ರೋಢೀಕರಿಸಿ ಪ್ರಕಟಿಸಿಲ್ಲವೇಕೆ. ಎಲ್ಲಾ ಹಂತದಲ್ಲೂ ಮಾಹಿತಿ ಮುಚ್ಚಿರುವುದೇಕೆ.?

**ಅನುಭಂದ-19:-** ಇನಾಂ ಜಮೀನು ಪಿ.ಟಿ.ಸಿ.ಎಲ್ ವ್ಯಾಪ್ತಿಗೆ ಬರುವುದೇ ಎಂದು ನಿರ್ದರಿಸಲು ಇನಾಂ ಬಗ್ಗೆ ಇರುವ ಮೈಸೂರು ಲ್ಯಾಂಡ್ ರೆವಿನ್ಯೂ ಮ್ಯಾನ್ಯುಯಲ್ ನಲ್ಲಿನ ಸಂಗ್ರಹ ಉಪಯೋಗಕ್ಕೆ ಬರಬಹುದು.

**ಅನುಭಂದ-20:-** 2010 ರಲ್ಲಿ ಸರ್ಕಾರದಿಂದ ಹೊರಡಿಸಲ್ಪಟ್ಟ ಸರ್ಕ್ಯುಲರ್ ಪ್ರಕಾರ ಸುಳ್ಳು ಜಾತಿ ನೀಡಲ್ಪಡುತ್ತಿರುವುದು ಸರ್ಕಾರದ ಗಮನಕ್ಕೆ ಬಂದಿದೆ ಎಂದು ಗೊತ್ತಾಗುತ್ತದೆ. ಇದು ಕೆಲಸ ಪಡೆಯಲು ಪಡೆದಿದ್ದಾದರೆ ಅದನ್ನು ಪ್ರಶ್ನಿಸಲು ವಂಚಿತ ಅದೇ ಅಸಲು ವರ್ಗದ ಅಭ್ಯರ್ಥಿಗಳು ಇರುತ್ತಾರೆ, ಆದರೆ

ಅಂತಹ ಜಾತಿ ಪ್ರಮಾಣಪತ್ರವನ್ನು ಪಿ.ಟಿ.ಸಿ.ಎಲ್ ಕಾಯ್ದೆಯಲ್ಲಿ ಉಪಯೋಗಿಸಿರುವುದಕ್ಕೆ ಇಲ್ಲಿವರೆಗೆ ಉತ್ತರ ಕಂಡುಕೊಳ್ಳಲಾಗಿದೆಯೇ?.

**ಅನುಭಂದ-21:-** 1950 ರಲ್ಲಿ ಪರಿಶಿಷ್ಟ ಜಾತಿ ಅಸಲು ಪಟ್ಟಿಯನ್ನು ಗಮನಿಸುವುದು. ಇಲ್ಲಿ ಮಡ್ರಾಸ್ ಪ್ರಾಂತ್ಯ, ಹೈದರಾಬಾದ್ ಪ್ರಾಂತ್ಯ, ಕೂರ್ಗ್ ಪ್ರಾಂತ್ಯ, ಮೈಸೂರು ಪ್ರಾಂತ್ಯ, ಬಾಂಬೆ ಪ್ರಾಂತ್ಯಕ್ಕೆ ವಿವಿದ ಜಾತಿಗಳನ್ನು ಗುರುತಿಸಲಾಗಿದೆ. ಇದು 26-01-1950 ರಿಂದ 01-11-1956 ರವರೆಗೆ ಜಾರಿಯಲ್ಲಿರುವುದಾಗಿದೆ. ಇದು 26-01-1950 ಕ್ಕೆ ಮುಂಚೆ ಮತ್ತು 01-11-1956 ಕ್ಕೆ ಮುಂಚೆ ಗ್ರಾಂಟ್ ಆದ ಪ್ರಕರಣದಲ್ಲಿ ಅಂತಹ ಜಾತಿ ಪಟ್ಟಿಯಲ್ಲಿ ಲಭ್ಯವೇ ಎನ್ನುವುದಕ್ಕೆ ಪರಿವೀಕ್ಷಿಸಲು ಮಹತ್ತರ ಸಾಕ್ಷಿಯಾಗಿದೆ.

**ಅನುಭಂದ-22:-** 1950 ಮತ್ತು 1951 ರಲ್ಲಿ ಪರಿಶಿಷ್ಟ ಪಂಗಡ ಅಸಲು ಪಟ್ಟಿಯನ್ನು ಗಮನಿಸುವುದು. ಇಲ್ಲಿ ಮಡ್ರಾಸ್ ಪ್ರಾಂತ್ಯ, ಹೈದರಾಬಾದ್ ಪ್ರಾಂತ್ಯ, ಕೂರ್ಗ್ ಪ್ರಾಂತ್ಯ, ಮೈಸೂರು ಪ್ರಾಂತ್ಯ, ಬಾಂಬೆ ಪ್ರಾಂತ್ಯಕ್ಕೆ ವಿವಿದ ಪಂಗಡಗಳನ್ನು ಗುರುತಿಸಲಾಗಿದೆ. ಇದು 26-01-1950 ರಿಂದ 01-11-1956 ರವರೆಗೆ ಜಾರಿಯಲ್ಲಿರುವುದಾಗಿದೆ. ಇದು 26-01-1950 ಕ್ಕೆ ಮುಂಚೆ ಮತ್ತು 01-11-1956 ಕ್ಕೆ ಮುಂಚೆ ಗ್ರಾಂಟ್ ಆದ ಪ್ರಕರಣದಲ್ಲಿ ಅಂತಹ ಪಂಗಡ ಪಟ್ಟಿಯಲ್ಲಿ ಲಭ್ಯವೇ ಎನ್ನುವುದಕ್ಕೆ ಪರಿವೀಕ್ಷಿಸಲು ಮಹತ್ತರ ಸಾಕ್ಷಿಯಾಗಿದೆ.

**ಅನುಭಂದ-23:-** 1950 ಮತ್ತು 1951 ರ ಪಟ್ಟಿಯನ್ನು ಸಂಸತ್ತು ಮೊದಲಿಗೆ 1956 ರಲ್ಲಿ ತಿದ್ದುಪಡಿ ಕಾಯ್ದೆ ಮುಖೇನ ಬದಲಿಸುತ್ತೆ. ಸದರಿ 23/1956 ಕಾಯ್ದೆಯನ್ನು 25-09-1956 ರಲ್ಲಿ ಜಾರಿ ಮಾಡಲಾಗಿರುತ್ತದೆ. 01-11-1956 ರಲ್ಲಿ ರಾಜ್ಯಗಳ ವಿಭಜನೆಯ ನಂತರ ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡದ ಬಗ್ಗೆ ಆ ಆ ರಾಜ್ಯಕ್ಕೆ ಸಂಬಂದಿಸಿದಂತೆ ಅನ್ವಯಿಸುವ ಹಾಗೆ 29-10-1956 ರಲ್ಲಿ ಅಧ್ಯಕ್ಷರ ಆದೇಶದಂತೆ ಮಾರ್ಪಾಡು ಮಾಡಿದ ಪಟ್ಟಿಯನ್ನು ತಯಾರಿಸಲಾಗಿದೆ ಇದರಲ್ಲಿ ಮೈಸೂರು ರಾಜ್ಯಕ್ಕೆ ಸಂಬಂದಿಸಿದಂತೆ ಎಂಟು (ಎಸ್.ಸಿ) ಏಳು (ಎಸ್.ಟಿ) ವಿವಿದ ಪ್ರಾಂತ್ಯಗಳನ್ನು ತೋರಿಸಿ ಆ ಪ್ರಾಂತ್ಯದಲ್ಲಿ ಬರುವ ಪರಿಶಿಷ್ಟ ಜಾತಿ ಮತ್ತು ಪಂಗಡಗಳನ್ನು ನಮುದಿಸಲಾಗಿದೆ. ಇದು

ಮಾರ್ಪಾಡು ಮಾಡಿದ ಪಟ್ಟಿಯಾಗಿದ್ದು ಇದರಲ್ಲಿನ ಜಾತಿ ಮತ್ತು ಪಂಗಡಗಳ ಸೇರ್ಪಡೆಯು ತಿದ್ದುಪಡಿ ಕಾಯ್ದೆ ಮುಖೇನ ಆಗಿದೆ ಎನ್ನಲಾಗಿದೆ. ಸದರಿ ಪಟ್ಟಿ ವಿವಿದ ಪ್ರಾಂತ್ಯಗಳಿಗೆ ಸೀಮಿತವಾಗಿರುವುದರಿಂದ ಇದು 26-07-1977 ರವರೆಗೆ ಜಾರಿಯಲ್ಲಿ ಇದ್ದರಿಂದ ಇದರ ವ್ಯಾಖ್ಯಾನ ಮಹತ್ವವನ್ನು ಇಲ್ಲಿವರೆಗೆ ಯಾವ ಪ್ರಕರಣದಲ್ಲೂ ಕಾಣಲಾಗಿಲ್ಲ.[1] 1976 ರ ತಿದ್ದುಪಡಿ ಕಾಯ್ದೆಯನ್ನು ವ್ಯಾಖ್ಯಾನಿಸಿದಾಗ ಅದರಲ್ಲಿ ಹೇಳಿರುವಂತೆ 1971 ರ ಸೆನ್ಸೆಸ್ ಪ್ರಕಾರ ಪ್ರಾಂತ್ಯಾವಾರು ಜಾತಿ ಮತ್ತು ಪಂಗಡದ ಪಟ್ಟಿ ವಿಂಗಡಿಸಿ ಪ್ರಕಟಿಸದ ಹೊರತು ಈಗಲೂ ಇದೇ ಪಟ್ಟಿ ಜಾರಿಯಲ್ಲಿದೆ ಎಂದು ವ್ಯಾಖ್ಯಾನಿಸಬಹುದು.

**ಅನುಭಂದ-24:-** 27-07-1977 ರಿಂದ ಜಾರಿಗೆ ಬರುವ ಹಾಗೆ ಎಸ್.ಸಿ/ ಎಸ್.ಟಿ ಪಟ್ಟಿ ಪ್ರಕಟವಾಗುತ್ತದೆ. ಇದರಲ್ಲಿ ಕರ್ನಾಟಕಕ್ಕೇ ಏಕೀಬವಿಸಿ 101 ಎಸ್.ಸಿ ಜಾತಿ ವರ್ಗಗಳ, ಉಪವರ್ಗಗಳ ಮತ್ತು 49 ಪಂಗಡ, ಉಪಪಂಗಡಗಳ ಪಟ್ಟಿ ಪ್ರಕಟಿಸಲಾಗುತ್ತದೆ. ಇದನ್ನು ಪ್ರತ್ಯೇಕ ಅಧಿಸೂಚನೆ ಮುಖಾಂತರ 27-07-1977 ರಿಂದ ಜಾರಿಗೆ ತರಲಾಗಿದೆ. ಹೀಗೆ ಜಾರಿ ದಿನಾಂಕ ನಮೂದಿಸಿದರೂ ಕೂಡ ಹಿಂದಿನಿಂದ ಅದನ್ನು ಹೇಗೆ ಅನ್ವಯಿಸುವುದು. ಇದೇ ತಿದ್ದುಪಡಿ ಕಾಯ್ದೆ ಕಲಂ 5 (4) ರ ರೀತ್ಯ ಮತ್ತೊಂದು ಗೆಜೆಟ್ ಪ್ರಕಟಣೆ ಮಾಡಿ ಪ್ರಾಂತ್ಯಾವಾರು ಪ್ರಕಟಿಸುವ ಅವಶ್ಯಕತೆ ಇರುತ್ತದೆ. ಇದಿಲ್ಲದೆ ಹೇಗೆ ಕಾನ್ಸ್ಟಿಟ್ಯೂಯೆನ್ಸಿ ವಿಂಗಡನೆಗಾಗಿ ತಯಾರಾದ ಪಟ್ಟಿಯನ್ನು ಅಳವಡಿಸಿಕೊಳ್ಳುವುದು. ಹಿಂದೆ ಪ್ರಾಂತ್ಯಾವಾರು ಜಾತಿ ಮತ್ತು ಪಂಗಡಗಳನ್ನು ಗುರುತಿಸಲಾಗಿರುತ್ತದಲ್ಲಾ. ಈ ಬಗ್ಗೆ ಏಕೆ ವ್ಯಾಖ್ಯಾನಿತ

---

[1] 1956 ರ ಅಧ್ಯಕ್ಷರ ಆದೇಶದ ಮಾರ್ಪಡಿತ ಪಟ್ಟಿಯನ್ನು ವ್ಯಾಖ್ಯಾನಿಸುವುದಾದರೆ. 1956 ರ ತಿದ್ದುಪಡಿ ಕಾಯ್ದೆಯಂತೆ ಸೆನ್ಸಸ್ ಆಧಾರದಲ್ಲಿ ರಾಜ್ಯದ ಗಡಿ ರೇಖೆ ವಿಂಗಡಿಸಿದ ನಂತರ ಜಿಲ್ಲೆಗಳನ್ನು ಉಲ್ಲೇಕಿಸಿ ಎಲ್ಲಿ ವಾಸುಸುವ ಜಾತಿಗಳನ್ನು ಮಾತ್ರ ಎಸ್.ಸಿ/ಎಸ್.ಟಿ ಪಟ್ಟಿಯಲ್ಲಿ ಗುರುತಿಸಲಾಗಿದೆ. ಅದರಂತೆ 1976 ರ ತಿದ್ದುಪಡಿಯಲ್ಲಿ ಮಾರ್ಗದರ್ಶನದಂತೆ ಮತ್ತೊಂದು ಮಾರ್ಪಡಿತ ಪಟ್ಟಿಯನ್ನು 1971 ರ ಸೆನ್ಸಸ್ ಆಧಾರದಲ್ಲಿ ಪಾರ್ಲಿಮೆಂಟ್ ಮತ್ತು ವಿಧಾನಸಬಾ ಕಾನ್ಸ್ಟಿಟ್ಯೂಯೆನ್ಸಿ ಆಧಾರದಲ್ಲಿ ಹೊರ ತರಬೇಕಿರುತ್ತದೆ ಅಂತಹ ಪಟ್ಟಿ ಇಲ್ಲದೆ 1976 ರಲ್ಲಿ ಘೋಷಿಸಿದ ಪಟ್ಟಿ ಖಾಯಂ ಆಗಲಕ್ಕೆ ಸಾಧ್ಯವಿಲ್ಲ. ಹೇಗೆ ಈ ಅಂಶ ಇನ್ನೂ ಚರ್ಚೆ ಯಾಗಿಲ್ಲ ಎಂಬುದೇ ನಮ್ಮಲ್ಲಿ ಮೂಡುವ ಕಟ್ಟ ಕಡೆಯ ಪ್ರಶ್ನೆ.?

ತೀರ್ಪು ಇಲ್ಲಿವರೆಗೆ ಇಲ್ಲ, ಅಥವ ನನ್ನ ಗಮನಕ್ಕೆ ಬಂದಿಲ್ಲವೆ. ಈ ಪಟ್ಟಿಯನ್ನು ಅರ್ಥ ಮಾಡಿಕೊಳ್ಳಲು ಕರ್ನಾಟಕದಲ್ಲಿ ಅಂದು ಇದ್ದ ಹಿಂದುಳಿದ ಸಮುದಾಯ (ಬ್ಯಾಕ್ವರ್ಡ್ ಕಮುನಿಟೀಸ್) ಹಿಂದುಳಿದ ಜಾತಿ (ಬ್ಯಾಕ್ವರ್ಡ್ ಕ್ಯಾಸ್ಟ್ಸ್) ಹಿಂದುಳಿದ ಬುಡಕಟ್ಟು ಜನಾಂಗ (ಬ್ಯಾಕ್ವರ್ಡ್ ಟ್ರೈಬ್ಸ್). ವಿವಿದ ಸಮುದಾಯಗಳ ಪಟ್ಟಿಯ ಸಂಗ್ರಹವನ್ನು ಇದರ ಜೊತೆಯಲ್ಲಿ ನೀಡಲಾಗಿದೆ. ಇದರಲ್ಲಿ ನೂರಾರು ಜಾತಿ ಮತ್ತು ಟ್ರೈಬ್ ಗಳು ಇನ್ನು ಓ.ಬಿ.ಸಿ ಪಟ್ಟಿಯಲ್ಲಿ ಇದ್ದಾರೆ. ಅಂದು ಅವರು ಓ.ಬಿ.ಸಿ ಪಟ್ಟಿಯಲ್ಲಿದ್ದವರನ್ನು ಮುಂದೆ ಸೇರ್ಪಡೆ ಮಾಡಿದಾಗ ಹೇಗೆ ಹಿಂದಿನಿಂದ ಅವರನ್ನ್ ಎಸ್.ಸಿ/ಎಸ್.ಟಿ ಎಂದು ಪರಿಗಣಿಸುವುದು ಎಂಬ ವಿಮರ್ಶಾ ಚಿಂತನೆ ಆಗಿಲ್ಲ.

**ಅನುಭಂದ-25:-** 1991 ರಲ್ಲಿ ಪರಿಶಿಷ್ಟ ಪಂಗಡಕ್ಕೆ ಸೇರ್ಪಡೆ ಮಾಡಲಾಗುತ್ತದೆ, ಐಟಮ್ ನಂಬರ್ 38 ರಲ್ಲಿ 'ನಾಯ್ಕ್',(Naik) 'ನಾಯಕ್',(Nayak) 'ಬೇಡ',(Beda) 'ಬೇಡರ್',(Bedar) ಮತ್ತು 'ವಾಲ್ಮೀಕಿ'(Valmiki) ಎಂಬ ಸಮುದಾಯಗಳನ್ನು ಪ್ರತ್ಯೇಕವಾಗಿ ಸೇರಿಸಲಾಗಿದೆ. ಈ ತಿದ್ದುಪಡಿಯ ಉದ್ದೇಶ ಮತ್ತು ಕಾರಣಗಳನ್ನು ಹೀಗೆ ಕೊಡಲಾಗಿದೆ, "ಕರ್ನಾಟಕ ರಾಜ್ಯದ ನಾಯ್ಕ್, ನಾಯಕ್, ಬೇಡ, ಬೇಡರ್ ಮತ್ತು ವಾಲ್ಮೀಕಿಯ ಬುಡಕಟ್ಟು ಸಮುದಾಯಗಳನ್ನು ಆ ರಾಜ್ಯದ ಪರಿಶಿಷ್ಟ ಪಂಗಡಗಳ ಪಟ್ಟಿಯಲ್ಲಿ ಸೇರಿಸಲಾಗಿಲ್ಲ ಮತ್ತು ಅದರ ಪ್ರಕಾರ ಈ ಬುಡಕಟ್ಟು ಸಮುದಾಯಗಳು ಪರಿಶಿಷ್ಟ ಪಂಗಡಗಳಿಗೆ ಒದಗಿಸಲಾದ ವಿವಿಧ ಸುರಕ್ಷತೆಗಳ ಪ್ರಯೋಜನಗಳನ್ನು ಸಂವಿಧಾನದಲ್ಲಿ ಪಡೆಯಲಾಗಿಲ್ಲ. ಇದಕ್ಕೆ ಸಂಬಂಧಿಸಿದಂತೆ ಈ ಸಮುದಾಯಗಳನ್ನು ಪರಿಶಿಷ್ಟ ಪಂಗಡಗಳ ಪಟ್ಟಿಯಲ್ಲಿ ಸೇರಿಸಲು ಕರ್ನಾಟಕ ರಾಜ್ಯ ಸರ್ಕಾರ ಶಿಫಾರಸು ಮಾಡಿತ್ತು. ಈ ಸಮುದಾಯಗಳನ್ನು ಆ ರಾಜ್ಯದ ಪರಿಶಿಷ್ಟ ಪಂಗಡಗಳ ಪಟ್ಟಿಗೆ ಸೇರಿಸಲು ನಿರಂತರ ಬೇಡಿಕೆ ಇತ್ತು. 1991 ರ ಏಪ್ರಿಲ್ 19 ರಂದು ಘೋಷಿಸಲ್ಪಟ್ಟ ಸಂವಿಧಾನ (ಪರಿಶಿಷ್ಟ ಪಂಗಡ) ಆದೇಶಗಳು (ತಿದ್ದುಪಡಿ) ಸುಗ್ರೀವಾಜ್ಞೆ, 1991 ಆ ಬುಡಕಟ್ಟು ಜನಾಂಗವನ್ನು ಸೇರಿಸಲಾಗಿದ್ದರಿಂದ, ಈ ಶಾಸನವನ್ನು ಆ ದಿನಾಂಕದಿಂದ ಜಾರಿಗೆ ತರಲು ಪ್ರಸ್ತಾಪಿಸಲಾಗಿದೆ." ಇದು 19-04-1991

ರಿಂದ ಜಾರಿಗೆ ತರಲಾಗಿದೆ. ಹೀಗೆ ಶಾಸಕಾಂಗ ಹೇಳಿದಾಗ್ಯೂ ಕೂಡ ಈ ಹಿಂದೆ ಆಗಿರುವ ತೀರ್ಪಿನ ಆಧಾರ ಮುಂದುವರಿದಿದೆಯೇ, ಈ ಕಾನೂನು ವಿಚಾರ ಗಮನಕ್ಕೆ ತೆಗೆದುಕೊಳ್ಳದೆ ಆಗಿರುವ ತೀರ್ಪುಗಳು "ಪರ್ ಇನ್ಕ್ಯೂರಿಯಮ್" ಆಗುವುದಿಲ್ಲವೆ.? ಈ ಹಿಂದೆ ಇದೇ ಜಾತಿಗಳನ್ನು ಓ.ಬಿ.ಸಿ ಎಂದು ಸರ್ಕಾರ ಆದೇಶದಂತೆ ಪರಿಗಣಿಸಿರುವಾಗ ಅವರನ್ನು ಹಿಂದಿನಿಂದ ಎಸ್.ಸಿ/ಎಸ್.ಟಿ ವರ್ಗಕ್ಕೆ ಸೇರಿಸಬಹುದೆ.

**ಅನುಭಂದ-26:-** ಪರಿಶಿಷ್ಟ ಪಂಗಡದ ಪಟ್ಟಿಯಲ್ಲಿ ಕೆಲವು ಸಮಾನಾರ್ಥಕ ಹೆಸರಿನ ಪಂಗಡ ಮತ್ತು ಸಮುದಾಯಗಳನ್ನು ಈಗಾಗಲೇ ಇರುವ ಪಂಗಡಗಳ ಹೆಸರಿನ ಪರ್ಯಾಯ ಹೆಸರುಳ್ಳದ್ದಾಗಿದ್ದು, ಪ್ರಾಂತ್ಯಕ್ಕೆ ಮೀಸಲಾಗಿಸಲು ತಿದ್ದುಪಡಿ ಮಾಡಲಾಗಿದೆ ಎಂದು ಕರಾರುವಕ್ಕಾಗಿ ಶಾಸಕಾಂಗ ತಿಳಿಸಿ ಐದು ಪರಿಶಿಷ್ಟ ಪಂಗಡದ ಹೆಸರನ್ನು ನಮೂದಿಸಲಾಗಿದೆ. ಈ ಕಾಯ್ದೆ ನಂ. 10 /2003 ಗೆಜೆಟ್ ಪ್ರಕಟಣೆ ಆಗಿರುವುದು 08-01-2003, ಇದು ಹಿಂದಿನಿಂದ ಜಾರಿಯಾಗುವುದೇ ಎಂಬುದನ್ನು ಗಮನಿಸಿದಾಗ ಎಂದಿನಿಂದ ಜಾರಿಯಾಗಬೇಕು ಎಂಬುದನ್ನು ನೀಡಲಾಗಿಲ್ಲ. ಆದರೆ ಇದು ಸಮಾನಾರ್ಥಕ ಹೆಸರಿನ ಜಾತಿಗಳು ಎಂದು ತಿಳಿಸಿರುವುದರಿಂದ ಇದನ್ನು ಹಿಂದಿನಿಂದ ಜಾರಿಗೊಳಿಸಬಹುದೇ. ಆದರೆ ಇದನ್ನು 1950 ಅಥವ 1956 ರಿಂದ ಜಾರಿಗೊಳಿಸಲು ಅಂದು ಇದ್ದ ಪ್ರಾಂತ್ಯವಾರು ವಿಂಗಡಣೆ ಪರಿವೀಕ್ಷಣೆ ಅಗತ್ಯವಿರುತ್ತದೆ. ಈ ಬಗ್ಗೆ ವಿವರಣೆ ಇರುವ ಕರ್ನಾಟಕ ಸರ್ಕಾರದ ಆದೇಶ ಪ್ರತಿಯನ್ನು ಇದರೊಂದಿಗೆ ನೀಡಲಾಗಿದೆ.

**ಅನುಭಂದ-27:-** ಪರಿಶಿಷ್ಟ ಜಾತಿಯ ಪಟ್ಟಿಯಲ್ಲಿ 2002 ರಲ್ಲಿ ತಿದ್ದುಪಡಿ ಮಾಡಿ, ಈಗಾಗಲೇ ನಂಬರ್ 17 ರಲ್ಲಿ ಇರುವ ಬಂಜಾರ, ಲಂಬಾಣಿ ಜೊತೆಗೆ ಲಂಬಾಡ, ಲಂಬಾಡಿ, ಲಮಾಣಿ, ಸುಗಾಲಿ, ಸುಕಾಲಿ ಜಾತಿಗಳನ್ನು ಸೇರಿಸಲಾಗಿದೆ. ನಂಬರ್ 23 ರಲ್ಲಿ ಇರುವ ಭೋವಿ ಜೊತೆಗೆ , ಓಡ್, ಓಡ್ಡೆ, ಒಡ್ಡರ್, ವಡ್ಡರ್, ಓಡ್ಡರ್, ವೊಡ್ಡರ್ ಸಮುದಾಯವನ್ನು ಸೇರಿಸಲಾಗಿದೆ. ನಂಬರ್ 53 ರಲ್ಲಿ ಇರುವ ಕೊರಚ ಜೊತೆಯಲ್ಲಿ ಕೊರಚರ್ ಸೇರಿಸಲಾಗಿದೆ. ನಂಬರ್ 54 ರಲ್ಲಿ ಇರುವ ಕೊರಮ ಜೊತೆಯಲ್ಲಿ  ಕೊರವ, ಕೊರವರ್

ಸಮುದಾಯವನ್ನು ಸೇರಿಸಲಾಗಿದೆ. ಕಾಯ್ದೆಯಲ್ಲಿ ತಿದ್ದುಪಡಿ ಮಾಡಿ ಹಿಂದಿನ ಆ ನಂಬರಿನ ಪಟ್ಟಿಯನ್ನು ಕೈಬಿಟ್ಟು ಹಿಂದೆ ಇದ್ದ ನಮೂದನ್ನೂ ಒಳಗೊಂಡಂತೆ ಹಲವು ಸಮುದಾಯಗಳನ್ನು ಸೇರಿಸಲಾಗಿದೆ. ಇಲ್ಲಿ ಸಮಾನಾಂತರ ಪದಗಳ ಸಮುದಾಯಗಳು ಎಂದು ಉಲ್ಲೇಕವಾಗಿಲ್ಲ. ಇದೇ ತಾರೀಖಿನಲ್ಲಿ ಪ್ರಕಟಿಸಲಾದ ಕಾಯ್ದೆ ನಂ. 10 /2003 ರಲ್ಲಿ ಈ ಮೇಲೆ ಹೇಳಿದಂತೆ ಸಮಾನಾಂತರ ಪದ ಎಂದು ಸ್ಪಷ್ಟವಾಗಿ ಉಲ್ಲೇಕಿಸಲಾಗಿದೆ. ಆದರೆ ಈ ಕಾಯ್ದೆ ನಂ. 61/2002 ರಲ್ಲಿ ಆ ರೀತಿಯ ಉಲ್ಲೇಕ ಇರುವುದಿಲ್ಲ. ಗೆಜೆಟ್ ಪ್ರಕಟಣೆ ಆಗಿರುವುದು 08-01-2003, ಇದು ಹಿಂದಿನಿಂದ ಜಾರಿಯಾಗುವುದೇ ಎಂಬುದನ್ನು ಗಮನಿಸಿದಾಗ ಎಂದಿನಿಂದ ಜಾರಿಯಾಗಬೇಕು ಎಂಬುದನ್ನು ನೀಡಲಾಗಿಲ್ಲ. ಆದರೆ ಕರ್ನಾಟಕ ಸರ್ಕಾರ 1988 ರಲ್ಲೇ ಕೆಲವು ಜಾತಿಗಳನ್ನು ಸಮಾನಾರ್ಥಕ ಜಾತಿಗಳೆಂದು ಪರಿಗಣಿಸಿ ಸಂವಿಧಾನ ತಿದ್ದುಪಡಿಗೆ ಮುನ್ನವೇ ಜಾತಿ ಪ್ರಮಾಣ ಪತ್ರ ನೀಡಲಾಗಿದೆ. ಇದರ ಪರಿಣಾಮ ಪಿ.ಟಿ.ಸಿ.ಎಲ್ ಪ್ರಕರಣಗಳ ಮೇಲೆ ಹೇಗೆ.? ಸಂಸತ್ತಿನಲ್ಲಿ ತಿದ್ದುಪಡಿ ಮಾಡುವವರೆಗೆ ಅಂತಹ ಜಾತಿಗಳನ್ನು ಸೇರ್ಪಡೆ ಮಾಡುವ ಹಾಗಿಲ್ಲ ಎಂಬುದು ಕಾನೂನು, ಆದರೆ ಇಂತಹ ಅಚಾತುರ್ಯ ಮಾಡಿರುವ ಸರ್ಕಾರಿ ಆದೇಶಗಳು ಸದರಿ ಜಾತಿಗಳಿಗೆ ಸೇವೆಗಳನ್ನು ನೀಡಲಾಗಿದ್ದರೆ ಯಾರದ್ದೂ ತಕರಾರಿರುವುದಿಲ್ಲ. ಇದರಿಂದ ಆಗಲೇ ವರ್ಗಾವಣೆ ಆಗಿ ಮೂರನೇ ವ್ಯಕ್ತಿಗಳಿಗೆ ಹಕ್ಕು ಪ್ರಾಪ್ತವಾಗಿದ್ದರೆ ಅನ್ವಯ ಆಗದು ಎಂಬ ಸುಪ್ರೀಮ್ ತೀರ್ಪನ್ನು ಕಡೆಗಾಣಿಸಿದಂತೆ ಅಲ್ಲವೆ.? ಕೆ.ಎಲ್.ಜೆ ಪಬ್ಲಿಕೇಷನ್ ರವರು ಕರ್ನಾಟಕ ಸರ್ಕಾರದ ಸಮಾಜ ಕಲ್ಯಾಣ ಇಲಾಖೆಗೆ ಅಧಿಕೃತವಾಗಿ ಅವರಿಗಾಗಿ ಎಂದು ಒಂದು ಪುಸ್ತಕವನ್ನು 2017 ರಲ್ಲಿ ಹೊರತರುತ್ತಾರೆ. ಅದರಲ್ಲಿ 1977 ರಲ್ಲಿ ಎಸ್.ಸಿ ಮತ್ತು ಎಸ್.ಟಿ ಪಟ್ಟಿ ಎಂದು ಮುದ್ರಿಸಿ ಅಂದು ಇರದೇ ಇದ್ದ ಕೆಲವು ಜಾತಿಗಳನ್ನು ಸೇರಿಸಿರುವುದೂ ಅಲ್ಲದೆ ಕೆಲವು ಜಾತಿಗಳನ್ನು ಸಮಾನಾಂತರ ಜಾತಿ ಎಂದು ಸೇರಿಸಲಾಗಿದೆ. 2014 ಮತ್ತು 2017 ರಲ್ಲಿ ಎರಡು ಸುತ್ತೋಲೆಗಳನ್ನು ಹೊರಡಿಸಲಾಗಿದೆ, ಅದರಲ್ಲಿ 1977 ರ ತಿದ್ದುಪಡಿ ಕಾಯ್ದೆಯನ್ನು ತಪ್ಪಾಗಿ ಅರ್ಥೈಸಲಾಗಿದೆ. ಅದಕ್ಕೆ

ಅಧಿಕೃತ ಇಂಬು ಕೊಡಲು ಅಧಿಕೃತ ಪುಸ್ತಕವನ್ನು ಖಾಸಗಿಯವರಿಂದ ಮುದ್ರಿಸಲಾಗಿದೆ.

**ಅನುಭಂದ-28:-** ಬಹಳ ವರ್ಷಗಳ ಕಾಲದಿಂದ ಇದ್ದ ಬೇಡಿಕೆಯಂತೆ ಮೇದಾರ ಸಮುದಾಯವನ್ನು ಎಸ್.ಟಿ ವರ್ಗಕ್ಕೆ ಸೇರಿಸಲು ಸಂವಿಧಾನ ತಿದ್ದುಪಡಿ ತರಲಾಗಿದೆ. ನಂಬರ್ 37 ರಲ್ಲಿನ ಮೇದ ಸಮುದಾಯದ ನಂತರ ಮೇದಾರ ಸೇರಿಸಲು ತಿದ್ದುಪಡಿ ಮಾಡಲಾಗಿದೆ. ಕಾಯ್ದೆ ನಂ. 24/2012 ರಂತೆ 31-05-2012 ರಲ್ಲಿ ಗೆಜೆಟ್ ಪ್ರಕಟಣೆ ಆಗಿರುತ್ತದೆ. ಯಾವ ತಾರೀಖಿನಿಂದ ಜಾರಿಯಾಗಬೇಕು ಎಂದು ನಮೂದಿಸಲಾಗಿಲ್ಲ. ಆದರೆ 1987 ರಲ್ಲಿಯೇ ಕರ್ನಾಟಕ ಸರ್ಕಾರ ಸುತ್ತೋಲೆ ಹೊರಡಿಸಿ ಸಂವಿಧಾನ ತಿದ್ದುಪಡಿ ಮುಂಚೆಯೇ ಜಾತಿ ಪ್ರಮಾಣಪತ್ರ ನೀಡಲು ಆದೇಶಿಸಿದೆ. ಇದರ ಪರಿಣಾಮ ಪಿ.ಟಿ.ಸಿ.ಎಲ್ ಪ್ರಕರಣಗಳ ಮೇಲೆ ಹೇಗೆ.?

**ಅನುಭಂದ-29:-** ಕಾಯ್ದೆ ನಂ. 4 /2015 ರಂತೆ ದಿನಾಂಕ 23-03-2015 ರ ಗೆಜೆಟ್ ಪ್ರಕಟಣೆಯಂತೆ ಪರಿಶಿಷ್ಟ ಜಾತಿ ಪಟ್ಟಿಯಲ್ಲಿನ ನಂಬರ್ 23 ರಲ್ಲಿನ ಅಂಶವನ್ನು ತಿದ್ದುಪಡಿ ಮಾಡಲಾಗಿದೆ. ಹಿಂದೆ ಇದ್ದ ಭೋವಿ, ಓಡ್, ಓಡ್ಡೆ, ಒಡ್ಡರ್, ವಡ್ಡರ್, ಓಡ್ಡರ್, ವೊಡ್ಡರ್ ಸಮುದಾಯದ ನಮೂದನ್ನು ತೆಗೆದು ಹಾಕಿ ಅದೇ ಸಮುದಾಯದ ಜೊತೆಗೆ ಬೋವಿ (ಬೆಸ್ತರಲ್ಲದವರು), (bovi (non-besta)) ಕಲ್ಲುಒಡ್ಡರ್, ಮಣ್ಣುಒಡ್ಡರ್, ಸಮುದಾಯವನ್ನು ಸೇರಿಸಲಾಗಿದೆ. ಇದರಲ್ಲಿ ಆಸ್ಟ್ ನಲ್ಲಿ ಕೆಲವು ಮಾರ್ಪಾಡು ತಂದು ಕೆಲವು ಸಮುದಾಯವನ್ನು ಸೇರಿಸಲು ಕೋರಿದ ಮೇರೆಗೆ ತಿದ್ದುಪಡಿ ತರಲಾಗಿದೆ ಎಂದು ಉಲ್ಲೇಕಿಸಲಾಗಿದೆ. ಯಾವ ತಾರೀಖಿನಿಂದ ಜಾರಿಯಾಗಬೇಕು ಎಂದು ನಮೂದಿಸಲಾಗಿಲ್ಲ.

**ಅನುಭಂದ-30:-** ಕರ್ನಾಟಕ ರಾಜ್ಯ ಸರ್ಕಾರ ದಿನಾಂಕ 29-11-1977 ರಲ್ಲಿ ಸರ್ಕ್ಯುಲರ್ ಒಂದನ್ನು ಹೊರಡಿಸಿ[1] ಎಸ್.ಸಿ ಮತ್ತು ಎಸ್.ಟಿ ಸಮುದಾಯಗಳ ಸಮಾನಾರ್ಥಕ ಪದಗಳು ಎಂದು ಹಲವು ಹೊಸ ಜಾತಿ ಮತ್ತು ಪಂಗಡವನ್ನು

---

[1] ಇಂತಹ ಸರ್ಕ್ಯುಲರ್ ಹೊರಡಿಸಲು ಕಾನೂನಿನಲ್ಲಿ ರಾಜ್ಯ ಸರ್ಕಾರಕ್ಕೆ ಅಧಿಕಾರವಿಲ್ಲ.

ಉಲ್ಲೇಕಿಸಿ ಅಧಿಕಾರಿಗಳಿಗೆ ಆದೇಶಿಸಿ, ಅಂತಹ ಜಾತಿ ಪತ್ರವನ್ನು ನೀಡುವಂತೆ ಆದೇಶಿಸಿರುತ್ತದೆ. ಈ ಬಗ್ಗೆ ಕೇಂದ್ರ ಸರ್ಕಾರ ಸಮನಾರ್ಥಕ ಪದಗಳ ಪ್ರಶ್ನೆಯು ಪರಿಶೀಲನೆ ಹಂತದಲ್ಲಿ ಇದೆ ಅದನ್ನು ಮುಂದೆ ತಿಳಿಸುವುದಾಗಿ ಹೇಳಿದ ಮೇಲೆ ಸದರಿ ಸರ್ಕ್ಯುಲರ್ 20-04-1978 ರಿಂದ ಜಾರಿಗೆ ಬರುವಂತೆ ಮುಂದಿನ ಆದೇಶದವರೆಗೆ ವಾಪಸ್ ಪಡೆದಿರುತ್ತದೆ. ಈ ಮಧ್ಯೆ ಜಾತಿ ಪತ್ರ ಪಡೆದವರಿಂದ ಪಿ.ಟಿ.ಸಿ.ಎಲ್ ಪ್ರಕರಣ ನೊಂದಾವಣಿ ಆಗಿದ್ದರೆ ಏನು ಪರಿಣಾಮ.? ಮುಂದೆ ಇಂತಹ ಜಾತಿಗಳನ್ನು ಸೇರ್ಪಡೆ ಮಾಡುವಾಗಲೂ ಅನುಭಂದ-26 ರಲ್ಲಿ ಉಲ್ಲೇಕಿತ ಜಾತಿಗಳನ್ನು ಸಮಾನಾರ್ಥಕ ಪದಗಳು ಎಂದು ಸೇರಿಸಿರುವುದು ಬಿಟ್ಟರೆ ಬೇರೆ ಯಾವ ತಿದ್ದುಪಡಿಯಲ್ಲೂ ಹಾಗೆ ಸೇರಿಸಲಾಗಿಲ್ಲ. ರಾಜ್ಯ ಸರ್ಕಾರದ ಇಂತಹ ಅಚಾತುರ್ಯದಿಂದ ಉಂಟಾಗಿರುವ ಪಿ.ಟಿ.ಸಿ.ಎಲ್ ಕೇಸುಗಳಲ್ಲಿನ ಗೊಂದಲಗಳ ಬಗ್ಗೆ ಚರ್ಚೆ ಆಗಬೇಕಿದೆ.

**ಅನುಭಂದ-31:-** ಹಾಲಿ 2019 ರಲ್ಲಿ ಒಂದು ಬಿಲ್ ಪ್ರಸ್ತಾವನೆ ಬಾಕಿ ಇದೆ. ಇದರಲ್ಲಿ ಸಮಾನಾಂತರ ಪದನಾಮ ಉಳ್ಳ ಎಸ್.ಟಿ. ಸಮುದಾಯಗಳು ಎಂದು ನಂಬರ್ 38 ರಲ್ಲಿ ನಾಯಕ ನಂತರ ಬ್ರಾಕೆಟ್ ನಲ್ಲಿ ಪರಿವಾರ ಮತ್ತು ತಳವಾರ ಒಳಗೊಂಡು ಎಂದು ಸೇರಿಸಲು ಪ್ರಸ್ತಾವನೆ ಇದೆ. ನಂಬರ್ 50 ರಲ್ಲಿ ಹಿಂದೆ 2002 ರಲ್ಲಿ ಸಿದ್ದಿ ಜನಾಂಗವನ್ನು ಉತ್ತರಕನ್ನಡಕ್ಕೆ ಸೀಮಿತವಾಗಿ ಸೇರಿಸಲಾಗಿತ್ತು ಈಗ ಅದನ್ನು ಬೆಳಗಾವಿ ದಾರವಾಡದ ಸಿದ್ದಿ ಜನಾಂಗಕ್ಕೂ ಅನ್ವಯಿಸುವಂತೆ ಪ್ರಸ್ತಾವನೆ ಇದೆ.

**ಅನುಭಂದ-32:-** ಬೋವಿ (ಬೆಸ್ತರಲ್ಲದವರು) (bovi (non-besta)) ಮಾತ್ರ ಎಸ್.ಸಿ ಪಟ್ಟಿಯಲ್ಲಿ 2015 ರಲ್ಲಿ ಸೇರ್ಪಡೆ ಮಾಡಲಾಗಿದ್ದು ಕೇಂದ್ರ ಸರ್ಕಾರದ ಓ.ಬಿ.ಸಿ ಪಟ್ಟಿಯಂತೆ ಅದರಲ್ಲಿ ಇತರೆ ಬೋವಿ ಜನರನ್ನು ಉಳಿಸಿಕೊಂಡು (bovi (non-besta)) ರನ್ನು ಹೊರತುಪಡಿಸಿ ಎಂದು ತಿದ್ದುಪಡಿ ಮಾಡಿದ್ದಾರೆ. ಆದರೆ ಈಗಲೂ ಕಲ್ಲುಒಡ್ಡಾರ್ ಮತ್ತು ಮಣ್ಣು ಒಡ್ಡಾರ್

ಓ.ಬಿ.ಸಿ ಲಿಸ್ಟ್ 192 ನೇ ನಂಬರಿನಲ್ಲಿ ಮುಂದುವರಿದಿದ್ದರೆ,[1] ಅವರನ್ನು 2015 ರ ತಿದ್ದುಪಡಿಯಲ್ಲಿ ಎಸ್.ಸಿ ಪಟ್ಟಿಯಲ್ಲಿ ಸೇರಿಸಲಾಗಿದೆ. ಇಂತಹ ಅವಾಂತರಗಳ ಪರಿಣಾಮ ಪಿ.ಟಿ.ಸಿ.ಎಲ್ ಪ್ರಕರಣಗಳ ಮೇಲೆ ಹೇಗೆ ಅರ್ಥೈಸುವುದು.?

**ಅನುಭಂದ-33:-** 1986 ಮತ್ತು 1987 ರಲ್ಲಿ ಕರ್ನಾಟಕ ಸರ್ಕಾರದ ಸುತ್ತೋಲೆಯನ್ನು ಹೊರಡಿಸಿ ಬೇಡ, ನಾಯಕ ವಾಲ್ಮೀಕಿ, ಪರಿವಾರ, ತಳವಾರ, ಕುರುಬ ಇತರೆ ಸಮುದಾಯಗಳನ್ನು ನಾಯಕ ಜಾತಿಯ ಸಮಾನಾಂತರ ಜಾತಿಗಳೆಂದು ಘೋಷಣೆಯ ನಿರೀಕ್ಷೆಯಲ್ಲಿ ಜಾತಿ ಪ್ರಮಾಣಪತ್ರಗಳನ್ನು ನೀಡಲು ಆದೇಶಿಸಲಾಗಿದೆ. ಆದರೆ ಅನುಭಂದ 25 ರಲ್ಲಿ ಸದರಿ ಜಾತಿಗಳನ್ನು ಸಮಾನಾಂತರ ಜಾತಿ ಎಂದು ಸಂವಿಧಾನ ತಿದ್ದುಪಡಿ ಆಗಿಲ್ಲ. ಅದನ್ನು 19-04-1991 ರಿಂದ ಜಾರಿಗೆ ತರಲಾಗಿದೆ. ಇಂತಹ ಸರ್ಕ್ಯುಲರ್ ನಿಂದ ಕೊಟ್ಟಂತಹ ಜಾತಿ ಪ್ರಮಾಣಪತ್ರಗಳನ್ನು ಸೌಲಭ್ಯ ಪಡೆಯುವುದಕ್ಕೆ ವಿನಿಯೋಗವಾಗಿದ್ದರೆ ಯಾರ ತಕರಾರು ಇರುವುದಿಲ್ಲ. ಆದರೆ 1991 ಕ್ಕೆ ಮುಂಚೆ ಕ್ರಯ ಆಗಿರುವ ಪ್ರಕರಣಗಳಿಗೂ ಇದು ಅನ್ವಯಿಸಿ ನಡೆಸಿರುವ ಪ್ರಕರಣಗಳ ಕತೆ ಹೇಗೆ.? ಇಂತಹ ಸುತ್ತೋಲೆ ಲೋಪವನ್ನು ಹಿಂಪಡೆದಿರುವ ಸುತ್ತೋಲೆಯೂ ಲಗತ್ತಿಸಿದೆ.

**ಅನುಭಂದ-34:-** 1971 ರಲ್ಲಿ ಇದ್ದ ಎಸ್.ಟಿ ಜನಸಂಖ್ಯೆಗೂ 1981 ರಲ್ಲಿ ಇದ್ದ ಜನಸಂಖ್ಯೆಗೂ ಅತೀವವಾಗಿ ಹೆಚ್ಚಾಗಿರುವ ಬಗ್ಗೆ ಕಳವಳ ವ್ಯಕ್ತಪಡಿಸಿ ಕರ್ನಾಟಕ ಸರ್ಕಾರ ಸುತ್ತೋಲೆಯನ್ನು ಹೊರಡಿಸಿ ಇದಕ್ಕೆ ಕಾರಣ ಪ್ರಾಂತ್ಯಾವಾರು 1956 ರಲ್ಲಿ ಇದ್ದ ಎಸ್.ಟಿ ಪಟ್ಟಿಯನ್ನು 1976 ರಲ್ಲಿ ಮಾರ್ಪಡಿಸಿರುವುದಕ್ಕೆ ಎಂದು ಹೇಳುತ್ತ 1956 ರಲ್ಲಿ ಎಸ್.ಟಿ ಅಲ್ಲದವರು 1976 ರ ನಂತರ ಎಸ್.ಟಿ ಜಾತಿ ಪತ್ರವನ್ನು ಪಡೆಯಲು ಬರುವುದಿಲ್ಲ ಎಂದಿದ್ದಾರೆ. 1981 ರಲ್ಲೇ ಸರ್ಕ್ಯುಲರ್ ಹೊರಡಿಸಿ ಪರಿಶಿಷ್ಟ ಪಂಗಡದ ಸುಳ್ಳು ಪ್ರಮಾಣಪತ್ರಗಳ ಬಗ್ಗೆ ಕಳವಳ ವ್ಯಕ್ತವಾಗಿದೆ. ಕೆಲವು ಜಾತಿಗಳು ಪ್ರಾಂತ್ಯಕ್ಕೆ

---

[1] http://www.ncbc.nic.in/User-Panel/CentralListStateView.aspx

ಸೀಮಿತತೆ ಬಗ್ಗೆ ಸರ್ಕ್ಯುಲರ್ ಒಂದು ಸ್ಪಷ್ಟಪಡಿಸಿದೆ. ಇಂತಹ ನ್ಯೂನ್ಯತೆಯಿಂದ ಹೊರ ಬಂದ ಜಾತಿ ಪ್ರಮಾಣಪತ್ರಗಳಿಂದ ಪಿ.ಟಿ.ಸಿ.ಎಲ್ ಪ್ರಕರಣಗಳ ಕತೆ ಹೇಗೆ.?

**ಅನುಭಂದ-35:-** ಜಾತಿ ಪ್ರಮಾಣಪತ್ರಗಳನ್ನು ಅನೇಕ ನ್ಯೂನ್ಯತೆಗಳಿಂದ ನೀಡಲಾಗಿದೆ ಎಂದು 1987 ರಿಂದ 2001 ರವರೆಗೆ ಕಳವಳ ವ್ಯಕ್ತವಾಗಿದೆ. ಇಂತಹ ನ್ಯೂನ್ಯತೆಯಿಂದ ಹೊರ ಬಂದ ಜಾತಿ ಪ್ರಮಾಣಪತ್ರಗಳಿಂದ ಪಿ.ಟಿ.ಸಿ.ಎಲ್ ಪ್ರಕರಣಗಳ ಕತೆ ಹೇಗೆ.?

**ಅನುಭಂದ-36:-** ವಿಚಾರಣೆಯನ್ನು ಹೇಗೆ ಪಾರದರ್ಶಕವಾಗಿ ನಡೆಸಬೇಕು ಎಂಬ ಬಗ್ಗೆ ಕರ್ನಾಟಕ ಹೈಕೋರ್ಟ್ ನಿರ್ದರ್ಶನದ ಮೇರೆಗೆ ಸರ್ಕ್ಯುಲರ್ ಹೊರಡಿಸಿದ್ದು ಅದನ್ನು ಮಾನ್ಯ ನ್ಯಾಯಾಲಯದ ಪ್ರಕರಣವೊಂದರಲ್ಲಿ ಉಲ್ಲೇಕಿಸಲಾಗಿದೆ.[1]

---

[1] ಲಕ್ಷ್ಮೀವನ್ ವಿ. ಜಿಲ್ಲಾಧಿಕಾರಿಗಳು – ಐ.ಎಲ್.ಆರ್ 2015 ಕರ್ 3105

ತಿಳಿದದ್ದನ್ನು ಇನ್ನೊಬ್ಬರಿಗೆ ಹಂಚುವುದು ಭಗವಂತನಿಗೆ ಅತ್ಯಂತ ಪ್ರಿಯ. ಇನ್ನೊಬ್ಬರಿಗೆ ಹಂಚುವುದರಿಂದ ಹೆಚ್ಚಾಗುವ ಏಕಮೇವ ಸಂಪತ್ತು ಎಂದರೆ ಅದು ಜ್ಞಾನ.